# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಗೀತಾಶಾಸ್ತ್ರಿ

**ಮುಖಪುಟ :** ಜಮ್ಮು – ಕಾಶ್ಮೀರ್ ಶಾಸನ ಸಭಾಭವನ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಕಾಶ್ಮೀರದಲ್ಲಿ ಪರಿಸ್ಥಿತಿ ತೀರಾ ಹದಗೆಟ್ಟಿದೆ. ಗಡಿಯಲ್ಲಿ ಅತಿಕ್ರಮಣ ಸಂಭವಿಸುತ್ತಿರುವುದು, ಭಯೋತ್ಪಾದಕರ ದಾಳಿ, ಕಲ್ಲೆಸೆತ, ಭದ್ರತಾ ಪಡೆಯವರಿಂದ ಗೋಲಿಬಾರು, ಮುಂತಾದವುಗಳೇ ಅಲ್ಲಿಂದ ಬರುವ ಸುದ್ದಿ. ಪವಿತ್ರ ರಂಜಾನ್ ತಿಂಗಳಲ್ಲಿ ಭಾರತ ಸರಕಾರ ಶಾಂತಿ ಮಂತ್ರ ಜಪಿಸಿ ಕದನ ವಿರಾಮ ಘೋಷಿಸಿತಾದರೂ ಹಿಂಸಾಚಾರ ಮಾತ್ರ ನಿಲ್ಲಲಿಲ್ಲ. ಹಿರಿಯ ಪತ್ರಕರ್ತ ಶುಜಾತ್ ಬುಕಾರಿ ಈದ್ ಹಬ್ಬಕ್ಕೆ ಮೂರು ನಾಲ್ಕು ದಿನಗಳ ಹಿಂದೆ ಜರುಗಿದ ಹತ್ಯೆಯೇ ಅದಕ್ಕೆ ಸಾಕ್ಷಿ. ಕಳೆದ ಹತ್ತು ವರ್ಷಗಳಿಂದ ಅವರು ಶ್ರೀನಗರದಿಂದ 'ದಿ ರೈಸಿಂಗ್ ಕಾಶ್ಮೀರ್' ಎಂಬ ಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದರು. ಕಾಶ್ಮೀರ ಸಮಸ್ಯೆಗೆ ಶಾಂತಿಯುತ ಪರಿಹಾರ ಮಾರ್ಗ ಪ್ರತಿಪಾದಿಸುತ್ತಿದ್ದ ಬುಕಾರಿ ಪ್ರತ್ಯೇಕವಾದಿ ಭಯೋತ್ಪಾದಕರ ಗುಂಡಿಗೆ ಬಲಿಯಾದರು. ಮೃತರಿಗೆ 'ಹೊಸತು' ನಮನ ಸಲ್ಲಿಸುತ್ತದೆ. ಅವರ ಕುಟುಂಬದವರಿಗೆ ಸಾಂತ್ವನ ಹೇಳ ಬಯಸುತ್ತದೆ.

ನಿಲ್ಲದ ಹಿಂಸಾಚಾರಕ್ಕೆ ಬಲಿಯಾಗುವವರೆಲ್ಲ ಅಮಾಯಕರೇ. ಒಂದು ಕಡೆ ಭಯೋತ್ಪಾದಕರ ಅಟ್ಟಹಾಸ, ಇನ್ನೊಂದು ಕಡೆ ಭದ್ರತಾ ಪಡೆಗಳ ಕಾರ್ಯಾಚರಣೆ, ಇವು ಕಾಶ್ಮೀರಿಗಳ ಜೀವನ ಕ್ರಮವಾಗಿ ಬಿಟ್ಟಿದೆ. ಈ ಎರಡೂ ದಾಳಿಗಳಿಗೆ ಬಲಿಯಾಗಿರುವವರ ಸಂಖ್ಯೆ ಸಹಸ್ರಾರು. ಕಳೆದ ಮೂರು ವರ್ಷಗಳಿಂದ ಭಾಜಪ – ಪಿಡಿಪಿ ಸಂಯುಕ್ತ ಸರಕಾರ ಅಸ್ತಿತ್ವದಲ್ಲಿದೆ. ಕೇಂದ್ರ ಸರಕಾರದ ಬಿಗಿ ಧೋರಣೆಯಿಂದಾಗಿ ಪರಿಸ್ಥಿತಿ ವಿಕೋಪಕ್ಕೆ ತಲಪಿದೆ. ಈಚೆಗೆ ವಿಶ್ವಸಂಸ್ಥೆಯ ಮಾನವಹಕ್ಕುಗಳ ಆಯೋಗ ಕಾಶ್ಮೀರದಲ್ಲಿ ನಡೆಯುತ್ತಿರುವ ಮಾನವ ಹಕ್ಕುಗಳ ವ್ಯಾಪಕ ಉಲ್ಲಂಘನೆ ಕುರಿತು ವರದಿ ಸಲ್ಲಿಸಿದೆ. ಭಾರತಕ್ಕೆ ಸೇರಿರುವ ಕಾಶ್ಮೀರ ಹಾಗೂ ಪಾಕ್ ಆಕ್ರಮಿತ ಪ್ರದೇಶ ಎರಡೂ ಕಡೆಯವರನ್ನೂ ಆಯೋಗ ತರಾಟೆಗೆ ತೆಗೆದುಕೊಂಡಿದೆ. ಈ ಭಾಗದಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ ಕುರಿತಾಗಿ ಇಂಥ ವರದಿ ಇದೇ ಮೊದಲ ಬಾರಿಯದೇನಲ್ಲ. ಭಾರತ ಮತ್ತು ಪಾಕಿಸ್ತಾನ ಸರಕಾರಗಳು ಮಾತ್ರ ಇಂಥ ವರದಿಗಳಿಂದ ಮುಜುಗರಕ್ಕೆ ಒಳಗಾಗುವುದಿಲ್ಲ. ಅದನ್ನು ಕಡೆಗಣಿಸುತ್ತವೆ. ಕಾಶ್ಮೀರ ಸಮಸ್ಯೆಗೆ ಇರುವ ಪರಿಹಾರ ಮಾರ್ಗ ಒಂದೇ. ಅದು ಶಾಂತಿಯುತವಾದ ಮಾತುಕತೆ. ಪ್ರತ್ಯೇಕವಾದಿಗಳನ್ನು ಒಳಗೊಂಡಂತೆ ಎಲ್ಲ ವಿಭಾಗದ ಜನರೊಂದಿಗೂ ಯುಕ್ತವಾದ ಸಂವಾದದಿಂದ ಮಾತ್ರ ಅದನ್ನು ಸಾಧಿಸಬಹುದು.

ಭಾಜಪ ನೇತೃತ್ವದ ಮೋದಿ ಸರಕಾರದಲ್ಲಿ ಸರಕಾರಿ ಉದ್ಯಮಗಳ ಖಾಸಗೀಕರಣ ಭರ್ಜರಿಯಾಗಿ ನಡೆದಿದೆ. ಏರ್ ಇಂಡಿಯಾ ವಿಮಾನ ಸಂಸ್ಥೆಯನ್ನು ಮಾರಾಟ ಮಾಡಲು ಸರಕಾರ ಸಜ್ಜಾಗಿದೆ. ಶೇಕಡ ೭೦ರಷ್ಟು ಷೇರು ಬಂಡವಾಳವನ್ನು ಖಾಸಗಿಯರಿಗೆ ಮಾರಾಟ ಮಾಡಲು ಸರಕಾರ ನಿರ್ಧರಿಸಿದೆ. ಕೇಂದ್ರ ಸರಕಾರ ವಹಿಸಿಕೊಂಡಾಗಿನಿಂದಲೂ ಈ ವಿಮಾನಯಾನ ಸಂಸ್ಥೆ ನಷ್ಟವನ್ನೇ ಅನುಭವಿಸುತ್ತಿದೆ. ಹಿಂದೆ ಅಧಿಕಾರದಲ್ಲಿದ್ದ ವಾಜಪೇಯಿ ಸರಕಾರ ಸಾರ್ವಜನಿಕ ಉದ್ಯಮಗಳನ್ನು ಖಾಸಗಿಯವರಿಗೆ ಮಾರಾಟ ಮಾಡಲು ಒಂದು ಸಚಿವಾಲಯವನ್ನೇ ನಿರ್ಮಾಣ ಮಾಡಿತ್ತು. ಮೋದಿ ಸರಕಾರ ಅದೇ ನೀತಿಯನ್ನು ಈಗ ಮಗುಮ್ಮಾಗಿ ನೆರವೇರಿಸುತ್ತಿದೆ. ಸರಕಾರದ ಅಧೀನದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಯಾವಾಗ ಖಾಸಗೀಕರಣಗೊಳ್ಳುವುದೋ ನೋಡಬೇಕು. ಈ ಬ್ಯಾಂಕುಗಳು ಈಗಾಗಲೇ ಲಾಭದಾಯಕವಲ್ಲದ ಸಾಲದ ಹೊರೆಯಿಂದ ನರಳುತ್ತಿವೆ. ಪಡೆದುಕೊಂಡ ಸಾಲವನ್ನೂ – ಇದು ಸಾವಿರಾರು ಕೋಟಿಗಳ ವ್ಯವಹಾರ – ಮರುಪಾವತಿಸದೆ ವಿದೇಶಗಳಲ್ಲಿ ನೆಲೆ ಕಂಡುಕೊಳ್ಳುವುದು ಮೋದಿ ಸರಕಾರದ ಆಡಳಿತದಲ್ಲಿ ಮಾಮೂಲಾಗುತ್ತಿದೆ. ಕಿಂಗ್‌ಫಿಷರ್‌ನ ವಿಜಯಮಲ್ಯ, ವಜ್ರ ವ್ಯಾಪಾರಿ ನೀರವ್ ಮೋದಿ ಅದಕ್ಕೆ ಉದಾಹರಣೆ. ಇನ್ನು ಸಣ್ಣಪುಟ್ಟ ಉದ್ಯಮಿಗಳ ವಿಚಾರದಲ್ಲೂ ಅಂಥದ್ದೇ ಆಗಿದೆ. ಸರಕಾರ ಈಚೆಗೆ ಸುಮಾರು ಒಂದು ಲಕ್ಷ ಕೋಟಿ ಅಂಥ ವಸೂಲಾಗದ ಸಾಲವನ್ನು ಮನ್ನಾ ಮಾಡಲು ಮುಂದಾಗಿದೆ. ಇಂಥವೆಲ್ಲ ಈಗ ಸಹಜವಾದ ಸಂಗತಿಗಳಾಗುತ್ತಿವೆ. ಬಡರೈತರ ಸಾಲ ಮನ್ನಾ ಮಾಡುವುದಕ್ಕೆ ಮಾತ್ರ ಸರಕಾರದ ಬಳಿ ಹಣವಿಲ್ಲ. ಹೀಗಿದೆ ವ್ಯವಹಾರ.

ಈಚೆಗೆ ಕೇಂದ್ರ ಸರಕಾರ ಇನ್ನೊಂದು ಹೆಜ್ಜೆ ಮುಂದಿರಿಸಿದೆ. ಅದು ಐತಿಹಾಸಿಕ

(೬ನೇ ಪುಟಕ್ಕೆ )




ಸಂಪುಟ-೧೯ ಸಂಚಿಕೆ-೧೨ ಜುಲೈ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಕಾಶ್ಮೀರ ಕಣಿವೆ ಮೇಲೆ ಕಾರ್ಮೋಡಗಳು

**ಜ**ಮ್ಮು–ಕಾಶ್ಮೀರದಲ್ಲಿನ ಚುನಾಯಿತ ಸರಕಾರ ಪತನಗೊಂಡಿದೆ. ಆ ಮೂಲಕ ಜನಕೇಂದ್ರಿತ ರಾಜಕಾರಣದ ಬದಲಿಗೆ ನೆಲಕೇಂದ್ರಿತ ರಾಜಕಾರಣ ಆರಂಭವಾಗಿದೆ. ಒಂದು ದೇಶವೆಂದರೆ ಕೇವಲ ನೆಲ, ಗುಡ್ಡ, ಬೆಟ್ಟ, ಗಡಿರೇಖೆಗಳಲ್ಲ. ಆ ನೆಲದಲ್ಲಿ ವಾಸಿಸುವ ಜನ, ಜನವೇ ಇಲ್ಲದ ಮಂಗಳಲೋಕವನ್ನು ದೇಶ ಎಂದು ಕರೆಯುವುದಿಲ್ಲ. ಮಂಗಳ ಗ್ರಹದ ಮೇಲೆ ಮನುಷ್ಯ ಹೋಗುವ ಪ್ರಯತ್ನ ಮಾಡುತ್ತಿದ್ದಾನೆ. ಮನುಷ್ಯ ಅಲ್ಲಿಗೆ ಹೋದರೆ ಅವನ ದ್ವೇಷ, ಮತ್ಸರಗಳ ಸಮೇತ ಹೋಗುತ್ತಾನೆ. ಮಂಗಳ ಗ್ರಹ ಅಥವಾ ಮತ್ತಿನ್ನಾವುದೋ ಗ್ರಹ ಮನುಷ್ಯ ವಾಸಿಸಲು ಯೋಗ್ಯ ಸ್ಥಳವೆಂದು ಸಾಬೀತಾದರೆ ಅಲ್ಲಿಯೂ ಗಡಿರೇಖೆಗಳು ಮೂಡುತ್ತವೆ, ಸಂಘರ್ಷಗಳು ಆರಂಭವಾಗುತ್ತವೆ. ಅಂತರಿಕ್ಷದಲ್ಲಿಯೂ ಅಮೆರಿಕದ ಪ್ರಾಬಲ್ಯ ಸಾಧಿಸಲು ಅಧ್ಯಕ್ಷ ಟ್ರಂಪ್ ಈಗಾಗಲೇ ಬಾಹ್ಯಾಕಾಶ ಪಡೆಯನ್ನು ತಮ್ಮ ಸೇನಾ ಘಟಕದಲ್ಲಿ ಆರಂಭಿಸುತ್ತಿದ್ದಾರೆ. ಭೂಮಿಯ ಮೇಲಿನ ಗಡಿರೇಖೆಗಳು ರಕ್ತಸಿಕ್ತವಾಗಿವೆ. ಇದಕ್ಕೆ ಮನುಷ್ಯನ ಸ್ವಾರ್ಥ, ದುರಾಸೆ, ಸಾಮ್ರಾಜ್ಯ ಸ್ಥಾಪನೆಯ ದುರಾಲೋಚನೆಗಳೇ ಕಾರಣ. ಆ ಸ್ವಾರ್ಥ, ದುರಾಸೆಗೆ ಧರ್ಮ, ರಾಷ್ಟ್ರೀಯತೆ, ಭಾಷೆ, ಜನಾಂಗೀಯ ಬಣ್ಣ ಬಳಿಯಲಾಗುತ್ತದೆ. ಆಗ ಜನರನ್ನು ಬಲಿಕೊಟ್ಟು ನೆಲ ಪಡೆಯುವ ಕ್ರೌರ್ಯ ಆರಂಭವಾಗುತ್ತದೆ. ೮೬,೦೦೦ ಚದರ ಮೈಲಿಯ ಕಾಶ್ಮೀರ ಕಣಿವೆಯಲ್ಲಿ ಈವರೆಗೆ ೪೭,೦೦೦ ಜನ ಬಲಿಯಾಗಿದ್ದಾರೆ. ಸಾವಿರ ಸಂಖ್ಯೆಯಲ್ಲಿ ಜನ ಕಾಣೆಯಾಗಿದ್ದಾರೆ. ಸಾವಿರಾರು ಜನ ನಿರ್ವಸಿತರಾಗಿ ವಲಸೆಹೋಗಿದ್ದಾರೆ. ಧರ್ಮ ಮತ್ತು ಜನಾಂಗದ ಹೆಸರಿನಲ್ಲಿ ನೆಲಕ್ಕಾಗಿ ನಡೆದ ಈ ಸಂಘರ್ಷ ಕೇವಲ ಕಾಶ್ಮೀರ ಕಣಿವೆಯಲ್ಲಲ್ಲ ಜಗತ್ತಿನ ಹಲವಾರು ದೇಶಗಳಲ್ಲಿ ನಡೆಯುತ್ತಿದೆ. ಮನುಷ್ಯನೇ ಹುಟ್ಟುಹಾಕಿದ ಧರ್ಮಗಳು, ಗಡಿರೇಖೆಗಳು ಮನುಷ್ಯನನ್ನೇ ಬೇಟೆಯಾಡುತ್ತಿವೆ.

ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಜೊತೆಗೂಡಿ ಹೋರಾಟ ಮಾಡಿದ ಭಾರತೀಯರು ಸ್ವಾತಂತ್ರ್ಯ ಪಡೆಯುವಾಗ ಎರಡು ದೇಶದವರಾದರು. ಭಾರತ ಮತ್ತು ಪಾಕಿಸ್ತಾನಗಳಾಗಿ ವಿಂಗಡನೆಯಾದ ಈ ಎರಡೂ ದೇಶಗಳ ತಳಪಾಯದಲ್ಲಿ ಜನರ ರಕ್ತ–ಮಾಂಸ ತುಂಬಿತು. ೧೯೪೭ರಿಂದಲೇ ಕಾಶ್ಮೀರ ಕಣಿವೆಯಲ್ಲಿ ಪಾಲು ಪಡೆಯಲು ನಡೆದ ಈ ಸಂಘರ್ಷ ಇಂದಿಗೂ ಮುಂದುವರೆದಿದೆ. ಕಾಶ್ಮೀರದ ಮಹಾರಾಜಾ ಹರಿಸಿಂಗ್ ಮತ್ತು ಭಾರತದ ಪ್ರಧಾನಿ ಜವಾಹರಲಾಲ್ ನೆಹರೂ ಅವರ ನಡುವಿನ ಒಪ್ಪಂದದಿಂದ ಕಾಶ್ಮೀರ ಭಾರತದ ಭಾಗವಾದರೆ ಈ ಒಪ್ಪಂದವೇ ಅಸಿಂಧು ಎಂದಿತು ಪಾಕಿಸ್ತಾನ. ಅದರ ಪರಿಣಾಮ ಎರಡೂ ದೇಶಗಳ ನಡುವೆ ಯುದ್ಧಗಳಾದವು. ಈಗ ಕಾಶ್ಮೀರ ಕಣಿವೆಯ ಪ್ರತಿಶತ ೪೫ ಭಾಗ ಭಾರತದ ನಿಯಂತ್ರಣದಲ್ಲಿದ್ದರೆ ಶೇ. ೩೫ ಭಾಗ ಪಾಕಿಸ್ತಾನದ ನಿಯಂತ್ರಣದಲ್ಲಿದೆ. ಇನ್ನುಳಿದ ಶೇ. ೨೦ ಭಾಗ ಚೀನಾದ ನಿಯಂತ್ರಣದಲ್ಲಿದೆ.

ಭಾರತ ಮತ್ತು ಪಾಕಿಸ್ತಾನ ತಮ್ಮ ದಾಯಾದಿ ಸಂಘರ್ಷಕ್ಕೆ ಕಾಶ್ಮೀರವನ್ನು ಕೇಂದ್ರವಾಗಿಟ್ಟುಕೊಂಡಿವೆ. ೧೯೪೭ ಅಕ್ಟೋಬರ್‌ನಿಂದಲೇ ಆರಂಭವಾದ ಈ ಸಂಘರ್ಷ ಇಂದಿಗೂ ಮುಂದುವರೆದಿದೆ. ಅಂದು ಎರಡು ದೇಶಗಳ ನಡುವಿನ ಗಡಿ ಸಮಸ್ಯೆಯಾಗಿದ್ದರೆ ಇಂದು ಎರಡು ಧರ್ಮಗಳ ನಡುವಿನ ಸಂಘರ್ಷವಾಗಿ ಮಾರ್ಪಟ್ಟಿದೆ. ಇದಕ್ಕೆ ಎರಡೂ ದೇಶಗಳ ಆಡಳಿತ ವರ್ಗದ ನೀತಿಗಳು ಮುಖ್ಯ ಕಾರಣವಾಗಿವೆ. ಅಂದಿನಿಂದ ಇಂದಿನವರೆಗೆ ಯುದ್ಧಗಳಾಗಿವೆ. ಸೀಸ್ ಫಾಯರ್‌ಗಳಾಗಿವೆ. ಸರ್ಜಿಕಲ್ ಸ್ಟ್ರೈಕ್‌ಗಳಾಗಿವೆ. ವಿಶ್ವಸಂಸ್ಥೆಯ ವೇದಿಕೆಗಳಲ್ಲಿ ಚರ್ಚೆಗಳಾಗಿವೆ. ಸಿಮ್ಲಾ ಒಪ್ಪಂದದಿಂದ ಈ ವರ್ಷದ ರಂಜಾನ್ ಸಂದರ್ಭದ ಸೀಸ್‌ಫಾಯರ್ ವರೆಗೆ ಏನೆಲ್ಲ ಪ್ರಯತ್ನ ನಡೆದಿವೆ. ಭಾರತ ಮತ್ತು ಪಾಕಿಸ್ತಾನದ ಚುನಾಯಿತ ಅಧ್ಯಕ್ಷರುಗಳು ಕೂತು ಮಾತನಾಡಿದ್ದಾರೆ. ಪಾಕಿಸ್ತಾನದ ಅಧ್ಯಕ್ಷ ಪರ್‌ವೇಜ್ ಮುಶ್ರಫ್ ಮತ್ತು ಭಾರತದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರು (ಜುಲೈ ೧೪ರಿಂದ ೧೬, ೨೦೦೧) ಆಗ್ರಾದಲ್ಲಿ, ಇದೇ ನಾಯಕರು ಪಾಕಿಸ್ತಾನದ ಇಸ್ಲಾಮಾಬಾದ್‌ನಲ್ಲಿ (ಜನವರಿ ೪, ೨೦೦೪) ಕುಳಿತು ಮಾತನಾಡಿದರು. ನಂತರ ಪಾಕಿಸ್ತಾನ ಅಧ್ಯಕ್ಷ ಅಸಿಫ್ ಅಲಿ ಜರ್ದಾರಿ ಭಾರತಕ್ಕೆ ಪ್ರವಾಸ ಕೈಗೊಂಡು (ಏಪ್ರಿಲ್ ೮, ೨೦೧೨) ಅಂದಿನ ಪ್ರಧಾನಿ ಮನಮೋಹನ್ ಸಿಂಗ್ ಅವರ ಜೊತೆ ಮಾತನಾಡಿದರು. ನಮ್ಮ ಇಂದಿನ ಪ್ರಧಾನಿ ನರೇಂದ್ರ ಮೋದಿಯವರು ದೇಶಕ್ಕೂ ತಿಳಿಸದೆ ರಾಜತಾಂತ್ರಿಕ ನಿಯಮಗಳನ್ನು ಮೀರಿ ಪಾಕಿಸ್ತಾನದ ಅಧ್ಯಕ್ಷ ನವಾಜ ಷರೀಫ್ ಅವರ ಮನೆಗೆ ಹೋಗಿಬಂದರು. ಇನ್ನು ವಿದೇಶಾಂಗ ಮಂತ್ರಿಗಳು, ಅಧಿಕಾರಿಗಳು ಎರಡೂ ದೇಶಗಳಲ್ಲಿ ಕುಳಿತು ಮಾತನಾಡಿದ್ದಾರೆ. ಇಷ್ಟೆಲ್ಲ ಪ್ರಯತ್ನಗಳಾಚೆಯೂ ಕಾಶ್ಮೀರ ವಿವಾದ ಜೀವಂತವಾಗಿರಲು ಕಾರಣವೇನು? ಮತಾಂಧ ರಾಜಕಾರಣ. ಎರಡೂ ದೇಶಗಳಲ್ಲಿನ ಮತಾಂಧ ಶಕ್ತಿಗಳು ಪ್ರಭುತ್ವಗಳನ್ನು ಧರ್ಮದ ಹೆಸರಿನಲ್ಲಿ ನಿಯಂತ್ರಿಸುವ ಕೆಲಸವನ್ನು ಮಾಡುತ್ತಿವೆ. ಪಾಕಿಸ್ತಾನದ ಸ್ಥಾಪನೆಯೇ ಧರ್ಮಾಧಾರಿತ ನೆಲೆಯಲ್ಲಿ ಆಗಿದೆ. ಅದಕ್ಕಿಂತ ಮುಂಚೆ ಸ್ವಾತಂತ್ರ್ಯಪೂರ್ವ (೧೯೨೫)ದಲ್ಲಿ ಸ್ಥಾಪನೆಗೊಂಡ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಮತ್ತು ಹಿಂದೂ ಮಹಾಸಭಾಗಳ ಉದ್ದೇಶವೇ ಧರ್ಮಾಧಾರಿತ ಪ್ರಭುತ್ವವನ್ನು ಸ್ಥಾಪಿಸಿ (ಹಿಟ್ಲರ್ ಪ್ರಭಾವ

ಮತ್ತು ಮಾದರಿ) ಅದನ್ನು ಬಂಡವಾಳಶಾಹಿ ಶಕ್ತಿಗಳ ಹಿತಾಸಕ್ತಿಗಳಿಗನುಗುಣವಾಗಿ ನಡೆಸುವುದಾಗಿತ್ತು. ೧೯೫೨ ಸ್ವತಂತ್ರ ಭಾರತದ ಪ್ರಥಮ ಚುನಾವಣೆಗೆ ಕೇವಲ ಒಂದು ವರ್ಷ ಮೊದಲು, ೧೯೫೧ರಲ್ಲಿ ಆರ್.ಎಸ್.ಎಸ್. ಮತ್ತು ಹಿಂದೂ ಮಹಾಸಭಾದ ರಾಜಕೀಯ ಪಕ್ಷವಾಗಿ ಜನಸಂಘವನ್ನು ಕಡು ಹಿಂದುತ್ವವಾದಿ ಶ್ಯಾಂಪ್ರಸಾದ ಮುಖರ್ಜಿಯವರ ನಾಯಕತ್ವದಲ್ಲಿ ಸ್ಥಾಪಿಸಲಾಯಿತು. ದೇಶದ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿಯೇ ಭಾರತದ ಸಂವಿಧಾನದ ಆಶಯಗಳಿಗೆ ವ್ಯತಿರಿಕ್ತವಾದ 'ಹಿಂದೂ, ಹಿಂದಿ, ಹಿಂದುಸ್ತಾನ' ಎಂಬುದು ಅದರ ಘೋಷಣೆಯೇ ಆಗಿತ್ತು. ಆದರೆ ಜನಸಂಘದ ಮತಾಂಧ ರಾಜಕಾರಣಕ್ಕೆ ಅಂದು ಮಾನ್ಯತೆ ಸಿಗಲಿಲ್ಲ. ಮೊದಲ ಲೋಕಸಭಾ ಚುನಾವಣೆಯಲ್ಲಿ ಆ ಪಕ್ಷಕ್ಕೆ ದೊರೆತದ್ದು ಕೇವಲ ಮೂರು ಸ್ಥಾನ. ಆದರೆ ಮತಾಂಧ ರಾಜಕಾರಣವನ್ನು ಬೆಳೆಸುತ್ತಲೇ ಇಂದು ಅಧಿಕಾರಕ್ಕೆ ಬಂದಿದೆ.

ಪಾಕಿಸ್ತಾನ ಸ್ವತಂತ್ರವಾಗುತ್ತಲೇ ಇಸ್ಲಾಮಿಕ್ ಪ್ರಭುತ್ವ ಎಂದು ಘೋಷಿಸಿಕೊಂಡಿತು. ೧೯೪೭ರಿಂದಲೇ ಅದು ಕಾಶ್ಮೀರದಲ್ಲಿ ಬಹುಸಂಖ್ಯಾತ ಪ್ರಜೆಗಳು ಮುಸ್ಲಿಮ್‌ರಾಗಿದ್ದರಿಂದ ರಾಜಾ ಹರಿಸಿಂಗ್ ಮುಸ್ಲಿಮ್‌ರನ್ನು ಪ್ರತಿನಿಧಿಸುವುದಿಲ್ಲ, ಕಾಶ್ಮೀರ ಪ್ರದೇಶ ಪಾಕಿಸ್ತಾನಕ್ಕೆ ಸೇರಬೇಕೆಂದು ತಕರಾರನ್ನು ಆರಂಭಿಸಿತು. ೧೯೮೯ರವರೆಗೆ ಕಾಶ್ಮೀರ ವಿಷಯ ಎರಡು ರಾಷ್ಟ್ರಗಳ ನಡುವಿನ ಗಡಿ ತಂಟೆಯಾಗಿತ್ತು. ಆದರೆ ೧೯೮೯ರಲ್ಲಿ ಹಿಜಬುಲ್ ಮುಜಾಹಿದ್ದೀನ್‌ನಂಥ ಉಗ್ರವಾದಿ ಸಂಘಟನೆ ಸ್ಥಾಪನೆಗೊಂಡು ಕಾಶ್ಮೀರ ವಿಷಯವನ್ನು ಮತೀಯ ನೆಲೆಯಿಂದ ಮುನ್ನೆಲೆಗೆ ತಂದಿತು. ಪಾಕಿಸ್ತಾನದಲ್ಲಿ ಇಂಥ ಮತಾಂಧ ಸಂಘಟನೆಗಳ ಹುಟ್ಟು ಮತ್ತು ಬೆಳವಣಿಗೆಗೆ ಅಮೆರಿಕದ ಗುಪ್ತಚರ ಸಂಸ್ಥೆ ಸಿಐಎ ಕಾರಣ. ಅಲಿಪ್ತ ನೀತಿ ಅನುಸರಿಸುತ್ತಿದ್ದ ಭಾರತ ಮತ್ತು ಸೋವಿಯತ್ ಯೂನಿಯನ್‌ನ ಬೆಂಬಲ ಪಡೆದಿದ್ದ ಅಫ್ಘಾನಿಸ್ತಾನ್ ಮೇಲೆ ದಾಳಿ ಮಾಡಿ ಪ್ರಭುತ್ವಗಳನ್ನು ಅಸ್ಥಿರಗೊಳಿಸಲೆಂದು ಪಾಕಿಸ್ತಾನದಲ್ಲಿ ಭಯೋತ್ಪಾದಕರಿಗೆ ತರಬೇತಿ ಕೇಂದ್ರಗಳನ್ನೇ ಆರಂಭಿಸಿತು. ಆಫ್ಘಾನಿಸ್ತಾನ್‌ದಲ್ಲಿ ಯಶಸ್ವಿಯೂ ಆಯಿತು. ಭಾರತದಲ್ಲಿ ಅಂದು ಸಾಧ್ಯವಾಗಲಿಲ್ಲ. ಆದರೆ ಅವರು ಹುಟ್ಟುಹಾಕಿದ ಧಾರ್ಮಿಕ ಭಯೋತ್ಪಾದನೆಯ ಬೀಜಗಳು ವಿವಿಧ ವೃಕ್ಷಗಳಾಗಿ ಬೆಳೆದುನಿಂತಿವೆ. ಪಾಕಿಸ್ತಾನಕ್ಕೂ, ಅಮೆರಿಕಕ್ಕೂ ತಿರುಗುಬಾಣಗಳಾಗಿವೆ. ಈಗ ಭಾರತದಲ್ಲಿ ಹಿಂದುತ್ವವಾದಿ ಮತಾಂಧರು, ಪಾಕಿಸ್ತಾನದಲ್ಲಿ ಇಸ್ಲಾಂ ಮೂಲಭೂತವಾದಿ ಉಗ್ರಗಾಮಿಗಳು ಎರಡೂ ಪ್ರಭುತ್ವಗಳನ್ನು ನಿಯಂತ್ರಿಸುತ್ತಿದ್ದಾರೆ. ಅವರ ಅಣತಿಯ ಮೇಲೆ ಮತಾಂಧ ರಾಜಕಾರಣ ಚಾಲ್ತಿಯಲ್ಲಿದೆ.

ಕಾಶ್ಮೀರದಲ್ಲಿ ೨೦೧೫ರ ವಿಧಾನಸಭಾ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಬಹುಮತ ದೊರಕದೇ ಇದ್ದಾಗ ಬಿ.ಜೆ.ಪಿ. ಮುಫ್ತಿ ಮಹಮ್ಮದ್ ಸಯೀದ್ ಅವರ ಪಿ.ಡಿ.ಪಿ. ಜೊತೆ ಸೇರಿ ಸರಕಾರ ಮಾಡಿತು. ಇದೇ ಪಿ.ಡಿ.ಪಿ.ಯನ್ನು ಆಝಾದ್ ಕಾಶ್ಮೀರದ ಫಾರೂಕ್ ಹೈದರ್‌ಗೆ ಹೋಲಿಸಿ, ಭಯೋತ್ಪಾದಕರ ಪರವಾಗಿದ್ದಾರೆಂದು ಆರೋಪಿಸಿತ್ತು. ಆದರೆ ನ್ಯಾಷನಲ್ ಕಾನ್ಫರೆನ್ಸ್ ಮತ್ತು ಕಾಂಗ್ರೆಸ್ ಪಕ್ಷಗಳನ್ನು ಅಧಿಕಾರದಿಂದ ದೂರವಿಡಲು ಪಿ.ಡಿ.ಪಿ. ಜೊತೆ ಸೇರಿಕೊಂಡು ಮೂರು ವರ್ಷ ಆಡಳಿತ ಮಾಡಿತು. ಈ ಮೂರು ವರ್ಷಗಳಲ್ಲಿ ಭಯೋತ್ಪಾದನೆ ನಿಯಂತ್ರಣ, ಶಾಂತಿ ಸ್ಥಾಪನೆಯ ಕುರಿತ ಪ್ರಧಾನಿ ಮೋದಿಯವರು ಕೊಟ್ಟ ಭರವಸೆ ಜಾರಿಗೆ ಬರಲಿಲ್ಲ. ಅದು ಸಾಧ್ಯವಾಗುವುದಿಲ್ಲ ಎಂದು ಬಿ.ಜೆ.ಪಿ.ಯವರಿಗೂ ಗೊತ್ತಿತ್ತು. ಈಗ ನೆಪಗಳನ್ನು ಹೇಳಿ ಚುನಾಯಿತ ಸರಕಾರವನ್ನು ಉರುಳಿಸಿದ್ದಾರೆ. ಇದೂ ಮೂರು ವರ್ಷದ ಹಿಂದೆಯೇ ಸಿದ್ಧವಾದ ನೀಲಿನಕ್ಷೆ. ಪಿ.ಡಿ.ಪಿ.ಯ ಮೇಲೆ ಆರೋಪ ಮಾಡಿ ಬೆಂಬಲ ಹಿಂತೆಗೆದುಕೊಂಡು ರಾಷ್ಟ್ರಪತಿ ಆಡಳಿತ ಜಾರಿ ಮಾಡಿ ತಾವೇ ನೇಮಕ ಮಾಡುವ ರಾಜ್ಯಪಾಲರ ಮೂಲಕ ಆಡಳಿತ ನಡೆಸುವುದು, ಆ ಆಡಳಿತದ ಮೂಲಕ ಸುಳ್ಳುಗಳನ್ನು ಹೇಳಿ, ಮತೀಯ ರಾಜಕಾರಣ ಮಾಡಿ, ಕಾಶ್ಮೀರ ಕುರಿತು ಭಾವನಾತ್ಮಕ ಅಲೆಗಳನ್ನೆಬ್ಬಿಸಿ ಮುಂದೆ ಬರುವ ಲೋಕಸಭಾ ಚುನಾವಣೆಗೆ ಬಳಸಿಕೊಳ್ಳುವುದು. ಇವೆಲ್ಲ ಪಿ.ಡಿ.ಪಿ. ಜೊತೆ ಸೇರಿ ಸರಕಾರ ಮಾಡುವಾಗಲೇ ಸಿದ್ಧವಾದ ಯೋಜನೆಗಳು. ಈಗ ಜಾರಿ ಮಾಡಿದ್ದಾರೆ.

ಬಿ.ಜೆ.ಪಿ. ಗೆಲ್ಲಬೇಕಾದದ್ದು ಕಾಶ್ಮೀರದ ನೆಲವನ್ನಲ್ಲ, ಜನರನ್ನು. ಖ್ಯಾತ ನಾಟಕಕಾರರಾದ ಉತ್ಪಲ್‌ದತ್ತ ಅವರ ಸೂರ್ಯಶಿಕಾರಿ ನಾಟಕದಲ್ಲಿ ಒಂದು ಸನ್ನಿವೇಶವಿದೆ. ಸಮುದ್ರಗುಪ್ತನ ದಂಡಾಧಿಪತಿ ಹಯಗ್ರೀವ ಕಲ್ಹಣ ಮಹರ್ಷಿಯ ಆಶ್ರಮದ ಮೇಲೆ ದಾಳಿ ಮಾಡಿ ಇಂದ್ರಾಣಿ ಎಂಬ ಬೌದ್ಧ ಸನ್ಯಾಸಿನಿಯನ್ನು ಬಂಧಿಸಿ ತಂದು ಜೈಲಲ್ಲಿಡುತ್ತಾನೆ. ಆದರೆ ದಂಡಾಧಿಪತಿ ಹಯಗ್ರೀವನಿಗೆ ಅವಳ ಮೇಲೆ ಪ್ರೀತಿ ಉಂಟಾಗುತ್ತದೆ. ನನ್ನನ್ನು ಪ್ರೀತಿಸು ಎಂದು ಇಂದ್ರಾಣಿಯನ್ನು ಕೇಳುತ್ತಾನೆ. ಅವಳು ನಿರಾಕರಿಸುತ್ತಾಳೆ. ಇವನು ಅಂಗಲಾಚುತ್ತಾನೆ. ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. ಬೌದ್ಧ ಸನ್ಯಾಸಿನಿ ಇಂದ್ರಾಣಿ ಇವನ ಪ್ರೀತಿಯನ್ನು ನಿರಾಕರಿಸುತ್ತಾಳೆ. ಆಗ ಬಲಾಢ್ಯ ದಂಡಾಧಿಪತಿ ಹಯಗ್ರೀವ ಕ್ರೋಧದಿಂದ 'ನೀನು ನನ್ನನ್ನು ಪ್ರೀತಿಸು ಎಂದು ನಾನು ನಿನಗೆ ಆಜ್ಞಾಪಿಸುತ್ತೇನೆ' ಎನ್ನುತ್ತಾನೆ. ಇಂದ್ರಾಣಿ ನಿರಾಕರಿಸಿ ಸಾಯಲು ಸಿದ್ಧಳಾಗುತ್ತಾಳೆ. ಭಾರತದ ಪ್ರಭುತ್ವ ಕಾಶ್ಮೀರಕ್ಕೆ ಹೀಗೆ ಆಜ್ಞಾಪಿಸಿದರೆ ಇನ್ನೂ ಅಪಾಯ. ಮತಾಂಧರಿಂದ ಮತೀಯರನ್ನು ದೂರ ಮಾಡಬೇಕು. ಅವರಿಗೆ ನೆಮ್ಮದಿಯ ಬದುಕು ಕೊಡಬೇಕು ಅವರು ತಾವಿರುವ ನೆಲವನ್ನು, ತಾವಿರುವ ದೇಶವನ್ನು ಪ್ರೀತಿಸುವಂತಾಗಬೇಕು. ಇದು ಮತಾಂಧ ರಾಜಕಾರಣದಿಂದ ಸಾಧ್ಯವಾಗುವುದಿಲ್ಲ. ಕಾಶ್ಮೀರ ಕಣಿವೆಯ ಮೇಲೆ ಕಾರ್ಮೋಡಗಳಿವೆ, ತಿಳಿಯಾಗಲೆಂದು ಆಶಿಸೋಣ.

ಸಿದ್ದನಗೌಡ ಪಾಟೀಲ


ತಿಂಗಳ ಪತ್ರಿಕೆ



ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೦/- |
| **ವಾರ್ಷಿಕ ಚಂದಾ** | ₹ ೨೫೦/- |
| **ಮೂರು ವರ್ಷಕ್ಕೆ** | ₹ ೫೦೦/- |

■ **ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಸ್ಮಾರಕಗಳ ಖಾಸಗೀಕರಣ. ಈಗಾಗಲೇ ಮೊದಲ ಹೆಜ್ಜೆಯಾಗಿ ದೆಹಲಿಯ ಕೆಂಪು ಕೋಟೆಯ ನಿರ್ವಹಣೆಯನ್ನು ಖಾಸಗಿ ಕಂಪೆನಿಯೊಂದಕ್ಕೆ ವಹಿಸಿಕೊಟ್ಟಿದೆ. ಕೆಂಪು ಕೋಟೆ ಸ್ವಾತಂತ್ರ್ಯ ಹೋರಾಟದ ನೆನಪನ್ನು ನೀಡುವ ಸಮುಚ್ಚಯ. ಪ್ರತಿವರ್ಷ ಸ್ವಾತಂತ್ರ್ಯ ದಿನದಂದು ಪ್ರಧಾನಮಂತ್ರಿ ಕೋಟೆಯ ಮೇಲೆ ರಾಷ್ಟ್ರ ಧ್ವಜ ಹಾರಿಸಿ, ಭಾಷಣ ಮಾಡುವುದು ವಾಡಿಕೆ. ಅಲ್ಲದೆ ಕೆಂಪು ಕೋಟೆ ಪ್ರವಾಸಿಗರನ್ನು ಆಕರ್ಷಿಸುವ ಸ್ಥಳ. ಮುಂದೆ ಇನ್ನು ಯಾವ ಯಾವ ಸ್ಮಾರಕಗಳು ಖಾಸಗಿಯವರ ಆಡಳಿತಕ್ಕೆ ಒಳಪಡುವುದೋ ನೋಡಬೇಕು. ಆಗ್ರಾದ ತಾಜ್‌ಮಹಲ್ ಸ್ಮಾರಕವನ್ನು ಖಾಸಗಿಯವರಿಗೆ ವಹಿಸುವ ಸುದ್ದಿ ಇದೆ. ಇದು ಸಾಮಾಜಿಕ ಜಾಲತಾಣಗಳಲ್ಲಿ ಚರ್ಚೆಗೆ ಗ್ರಾಸ ವಾಗಿದೆ. ನಮ್ಮ ದೇಶದಲ್ಲಿ ಎಲ್ಲ ರಾಜ್ಯಗಳಲ್ಲೂ ಐತಿಹಾಸಿಕ ಸ್ಮಾರಕಗಳಿಗೆ ಕಮ್ಮಿ ಏನಿಲ್ಲ. ಪ್ರವಾಸಿಗರನ್ನು ಆಕರ್ಷಿಸಲು ಸರಕಾರ ಸೂಕ್ತವಾದ ವ್ಯವಸ್ಥೆ ಮಾಡುತ್ತಿಲ್ಲ. ಅನೇಕ ಸ್ಮಾರಕಗಳು ಅಳಿವಿನ ಅಂಚಿನಲ್ಲಿವೆ, ಮತ್ತೆ ದುರಸ್ತಿಯನ್ನೇ ಕಾಣದೆ ಪಾಳುಬೀಳುತ್ತಿವೆ. ಇನ್ನು ಮುಂದೆ ಖಾಸಗೀಕರಣವಾದರೆ ಗತಿಯೇನು ಎಂಬ ಕಳವಳ ಕಾಡುತ್ತಿದೆ. ಬಿಲ್ಡರುಗಳ ಕೈಗೆ ಬಿದ್ದರೆ ಬಹುಮಹಡಿ ಕಟ್ಟಡಗಳು ಏಳುವುದು ಖಂಡಿತ. ಇದೊಂದು ಆತಂಕಕಾರಿ ಬೆಳವಣಿಗೆ.

✶ ✶ ✶

ಕೆಲವರ್ಷಗಳ ಹಿಂದೆ ದ. ಅಮೆರಿಕ ಎಡಪಂಥೀಯ ವಿಚಾರಗಳ ಕೇಂದ್ರವೆನಿಸಿತ್ತು. ವೆನೆಜುವೇಲದ ನಾಯಕ ದಿವಂಗತ ಹ್ಯೂಗೋ ಚಾವೆಜ್ ಪ್ರಾರಂಭಿಸಿದ ಬೊಲಿವಾರಿಯನ್ ರಾಷ್ಟ್ರೀಯ ಚಳವಳಿಯು ದಕ್ಷಿಣ ಅಮೆರಿಕದ ದೇಶಗಳನ್ನು ಅಮೆರಿಕದ ಬಿಗಿಹಿಡಿತದಿಂದ ಮುಕ್ತಗೊಳಿಸಿತ್ತು. ಆದರೆ ಈಗ ಪರಿಸ್ಥಿತಿ ಭಿನ್ನವಾಗಿದೆ. ಅಮೆರಿಕ ದೇಶಗಳ ಸಂಘಟನೆ (ಓಎಎಸ್) ಬಲಾಢ್ಯ ಉತ್ತರ ಅಮೆರಿಕ ದೇಶವನ್ನು ಮೂಲೆಗುಂಪಾಗಿಸಿತ್ತು. ಪರ್ಯಾಯ ವ್ಯವಸ್ಥೆಯೊಂದು ಸಾಧ್ಯ ಎಂಬುದನ್ನು ಜಗತ್ತಿಗೆ ಮನನ ಮಾಡಿಕೊಟ್ಟಿತ್ತು. ಈಚಿನ ವರ್ಷಗಳಲ್ಲಿ ಒಂದೊಂದೇ ದೇಶಗಳು ಬಲಪಂಥೀಯ ರಾಜಕಾರಣಕ್ಕೆ ಮರಳುತ್ತಿವೆ. ಮುಖ್ಯವಾಗಿ, ಕೆಲವು ದೇಶಗಳಲ್ಲಿ ನ್ಯಾಯಾಲಯ ಎಡಪಂಥೀಯ ನಾಯಕರನ್ನು ಬಳಸಿ ಕೊಂಡಿದೆ. ಅದಕ್ಕೆ ಉದಾಹರಣೆ ಬ್ರೆಜಿಲ್‌ನ ಅಧ್ಯಕ್ಷ ಲೂಯಿ ಇವಾಸಿಯೋ ಲೂಲಾರನ್ನು ಪದಚ್ಯುತ ಗೊಳಿಸಿದ ಬಲಪಂಥೀಯರು ಮತ್ತು ಮಿಲಿಟರಿಯು ಲೂಲಾರನ್ನು ಈಗ ಕಾರಾಗೃಹಕ್ಕೆ ದೂಡಿದೆ. ಆತನ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸಿ ಅಪರಾಧಿಯ ನ್ನಾಗಿಸಿದೆ. ಕಾರ್ಮಿಕರ ಪಕ್ಷದ ಬ್ರೆಜಿಲ್‌ನ ಜನಪ್ರಿಯ ನಾಯಕನಾಗಿದ್ದ ಇವಾಸಿಯೋ ಲೂಲಾ ೨೦೦೩ರಿಂದ ೨೦೧೧ರವರೆಗೆ ಅಧಿಕಾರದಲ್ಲಿದ್ದು ಹಲವು ಜನೋಪಕಾರಿ ಯೋಜನೆಗಳನ್ನು ಕಾರ್ಯಗತಮಾಡಿದ್ದರು.

ಪೆರು, ಅರ್ಜೆಂಟೈನಾ, ಚಿಲಿ ಮೊದಲಾದ ದೇಶಗಳೂ ಕೂಡ ಬಲಪಂಥದ ಕಡೆಗೆ ವಾಲಿವೆ. ವೆನೆಜುವೇಲದಲ್ಲಿ ಹ್ಯೂಗೋ ಚಾವೆಜ್ ನಿಧನಾನಂತರ ಅಧಿಕಾರದಲ್ಲಿರುವ ಅಧ್ಯಕ್ಷ ನಿಕೊಲಾಸ್ ಮಡುರೋ ಮತ್ತೆ ಪುನರಾಯ್ಕೆಯಾಗುವುದನ್ನು ತಡೆಯಲು ಅಮೆರಿಕ ವೆನೆಜುವೇಲದ ಮೇಲೆ ಆರ್ಥಿಕ ದಿಗ್ಬಂಧನ ಹೇರಿತು. ಬೊಲಿವಾರಿಯನ್ ಚಳವಳಿಯನ್ನು ಸಂಪೂರ್ಣವಾಗಿ ಧೂಳಿಪಟ ಮಾಡಲು ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಪಣತೊಟ್ಟಿದ್ದಾರೆ. ಆದರೆ ಅದು ಅಷ್ಟು ಸುಲಭವಲ್ಲ. ಮಡುರೋ ಅಮೆರಿಕದ ಒತ್ತಡವನ್ನು ಎದುರಿಸಲು, ಮುಖ್ಯ ಆರ್ಥಿಕ ದಿಗ್ಬಂಧನವನ್ನು ಎದುರಿಸಲು ರಾಷ್ಟ್ರೀಯ ಐಕ್ಯತೆಗೆ ಕರೆ ನೀಡಿದ್ದಾರೆ. ಬಲಪಂಥೀಯರಿಗೆ ಅಮೆರಿಕ ಎಲ್ಲ ರೀತಿಯ ಬೆಂಬಲವನ್ನು ನೀಡುತ್ತಿದೆ.

✶ ✶ ✶

ಮಂತ್ರಿಗಿರಿ ಯಾರಿಗೆ ಬೇಡ? ಪ್ರತಿಯೊಬ್ಬ ಎಮ್ಮೆಲ್ಲೆಯೂ ಸಚಿವ ಸ್ಥಾನದ ಆಕಾಂಕ್ಷಿಯೇ. ಕಾಂಗ್ರೆಸ್ – ಜೆಡಿಎಸ್ ದೋಸ್ತಿ ಸರಕಾರ ರಚನೆಯಾಗಿ ವಾರಗಳು ಕಳೆದರೂ ಸಚಿವ ಸ್ಥಾನ ವಂಚಿತರ ಆಕ್ರೋಶ ಶಮನವಾಗಿಲ್ಲ. ಎರಡೂ ಪಕ್ಷಗಳು ಪ್ರತ್ಯೇಕವಾಗಿ ಬೇರೆ ಬೇರೆ ಆಮಿಷಗಳನ್ನು ತೋರಿಸಿ ಭಿನ್ನರನ್ನು ಶಮನ ಗೊಳಿಸಲು ಪ್ರಯತ್ನಿಸುತ್ತಿವೆ. ಕಾಂಗ್ರೆಸ್ – ಜೆಡಿಎಸ್‌ಗಳು ೧೨–೨೨ರ ಅನುಪಾತದಲ್ಲಿ ಸಚಿವಸ್ಥಾನ ಹಂಚಿ ಕೊಂಡಿವೆ. ವಾರಗಟ್ಟಲೆ ಸೆಣಸಾಡಿ ಕೊನೆಗೂ ಸಚಿವ ಸಂಪುಟ, ಖಾತೆ ಹಂಚಿಕೆ ಎಲ್ಲ ಕಸರತ್ತೂ ಮುಗಿದಿದೆ. ಎರಡು ಪಕ್ಷಗಳೂ ಕೆಲವು ಸಚಿವಸ್ಥಾನಗಳನ್ನು ಭರ್ತಿ ಮಾಡದೇ ಉಳಿಸಿಕೊಂಡಿವೆ. ಎರಡನೇ ಸುತ್ತಿನ ಸಂಪುಟ ವಿಸ್ತರಣೆಗೆ ಕಾಯಬೇಕು ಅತೃಪ್ತರು. ಇನ್ನು ಹಲವು ಸರಕಾರಿ ಸಂಸ್ಥೆಗಳ ಅಧಿಕಾರಕ್ಕೆ ತಿಕ್ಕಾಟ ಮುಂದುವರಿದಿದೆ. ಎಲ್ಲರಿಗೂ ಭರ್ಜರಿಯಾಗಿ ಕಮಾಯಿಸುವ ಹುದ್ದೆಯೇ ಬೇಕು. ಈ ಮಧ್ಯೆ ಮುಖ್ಯಮಂತ್ರಿ ಕುಮಾರಸ್ವಾಮಿಗೆ ರೈತರ ಸಾಲಮನ್ನಾ ದೊಡ್ಡ ತಲೆಶೂಲೆಯಾಗಿದೆ. ಅಧಿಕಾರದಲ್ಲಿ ಇಲ್ಲದಾಗ ಏನು ಬೇಕಾದರೂ ಆಶ್ವಾಸನೆಗಳನ್ನು ನೀಡಬಹುದು, ಅದರಲ್ಲೂ ಚುನಾವಣೆಗಳಲ್ಲಿ. ಆದರೆ ಅದನ್ನು ಕಾರ್ಯಗತ ಮಾಡಲು ಸಾಧ್ಯವಾಗಬೇಕಲ್ಲ. ಈಗ ಮುಖ್ಯಮಂತ್ರಿ ಕೇಂದ್ರದ ಮೊರೆ ಹೋಗಿದ್ದಾರೆ. ಕೇಂದ್ರ ಸರಕಾರದ ಮೇಲೆ ಗೂಬೆ ಕೂರಿಸುವ ಕಸರತ್ತು ನಡೆದಿದೆ. ಹೊಸ ಬಜೆಟ್ ಬೇಕೆ ಬೇಡವೇ ಇದು ಕಾಂಗ್ರೆಸ್‌ನಲ್ಲೇ ಒಡೆದ ಮನೆಯಾಗಿದೆ. ಹೇಗೆ ಸರಕಾರ ಸಮಸ್ಯೆ ಗಳನ್ನು ನಿಭಾಯಿಸುವುದೋ ಕಾದು ನೋಡಬೇಕು.

✶ ✶ ✶

ಮೂವತ್ತಕ್ಕೂ ಹೆಚ್ಚು ವರ್ಷಗಳ ಕಾಲ ಕಾಂಗ್ರೆಸ್ ಸದಸ್ಯತ್ವದ ಬಲದಿಂದ ಶ್ರೀ. ಪ್ರಣವ್ ಮುಖರ್ಜಿ ಬಹಳ ದೊಡ್ಡ ಅಧಿಕಾರ ಸ್ಥಾನಗಳಲ್ಲಿದ್ದು ಉಣ್ಣದ ಸುಖವೇನೂ ಉಳಿದಿಲ್ಲ. ಪ್ರಧಾನ ಮಂತ್ರಿಯಾಗಲಿಲ್ಲ ವೆಂಬುದೊಂದೇ ಅವರ ಕೊರಗಿರಬೇಕು. ಆದರೆ ದೇಶದ ಅಧ್ಯಕ್ಷ ಸ್ಥಾನ ಸಹ ಪಡೆದು ನಿವೃತ್ತರಾದರು. ಅರ್ಧ ಶತಮಾನ ಕೇವಲ ಸಾದಾ ಸದಸ್ಯರಾಗಿದ್ದು ಕೊಂಡು ಯಾವ ಅಧಿಕಾರವನ್ನೂ ಪಡೆಯದವರಿಗೆ ಹೋಲಿಸಿದರೆ ಶ್ರೀ. ಮುಖರ್ಜಿ ಸ್ವರ್ಗಸುಖ ಕಂಡಿದ್ದಾರೆ. ಅದೇನು ಉತ್ಸಾಹವೋ ಅವರದು, ಅಂತೂ ಮತ್ತೆ ಎಂಥದಾದರೂ ಪದವಿಯಲ್ಲಿ ರಾರಾಜಿಸಬೇಕೆಂಬ ಲಾಲಸೆ ಅವರದು. ಮೋಹನ ಭಾಗವತ್ – ನರೇಂದ್ರ ಮೋದಿ ಸಖ್ಯದಿಂದ ಮುಂದೆ ಮತ್ತಾವುದಾದರೂ ಜೇನುಗೂಡಿಗೆ ಕೈಹಾಕಿ ಒಂದಿಷ್ಟು ಸೋರುವ ಜೇನುತುಪ್ಪ ನೆಕ್ಕಿಕೊಳ್ಳಬಹುದೇನೋ ಎಂಬ ಕಾತರ ಅವರಿಗೆ. ಅವರಿಗಲ್ಲದಿದ್ದರೆ ಅವರ ಮಗನಿಗಾದರೂ ಏನಾದರೊಂದು 'ಘನತೆ'ಯ ಸ್ಥಾನ ಗಿಟ್ಟಿಸಬೇಕೆಂಬ ಲೆಕ್ಕಾಚಾರವೂ ಇರಬಹುದು, ಅಂತೂ ಅವರು ಕೆ. ಕೆ. ಹೆಡ್ಗೆವಾರರ ಮನೆಗೆ ಭೇಟಿಕೊಟ್ಟು ಪವಿತ್ರರಾದರು, "ಭಾರತದ ಶ್ರೇಷ್ಠ ನಾಯಕನೊಬ್ಬನ ಮನೆಗೆ ಭೇಟಿ ನೀಡಿ ಪಾವನವಾದೆ" ಎಂದು ಸಂದರ್ಶಕರ ದಾಖಲಾತಿ ಪುಸ್ತಕದಲ್ಲಿ ಬರೆದು ಬಂದರು. ಕಾಂಗ್ರೆಸ್ ಪಕ್ಷಕ್ಕೆ ತನ್ನದೆಂಬ ಯಾವ ನಿರ್ದಿಷ್ಟ ಸಾಂಸ್ಕೃತಿಕ – ಆರ್ಥಿಕ ಸಿದ್ಧಾಂತವೂ ಇಲ್ಲದ್ದರಿಂದ ಕಾಂಗ್ರೆಸ್‌ಗೆ ಮಂಗಗಳು ಹೇಗೆ ಬೇಕಾದರೂ ಜಿಗಿದಾಡುತ್ತಿರಬಹುದು. ಬಳ್ಳಾರಿಯ ಆನಂದ ಸಿಂಗ್ ಕಳೆದ ಬಾರಿ ಭಾಜಪ ಶಾಸಕ. ಆ ಸ್ಥಾನದ ಅವಧಿ ಮುಗಿದ ೧೨ ಗಂಟೆಗಳ ನಂತರ ಕಾಂಗ್ರೆಸ್‌ಗೆ ನುಗ್ಗಿ ಕೂಡಲೆ ಕಾಂಗ್ರೆಸ್ ಶಾಸಕನಾದ. ಇದೊಂದು ರಾಜಕೀಯ ಪವಾಡ. ಸತ್ಯಸಾಯಿಬಾಬಾ ಅವರ ಕೃಪೆಯೂ ಇದ್ದೀತು ಇಂತಹ ಪವಾಡವನ್ನು ಸಿದ್ಧಿಸಿಕೊಳ್ಳಲು. ಹೀಗಿರುವಾಗ ಪ್ರಣವ ಮುಖರ್ಜಿ ನಾಗಪುರದ ಆರೆಸ್ಸೆಸ್ ಕೇಂದ್ರಸ್ಥಾನಕ್ಕೆ ಹೋದರೇನು ಆಶ್ಚರ್ಯ! ಅಲ್ಲಿ ತಮ್ಮ ವಿದ್ವತ್ಪೂರ್ಣ ಉಪನ್ಯಾಸವನ್ನು ನೀಡಿ "ಕೋಣನ ಮುಂದೆ ಕಿನ್ನರಿ ನುಡಿಸಿ" ಬಂದರು. "ಅಯ್ಯಾ ರಾಷ್ಟ್ರವಾದಿಗಳೆ, ನಿಮಗೆ ರಾಷ್ಟ್ರೀಯತೆಯ ಗಂಧವೂ ಇಲ್ಲ, ನಾನು ಸ್ವಲ್ಪ ನಿಮಗೆ ಪೂಸಿ ಹೋಗುತ್ತೇನೆ" ಎಂದು ಭಾಗವತರ ತಿಳಿವಳಿಕೆಗೆ ಒಂದು ಪುಟ್ಟ ಮದ್ದನ್ನಾದರೂ ನೀಡಿದರೆ? ಅದೂ ಇಲ್ಲ. ಒಂದು ಸಂಗತಿ ನೆನಪಿಗೆ ಬರುತ್ತದೆ: ಡಾ॥ ಎಚ್. ನರಸಿಂಹಯ್ಯ ನವರು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಗಳಾಗಿ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಕಾಡುಗೋಡಿಯ ಸಾಯಿಬಾಬಾ ಆವಾಸಕ್ಕೆ ಅವರನ್ನು ಆಹ್ವಾನಿಸಲಾಗಿತ್ತು. ಲಕ್ಷಣವಾಗಿ ಎಂಟು ಪುಟಗಳ ಉಪನ್ಯಾಸವನ್ನು ಮುದ್ರಿಸಿಕೊಂಡು ಒಂದು ಸಾವಿರ ಪ್ರತಿಗಳನ್ನು ತೆಗೆದುಕೊಂಡು ಹೊರಟರು. ಸುಮಾರು ಐನೂರು ವಿದ್ಯಾರ್ಥಿಗಳು ದೇಶದ ನಾನಾ ಭಾಗಗಳಿಂದ ಬಂದು ಯಾವುದೋ ಬೇಸಿಗೆ ಶಿಬಿರದಲ್ಲಿ ಪಾಲ್ಗೊಳ್ಳು ವುದಿತ್ತು. ಸಭೆಯಲ್ಲಿ ಮ್ಯಾಜಿಕ್ ಬಾಬಾ ಅಲ್ಲದೆ ಡಾ॥ ಭಗವಂತಂ, ಡಾ॥ ಗೋಕಾಕ್, ಜಿ. ಪಿ. ರಾಜರತ್ನಂ, ನಾ. ಕಸ್ತೂರಿ, ಹೀಗೆ ಘಟಾನುಘಟಿಗಳು ಭಾಗವಹಿ ಸಿದ್ದರು. ಎಚ್ಚೆನ್ ಅವರ ಉಪನ್ಯಾಸದ ಪ್ರತಿಗಳನ್ನು ಪ್ರಸ್ತುತ ಲೇಖಕ ಮತ್ತು ಈಗ ಲಂಡನ್ನಿನಲ್ಲಿ ವೈದ್ಯ ನಾಗಿರುವ ಅಂದಿನ ಒಬ್ಬ ವಿದ್ಯಾರ್ಥಿ ಹಂಚಿದರು. ವಾತಾವರಣವು ಬಹಳ ಬಿಗಿಯಾಯಿತು. ಒಂದಕ್ಷರ ವನ್ನೂ ಬಿಡದೆ ಎಚ್ಚೆನ್ ಬಾಬಾಗೆ ಮಂಗಳಾರತಿ ಮಾಡುವ ಉಪನ್ಯಾಸವನ್ನು ಓದಿದರು. ಯಾರೂ ಚಪ್ಪಾಳೆ ಹೊಡೆಯಲಿಲ್ಲವೆಂದು ಎಚ್ಚೆನ್ ಸದಾ ನೊಂದು ಕೊಳ್ಳುತ್ತಿದ್ದರು. ಅವರ ಮಾತಿಗೆ ಬಾಬಾ ತನ್ನ ಭಾಷಣ ದಲ್ಲಿ ಯಾವ ಪ್ರತಿಕ್ರಿಯೆಯನ್ನೂ ನೀಡಲಿಲ್ಲ. ಸಭೆ ಮುಗಿದ ನಂತರ ದೊಡ್ಡಮನುಷ್ಯರು ಯಾರೂ ಅವರ ಬಳಿ ಸುಳಿಯಲಿಲ್ಲ. ಒಬ್ಬ ಕಾರ್ಯಕರ್ತ ಅವರನ್ನು ಹಾಗೂ ಅವರ ಪರಿವಾರದ ಇಬ್ಬರನ್ನು ಗೇಟಿನವರೆಗೆ ಕರೆತಂದು ಬೀಳ್ಕೊಟ್ಟ. ಎಚ್ಚೆನ್ ಯಾವ ಅಳುಕೂ ಇಲ್ಲದೆ ಬಾಬಾಗೆ ಮೆಣಸಿನಕಾಯಿ ಹೊಗೆ ಇಟ್ಟು ಹಿಂದಿರುಗಿದರು. ಸಿಂಹದ ಗವಿಗೆ ನುಗ್ಗಿ ಸಿಂಹದ

ಮೀಸೆ ಜಗ್ಗಿ ಬಂದರು. ಅದಲ್ಲವೇ ವೈಚಾರಿಕತೆಯ ಬಗೆಗಿನ ನಿಷ್ಠೆ. ಪ್ರಣವ ಮುಖರ್ಜಿ ಕರ್ಪೂರ ಹಚ್ಚಿಟ್ಟು ಬಂದರು! ಅವರ 'ಅದ್ಭುತ' ಭಾಷಣವು ಗಾಳಿಯಲ್ಲಿ ಸೇರಿಹೋಯಿತು. ಕಾಂಗ್ರೆಸ್ ಮುತ್ಸದ್ದಿಗಳ ವಿಚಾರಪ್ರಿಯತೆ ಮತ್ತು ಪಕ್ಷಕ್ಕೆ ನಿಷ್ಠೆ ಎಷ್ಟು ಅಗಾಧವೆಂದು ಒತ್ತಿಹೇಳಬೇಕೆ?

✶ ✶ ✶

ಮುಂಬೈ ಉಚ್ಚ ನ್ಯಾಯಾಲಯಕ್ಕೆ 'ದಲಿತ' ಎಂಬ ಪದ ರುಚಿಸುವುದಿಲ್ಲ. ದೇಶದ ಅಂತಃಪ್ರಜ್ಞೆಯನ್ನು ಆ ಪದವು ಚುಚ್ಚುತ್ತದೆಯೆಂದು ಅವರು ಭಾವಿಸಿರಬೇಕು, ಆದರೆ ಅಂಥದೇನೂ ಜನರ ನಡವಳಿಕೆಯಲ್ಲಿ ಕಾಣುತ್ತಿಲ್ಲ. ತನ್ನ ಸಲಹೆಗೆ ಕಾರಣವನ್ನೇನೂ ನೀಡದೆ "ಆ ಪದವನ್ನು ಬಳಸದಿರುವಂತೆ ಸರ್ಕಾರವು ಜನರಿಗೆ ತಿಳಿವಳಿಕೆ ನೀಡಬೇಕು" ಎಂದಷ್ಟೇ ನ್ಯಾಯಾಲಯವು ಹೇಳಿದೆ. ನಮ್ಮ ಭಾಷೆಯಲ್ಲಿ ಯಾವ ಪದ ಇರಬೇಕು ಅಥವಾ ಇಲ್ಲವಾಗಬೇಕು ಎಂದು ತೀರ್ಮಾನಿಸುವ ಹಕ್ಕನ್ನು ಸಂವಿಧಾನವು ನ್ಯಾಯಾಲಯಕ್ಕೆ ನೀಡಿದ್ದು ಎಲ್ಲೂ ಕಂಡುಬಂದಿಲ್ಲ. ಪದಗಳನ್ನು ಜನ ಸೃಷ್ಟಿಸಿಕೊಳ್ಳುತ್ತಾರೆ. ಅದಕ್ಕೆ ಯಾವ ನಿಯಮ ಅಥವಾ ಕಾನೂನಿನ ನಿರ್ಬಂಧವಿಲ್ಲ. ಕವಿಗಳು ಭಾಷೆಗೆ ಹೊಸ ನುಡಿಕಟ್ಟುಗಳನ್ನು ನೀಡುತ್ತಾ ಅದನ್ನು ಶ್ರೀಮಂತಗೊಳಿಸುತ್ತಾರೆಂದು ಟಿ.ಎಸ್. ಎಲಿಯಟ್ ಅಭಿಪ್ರಾಯಪಟ್ಟಿದ್ದ. ಆದರೆ ಕವಿಗಳಿಗಿಂತಲೂ ಹೆಚ್ಚಾಗಿ ಸಿಟಿ ಮಾರ್ಕೆಟ್ ಬಳಿಯ ಜನ ಆ ಕೆಲಸವನ್ನು ತಮಗರಿವಿಲ್ಲದೆಯೇ ಮಾಡುತ್ತಿರುತ್ತಾರೆಂಬುದು ವಾಸ್ತವ. "ಅಲ್ವಾ ಮಚ್ಚಾ" ಎಂಬ ಬಳಕೆ ಬಹುಶಃ ಅಲ್ಲೇ ಸೃಷ್ಟಿಯಾಗಿರಬೇಕು. ಅದನ್ನು ಪೊಲೀಸರು ಮತ್ತು ನ್ಯಾಯಾಲಯ ನಿಯಂತ್ರಿಸಹೋಗುವುದು ದುಂಡಾವೃತ್ತಿಯಾಗುತ್ತದೆ. ಪಾಣಿನಿಯು 'ಅಷ್ಟಾಧ್ಯಾಯಿ' ನಿರ್ಮಿಸಿದಾಗ ಭಾಷೆಯು ಹೇಗೆ ಪ್ರವರ್ತಿಸುತ್ತದೆಯೆಂದು ಹೇಳಿದನೇ ವಿನಾ ಹೇಗೆ "ಪ್ರವರ್ತಿಸಬೇಕು" ಎಂದು ಹೇಳಲಿಲ್ಲ. ಆ ವ್ಯಾಕರಣ ಗ್ರಂಥವು ಅನನ್ಯವಾದ್ದು. ದೇಶದ ವಿವಿಧ ಭಾಗಗಳಲ್ಲಿ ಒಂದೇ ಪದವನ್ನು ಎಷ್ಟೆಷ್ಟು ಭಿನ್ನವಾಗಿ ಬಳಸಲಾಗುತ್ತಿದೆ ಎಂಬುದನ್ನು ಸಹ ಅವನು ದಾಖಲಿಸಿದ್ದಾನೆ. ಹಾಗೆ ಮಾಡುವಾಗ 'ಇದು ಸರಿ, ಅದು ತಪ್ಪು' ಎಂದಾಗಲಿ, 'ಇದನ್ನು ಬಳಸುವವರು ಜಾಣರು, ಅದನ್ನು ಬಳಸುವವರು ಕೋಣರು' ಎಂದಾಗಲಿ ಅವನು ಜನರನ್ನು ವರ್ಗೀಕರಿಸಲಿಲ್ಲ. ವ್ಯಾಕರಣ ಮತ್ತು ಭಾಷೆ ತಾವಾಗಿ ವಿಕಾಸಹೊಂದುತ್ತವೆ, ವ್ಯಾಕರಣತಜ್ಞನು ಅದನ್ನು ದಾಖಲಿಸುವುದನ್ನಷ್ಟೇ ಮಾಡುತ್ತಾನೆ. ಅವನೊಬ್ಬ ಸಸ್ಯವಿಜ್ಞಾನಿ ಇದ್ದಂತೆ, ಅಷ್ಟೆ. ಭೂಮಿಯಲ್ಲಿ ಸಸಿಯನ್ನು ನೆಟ್ಟು "ನೀನು ಹೀಗೆ ಬೆಳೆಯಬೇಕು" ಎಂದು ಆ ವಿಜ್ಞಾನಿ ಸಸಿಗೆ ಆದೇಶ ನೀಡಲಾರ, ಯಾವ ಆರೈಕೆ ಮಾಡಿ ಅದನ್ನು ಹೇಗೆ ಪೋಷಿಸಿ ಬೆಳೆಸಬಹುದು ಎಂಬುದನ್ನು ಪ್ರಕೃತಿಯ ನಡತೆಯಿಂದ ತಿಳಿದುಕೊಂಡು ಅದನ್ನು ದಾಖಲಿಸುತ್ತಾನೆ, ಅಷ್ಟೆ. ಆದ್ದರಿಂದ 'ಬ್ರಾಹ್ಮಣ' ಎಂಬ ಪದವನ್ನು ಬಳಸಬಹುದಾದರೆ 'ದಲಿತ' ಎಂಬ ಪದವನ್ನೇಕೆ ಬಳಸಕೂಡದು? ಪದವನ್ನು ಅಳಿಸಿ ಹಾಕಿದರೆ ಯಾರು ದಲಿತರೋ ಅವರು ಇಲ್ಲವಾಗುತ್ತಾರೆಯೇ? ಅವರಿದ್ದರೆ ಪರವಾಗಿಲ್ಲ, ಆದರೆ ಆ ಪದ ಬೇಡ ಎನ್ನುವುದು ಬಾಲಿಶತನ, ಅಷ್ಟೆ. ಹಿಂದೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೊಬ್ಬರು ದಲಿತ, ಬಲಿತ, ಎಂಬ ಸಾಹಿತ್ಯ ಪ್ರಕಾರಗಳಿಲ್ಲವಾದ್ದರಿಂದ "ದಲಿತ ಸಾಹಿತ್ಯ ಗೋಷ್ಠಿ" ಆಯೋಜಿಸುವ ಅವಶ್ಯಕತೆ ಇಲ್ಲವೆಂದಿದ್ದರು. ಆದರೆ ದಲಿತ ಸಾಹಿತ್ಯವು ನಮ್ಮ ದೇಶದಲ್ಲಿ ವ್ಯಾಪಕವಾಗಿ ಬೆಳೆದಿದೆ ಮತ್ತು ಚರ್ಚಿತವಾಗುತ್ತಿದೆ. ನ್ಯಾಯಾಲಯವು 'ದಲಿತ' ಎಂಬುದರ ಬದಲು "ಪರಿಶಿಷ್ಟ" ಎಂಬ ಪದದ ಬಳಕೆಯನ್ನು ಉತ್ತೇಜಿಸಲು ಸೂಚಿಸಿದೆ. ಅವೆರಡೂ ಒಂದೇ ಅಲ್ಲ, ಏಕೆಂದರೆ 'ಪರಿಶಿಷ್ಟ'ವು ಒಂದು ಪಟ್ಟಿಯನ್ನು ತಯಾರಿಸಲಾಗಿರುವುದರ ಶೀರ್ಷಿಕೆಯಾಗಿದೆ; ಅದನ್ನು ಸಮಾಜವು ಸೃಷ್ಟಿಸಿಲ್ಲ. ಪತಂಜಲಿಯು ಪಾಣಿನಿಯ 'ಅಷ್ಟಾಧ್ಯಾಯಿ'ಗೆ ಭಾಷ್ಯ ಬರೆದಿದ್ದಾನೆ. ಅಲ್ಲೊಂದು ವಿಚಾರ ಮಂಡಿಸಿದ್ದಾನೆ: ಒಂದು ಪದವನ್ನು ಸರಿಯಾಗಿ ಪ್ರಯೋಗ ಮಾಡಿದರೆ, ಚೆನ್ನಾಗಿ ತಿಳಿದರೆ, ಸ್ವರ್ಗಲೋಕದ ಸವಿ ಉಂಡಂತೆ, ಎಂದು (ಏಕಃ ಶಬ್ದಃ ಸುಪ್ರಯುಕ್ತಃ ಸಂಯಕ್ ಜ್ಞಾತಃ ಸ್ವರ್ಗೇ ಲೋಕೇ ಚ ಕಾಮಧುಕ್ ಭವತಿ). ನ್ಯಾಯಾಲಯವು ಅದನ್ನು ತಿಳಿದುಕೊಂಡು ಪದಗಳನ್ನು ಇಲ್ಲವಾಗಿಸುವ ಪ್ರಕ್ರಿಯೆಯಿಂದ ದೂರ ಉಳಿಯುವುದು ಆರೋಗ್ಯಕರ.

✶ ✶ ✶

ಧೋನಿ ಎಂಬ ಕ್ರಿಕೆಟ್ ಮಹಾರಾಜ ಸಹ ಪದಗಳ ವ್ಯಾಪ್ತಿಗೆ ಹೊಸತನ್ನು ಸೇರಿಸುವ ಉದ್ಯಮಕ್ಕಿಳಿದಿದ್ದಾನೆ. "ವಯಸ್ಸು ಎಂಬುದು ಕೇವಲ ಸಂಖ್ಯೆ" ಎಂದು ಇತ್ತೀಚೆಗೆ ಹೇಳಿ ತಾನು ಅರವತ್ತು ವಯಸ್ಸಿನವರೆಗೂ ಕ್ರಿಕೆಟ್ ತಂಡದ ನಾಯಕನಾಗಿರಲು ಅಭ್ಯಂತರವಿಲ್ಲ ಎಂದು ಸೂಚಿಸಿದ್ದಾನೆ. ಮೋದಿಯವರ ಅಂಗಸೌಷ್ಠವದ ವ್ಯಾಖ್ಯಾನವು ಪ್ರಸಿದ್ಧಿ ಪಡೆಯುತ್ತಿರುವಾಗ ಧೋನಿಯ ಮಾತು ರಂಜನೆ ನೀಡಬಹುದಿತ್ತು. ಆದರೆ ನಿಜಕ್ಕೂ ಅದು ಆತಂಕಕ್ಕೆ ಕಾರಣವಾಗಿದೆ. ಈ ಮಹಾತ್ಮನು ಇನ್ನೂ ಇಪ್ಪತ್ತು ಅಲ್ಲದಿದ್ದರೆ ನಲವತ್ತು ವರ್ಷಗಳ ಕಾಲ ಆಡಿಕೊಂಡಿರಲಿ, ಆದರೆ ಹದಿನೆಂಟು ಇಪ್ಪತ್ತು ವಯಸ್ಸಿನ ಯುವಕರಿಗೆ ಅವಕಾಶವಾಗಲೆಂಬ ಕಾರಣಕ್ಕೆ ದೇಶದ ತಂಡದಿಂದ ನಿರ್ಗಮಿಸುವುದು ಯೋಗ್ಯ ಮತ್ತು ಆರೋಗ್ಯಕರ. ಈತ ಇನ್ನೂ ಹತ್ತು ವರ್ಷ ನಾಯಕನಾಗೇ ಉಳಿದರೆ ಈಗ ಇಪ್ಪತ್ತು ವಯಸ್ಸಿನವರಿಗೆ ಆಗ್ಗೆ ಮೂವತ್ತಾಗಿರುತ್ತದೆ. ಮೂವತ್ತು ಆಗಿರುವವರನ್ನು ಹೊಸದಾಗಿ ತಂಡಕ್ಕೆ ಆಯ್ಕೆ ಮಾಡುವುದಿಲ್ಲ. ಆದ್ದರಿಂದ ಆ ಪೀಳಿಗೆಯವರು ಅವಕಾಶವಂಚಿತರಾಗುತ್ತಾರೆ. ಇದು ಸರ್ವಥಾ ಸಮರ್ಥನೀಯವಲ್ಲ. "ಇಷ್ಟು ದಿನ ಆಡಿದ್ದೀಯೆ, ಕೋಟಿಗಟ್ಟಲೆ ಸಂಪಾದಿಸಿದ್ದೀಯೆ, ಸ್ಪರ್ಧೆಗಳಿಂದ ಹೊರಗುಳಿದು ಚೆನ್ನಾಗಿ ಆಡಿಕೊಂಡಿರು, ಯುವಕರು ನಿನ್ನ ಸ್ಥಾನವನ್ನು ತುಂಬಬೇಕಾಗಿದೆ" ಎಂದು ಕ್ರಿಕೆಟ್ ಮಂಡಲಿಯ ಆಯ್ಕೆ ಸಮಿತಿಯು ಆತನಿಗೆ ಹೇಳಬೇಕು. ಅದೇನು ಕಚ್ಚಾ ಸಂಪ್ರದಾಯವೋ, ಅಂತೂ ಕ್ರಿಕೆಟ್ ಪಟುಗಳು ತಮ್ಮ ನಿರ್ಗಮನವನ್ನು ಘೋಷಿಸುವ ಸಂಪ್ರದಾಯವಿದೆ. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳೂ ಸಹ ಯಾವ ಘೋಷಣೆಯನ್ನೂ ಮಾಡದೆ ಅರವತ್ತೈದಕ್ಕೆ ನಿರ್ಗಮಿಸುತ್ತಾರೆ. ಆದ್ದರಿಂದ ವಯಸ್ಸು ಕೇವಲ ಸಂಖ್ಯೆಯಲ್ಲ, ಅದೊಂದು ಸೂಚನೆ ಎಂಬುದನ್ನು ಧೋಣಪ್ಪ ತಿಳಿಯುವುದು ಉಚಿತ. ಈ ಮಧ್ಯೆ ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳ ಅಧ್ಯಾಪಕರ ನಿವೃತ್ತಿ ವಯಸ್ಸನ್ನು ಎರಡು ವರ್ಷ ಹೆಚ್ಚಿಸುತ್ತಾರೆಂಬ ವದಂತಿ ಇತ್ತು. ಅದಕ್ಕೆ ಆರ್ಥಿಕ ಮುಗ್ಗಟ್ಟನ್ನು ಕಾರಣವಾಗಿ ಸರ್ಕಾರವು ನೀಡಿಯಾಯಿತು, ಆದರೆ ಕೆಲವು ಅಧ್ಯಾಪಕರು ನವೋತ್ಸಾಹದಿಂದ ಈ ಹೆಚ್ಚಳವು ಶಿಕ್ಷಣದ ಗುಣಮಟ್ಟವನ್ನು ಕಾಪಾಡಲು ಸಹಾಯ ಮಾಡುತ್ತದೆ ಎಂದು ಹೇಳಿ ಇನ್ನೆರಡು ವರ್ಷ ಉಳಿಯುವ ಹುನ್ನಾರದಲ್ಲಿದ್ದಾರೆ. ಅವರಿಗೂ ಧೋನಿಗೆ ಹೇಳಿದ್ದನ್ನೇ ಹೇಳಿ ನಿವೃತ್ತಿಯ ನಂತರವೂ ಗುಣಮಟ್ಟದ ವರ್ಧನೆಗೆ ಶ್ರಮಿಸಲು ಅಡ್ಡಿಯಿಲ್ಲವೆಂದು ಬೇಗನೆ ಬಾಗಿಲು ತೋರಿಸಬೇಕು. ಅರ್ಹ ಯುವಕರು ನಿರುದ್ಯೋಗಿಗಳಾಗಿದ್ದಾರೆ. ಅವರಿಗೆ ಉದ್ಯೋಗ ದೊರೆತರೂ ಹತ್ತು ಸಾವಿರ ರೂಪಾಯಿಗಳ ಸಂಬಳಕ್ಕೆ ದುಡಿಯಬೇಕಾಗಿದೆ. ಈಗಲೇ ಅಧ್ಯಾಪಕ ವೃತ್ತಿಗೆ ಸೇರದಿದ್ದರೆ ಆಮೇಲೆ ವಯಸ್ಸಾಯಿತೆಂದು ಅವರಿಗೆ ಉದ್ಯೋಗ ನೀಡುವುದಿಲ್ಲ; ಹೀಗಿರುವಾಗ ಅರವತ್ತಕ್ಕೆ ನಿರ್ಗಮಿಸಬೇಕಾದವರು ಗೂಟ ಹೊಡೆದುಕೊಂಡು ಇನ್ನೂ ಎರಡು ವರ್ಷ ಅಲ್ಲೇ ಉಳಿದರೆ ಯುವಕರ ಪಾಡೇನು ? ಸರ್ಕಾರದಿಂದ ವೇತನ ಪಡೆಯುವವರು ನಿವೃತ್ತರಾದರೆ ಅವರಿಗೆ ಸರ್ಕಾರವು ಗ್ರಾಚುಯಿಟಿ ಮುಂತಾದ ಬಾಬ್ತುಗಳಿಗೆ ಹಣ ನೀಡಬೇಕಾಗುತ್ತದೆ; ಖಜಾನೆ ಖಾಲಿ ಮಾಡಿರುವುದರಿಂದ ನಿವೃತ್ತರಾಗಬೇಕಾದವರನ್ನು ಉಳಿಸಿಕೊಳ್ಳುವ ದುರಾಲೋಚನೆಗೆ ಸೊಪ್ಪು ಹಾಕಬಾರದು. ಈಗ ಹಣವಿಲ್ಲದಿದ್ದರೆ ಇನ್ನೆರಡು ವರ್ಷಗಳ ನಂತರ ಹಣ ಎಲ್ಲಿಂದ ಬರುತ್ತದೆ? ಬೊಕ್ಕಸಕ್ಕೆ ಬರಬೇಕಾದ ಹಣವನ್ನು ಲಪಟಾಯಿಸುವುದನ್ನು ನಿಲ್ಲಿಸಿದರೆ ಪರಿಹಾರ ದೊರೆಯುತ್ತದಲ್ಲಾ !

✶ ✶ ✶

ಬೆಂಗಳೂರಿನಲ್ಲಿ ಈ – ಬಸ್ಸುಗಳು ಬರುತ್ತವಂತೆ, ಇಲ್ಲಿಯವರೆಗಿದ್ದ ಆ – ಬಸ್ಸುಗಳನ್ನು ಏನು ಮಾಡುತ್ತಾರೋ ತಿಳಿಯದು. ಈ – ಬಸ್ಸುಗಳ ಬೆಲೆ ಸುಮಾರು ಒಂದು ಕೋಟಿ. ಕೇಂದ್ರ ಸರ್ಕಾರವು ಸಾರಿಗೆಯ ಅಭಿವೃದ್ಧಿಗೆಂದು ರಾಜ್ಯಗಳಿಗೆ ಒಂದಿಷ್ಟು ಹಣ ನೀಡುವುದಿದೆ; ಅದರಡಿ ಈ – ಬಸ್ಸುಗಳು ಬರುವ ಸಾಧ್ಯತೆ ಇದೆ. ಆದರೆ ಕೇಂದ್ರದ ಮೋದಿ ಸರ್ಕಾರವು ಖಾಸಗಿಗೆ ಮಣೆ ಹಾಕುವ ಹಾನಿಕಾರಕ ಪ್ರವೃತ್ತಿಯನ್ನು ತಬ್ಬಿಕೊಂಡಿದೆ. ಆದ್ದರಿಂದ ಒಂದು ಷರತ್ತು ವಿಧಿಸ ಹೊರಟಿದೆ: ಈ – ಬಸ್ಸುಗಳಿಗೆ ನೀಡುವ ೮೦ ಲಕ್ಷ ರೂಪಾಯಿ ಪಡೆಯಬೇಕಾದರೆ ರಾಜ್ಯ ಸರ್ಕಾರವು ಅವುಗಳ ಮಾಲಿಕತ್ವನ್ನು ಸಾರ್ವಜನಿಕ – ಖಾಸಗಿ ಮಿಶ್ರಣಕ್ಕೆ ಒಳಪಡಿಸಬೇಕಂತೆ. ಅಂದರೆ, ಆದಾಯದಲ್ಲಿ ಖಾಸಗಿಗೂ ಪಾಲು ಕೊಡಬೇಕೆಂದರ್ಥ. ಕ್ರಮೇಣ ಸರ್ಕಾರವನ್ನು ಖಾಸಗಿಯವರಿಗೆ ವರ್ಗಾಯಿಸುವ ದುಷ್ಪ್ರಯೋಜನೆ ಇದಾಗಿದೆ. ಈ ಷರತ್ತನ್ನು ಒಪ್ಪುವುದಿಲ್ಲ ಎಂದು ರಾಜ್ಯ ಸರ್ಕಾರವು ಕೇಂದ್ರಕ್ಕೆ ಗಟ್ಟಿಯಾಗಿ ಹೇಳಬೇಕು ಮತ್ತು ಹಿಂದಿನ ವ್ಯವಸ್ಥೆಯಲ್ಲಿದ್ದಂತೆ ಬಸ್ಸುಗಳ ಖರೀದಿಗೆ ಕೇಂದ್ರವು ಸಾರ್ವಜನಿಕ ಬೊಕ್ಕಸದಿಂದ ರಾಜ್ಯಕ್ಕೆ ಹಣವನ್ನು ನೀಡುವ ಜವಾಬ್ದಾರಿಯನ್ನು ನಿರ್ವಹಿಸಬೇಕು ಎಂದು ಪ್ರಬಲವಾಗಿ ಆಗ್ರಹಿಸಬೇಕು.






**ಕೈಗಾರಿಕಾ ಕ್ರಾಂತಿ... ಜನಸಾಮಾನ್ಯರ ಮನಸ್ಸಿನಲ್ಲಿ ದಿಗ್ಭ್ರಾಂತಿ**

ಸಮಾಜದ ಒಟ್ಟಾರೆ ಬೆಳವಣಿಗೆ ದೇಶದ ಪ್ರಗತಿಗೆ ಅವಶ್ಯವಾಗಿ ಬೇಕಿರುವುದೇ ಈ ಕ್ರಾಂತಿ... ವೈಜ್ಞಾನಿಕ ತಾಂತ್ರಿಕ ಕ್ರಾಂತಿ. ಇದು ಒಂದು ತೆರನಾದ ವಾದ... ಮತ್ತೊಂದು ವಾದವನ್ನು ಅವಲೋಕಿಸಿದರೆ ಕೈಗಾರಿಕೆಯಲ್ಲಾಗುವ ಬದಲಾವಣೆಗಳು ಮಾತ್ರವೇ ಕ್ರಾಂತಿಯೇ?

ಬೇರೆ ಬೇರೆ ದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿರುವ ಕೈಗಾರಿಕಾ ಕ್ರಾಂತಿ.... ಪ್ರಮುಖವಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳನ್ನು ಒಳಗೊಂಡು ನಮ್ಮ ಜೀವನವನ್ನು ತೀವ್ರವಾಗಿ ಪ್ರಭಾವಿಸುತ್ತದೆ ಎಂಬುದು ಸತ್ಯವಾದ ಮಾತು. ದೇಶಗಳ ಅಭಿವೃದ್ಧಿಗೆ ಮುಖ್ಯ ಕಾರಣವೂ ಹೌದು. ಇಂತಹ ಬೆಳವಣಿಗೆಯಿಂದ ಜನರ ಉದ್ಯೋಗ ಸಮಸ್ಯೆ ಸಹ ನಿವಾರಣೆಯಾಗುತ್ತದೆ. ಆದರೆ, ಹಿಂದಿನ ಕಾಲ ದಲ್ಲಿನ ದುಡಿಯುವ ರೈತ, ಕಾರ್ಮಿಕರ ಜೀವನ, ಪರಸ್ಪರ ಹೊಂದಾಣಿಕೆ, ಆರೋಗ್ಯ, ಸ್ವಾಭಿಮಾನ, ಗೌರವ, ಪ್ರೀತಿ, ವಿಶ್ವಾಸ, ಅವಿಭಕ್ತ ಕುಟುಂಬ, ಎಲ್ಲವೂ ಕಾಣೆ ಯಾಗಿವೆ. ಇದೂ ಒಂದು ಮಾದರಿಯ ಕ್ರಾಂತಿಯೇ ?

ಹಿಂದೆ ಮನೆಮಂದಿಯೆಲ್ಲ ದುಡಿದು ಭೂಮಿತಾಯಿ ಯೊಡನೆ ಕಾಯಕ ಸೇವೆಯೆಂದು ಕೆಲಸ ಕಾರ್ಯ ನಿರ್ವಹಿಸಿ, ತನ್ನ ಕುಟುಂಬದವರ ಕಾಳಜಿ, ಪ್ರೀತಿ, ಸಮಯ ಎಲ್ಲಕ್ಕೂ ಮಿಗಿಲಾಗಿ ಒಟ್ಟಾಗಿ ಬೆಳೆಯುವ ಜೀವನ ಪದ್ಧತಿ ಇತ್ತು. ಹಸು-ಕರು-ಕೋಳಿ.... ಹೀಗೆ ಪ್ರಾಣಿಗಳೊಟ್ಟಿಗೆ ಒಡನಾಟ, ಅವುಗಳ ಪ್ರೀತಿ-ವಾತ್ಸಲ್ಯ ಜೀವನದ ಆಧಾರ. ಎತ್ತಿನಗಾಡಿ ಪ್ರತಿ ಮನೆಯ ಕಸುಬಿನ, ಅಭಿವೃದ್ಧಿಯ, ದುಡಿಮೆಯ ಪ್ರತೀಕವಾಗಿತ್ತು, ಸಂಕೇತ ವಾಗಿತ್ತು. ಆದರೆ, ಇಂದು ದುರದೃಷ್ಟವಶಾತ್, ಎತ್ತಿನಗಾಡಿ, ಹಸು, ಭೂಮಿಯ ಉಳುಮೆ ಮಾಡುತ್ತಿದ್ದ ರೈತ ಮಾಯವಾಗಿ ಆಧುನಿಕ ವಾಹನಗಳು, ಸಂಪರ್ಕ ಸಾಧನಗಳು ಇತರೆ ಆಧುನಿಕ ತಂತ್ರಜ್ಞಾನದ ಪರಿಕರಗಳು ಸಕಲರ ಬಳಿ ರಾರಾಜಿಸುತ್ತಿವೆ. ಇದೂ ಒಂದು ಮಾದರಿಯ ಕ್ರಾಂತಿಯೇ ?

ಒಟ್ಟು ಕುಟುಂಬಗಳು ಕಾಣೆಯಾಗಿವೆ. ದುಡಿಯುವ ಕೈ ತಾಂತ್ರಿಕತೆಗೆ ಮಾರುಹೋಗಿದೆ, ಆರೋಗ್ಯದ ಸಮಸ್ಯೆ ಅನಿವಾರ್ಯವಾಗಿದೆ. ಗ್ರಾಮಗಳಲ್ಲಿ ವಾಸ ಮಾಡ ಲಾಗದೆ ಗ್ರಾಮೀಣ ಯುವಕರು ನಗರಗಳತ್ತ ವಲಸೆ ಹೋಗುತ್ತಿದ್ದು, ಪೂರ್ವಜರ ಕೃಷಿ ಭೂಮಿ ಪರಭಾರೆ ಮಾಡಿ ಐಶಾರಾಮಿ ಜೀವನಕ್ಕೆ ದಾಸರಾಗುತ್ತಿದ್ದಾರೆ. ಪೂರ್ವಜರ ನೆಚ್ಚಿನ ಗ್ರಾಮೀಣ ಜೀವನ ಮರೆತು ಹೋಗಿದ್ದಾರೆ. ಇದೂ ಒಂದು ಮಾದರಿಯ ಕ್ರಾಂತಿಯೇ?

ಹಳ್ಳಿಗಳಲ್ಲಿ ಯಂತ್ರೋಪಕರಣಗಳ ಬಳಕೆ ತೀವ್ರವಾಗಿ ಹೆಚ್ಚಿದ್ದು, ದುಡಿಯುವ ಕೈಗಳಿಗೆ ಕೆಲಸವಿಲ್ಲ ದಂತಾಗಿದೆ ಮಾತ್ರವಲ್ಲ, ಯಾಂತ್ರಿಕತೆಯ ಮೇಲಿನ ಅವಲಂಬನೆ ಹೆಚ್ಚಿದೆ. ಮಾನವನ ದುಡಿಮೆಯ ಶಕ್ತಿಗೆ, ಸಾಮರ್ಥ್ಯಕ್ಕೆ ಬೆಲೆ ಇಲ್ಲದಂತಾಗಿದೆ. ಇದೂ ಒಂದು ಮಾದರಿಯ ಕ್ರಾಂತಿಯೇ ?

ನಾಲ್ಕು ಮಂದಿ ಮಾಡಬಹುದಾಗಿದ್ದ ಕೆಲಸ ಒಂದೇ ಒಂದು ಯಂತ್ರದಿಂದ ಮಾಡಿ ಮುಗಿಸಬಹುದಾಗಿದೆ ! ಹಾಗಾಗಿ, ಶ್ರಮಜೀವನ ಬೇಡವಾಗಿದೆ, ದುಡಿಯುವ ಮನಸ್ಸುಗಳಿಗೆ ಸಹಜವಾಗಿ ಆದಾಯ ಮೂಲವಾಗಿದ್ದು, ಅಮೂಲ್ಯವಾಗಿದ್ದು ಗ್ರಾಮಗಳಲ್ಲಿ ಕೇವಲ ವಯಸ್ಕರು ಮಾತ್ರ ಉಳಿದಿದ್ದು... ದುಡಿಮೆಯೂ ಇಲ್ಲ, ದುಡಿಯು ವವರು ಗ್ರಾಮಗಳಿಗೆ ಮರಳುವ ನಿರೀಕ್ಷೆಯೂ ಇಲ್ಲ ವಾಗಿದ್ದು, ಮುಂದಿನ ದಿನಗಳಲ್ಲಿನ ಬದಲಾವಣೆಗಳನ್ನು ಊಹಿಸುವುದೂ ಕಠಿಣವಾಗುತ್ತಿದೆ. ಇದೂ ಒಂದು ಮಾದರಿಯ ಕ್ರಾಂತಿಯೇ ?




ಹಿಂದಿನ ದಿನಗಳಲ್ಲಿ ಪರಸ್ಪರ ಮಾತು, ಚರ್ಚೆ, ಅಭಿಪ್ರಾಯ ವಿನಿಮಯ, ಪತ್ರ ವ್ಯವಹಾರ, ಉಭಯ ಕುಶಲೋಪರಿ ಇತ್ಯಾದಿಗಳು ಮಾನವ ಸಂಕುಲವನ್ನು ಒಟ್ಟುಗೂಡಿಸುವ ನಿಟ್ಟಿನಲ್ಲಿದ್ದವು. ಪ್ರಸ್ತುತ ತಾಂತ್ರಿಕತೆ ಯಿಂದ, ಮನುಷ್ಯ-ಮನುಷ್ಯನ ನಡುವಿನ ಸಂಬಂಧಗಳು ಕೇವಲ ಸಂಕೇತಗಳಿಗೆ ಸೀಮಿತವಾಗಿವೆ. ಪರಸ್ಪರ, ಮುಖಾ-ಮುಖಿ ಭೇಟಿ ವಿರಳವಾಗುತ್ತಿದೆ. ನೆಂಟಸ್ತನ, ಬಾಂಧವ್ಯಗಳು ವ್ಯಾವಹಾರಿಕವಾಗಿವೆ. ಇದೂ ಒಂದು ಮಾದರಿಯ ಕ್ರಾಂತಿಯೇ ?

ಹೀಗೆ, ಕ್ರಾಂತಿ ಎಂದರೆ ಸಕಲ ಮಾದರಿಯ ಪ್ರತಿಫಲ ಗಳನ್ನು, ನಿರೀಕ್ಷೆಗಳನ್ನು ಹೊತ್ತು ಸಾಗುವ ಬದಲಾವಣೆ ಗಳಾಗಬೇಕಿದ್ದರೂ ಅದರಿಂದ ಹಲವಾರು ಮಾದರಿಯ ನಕಾರಾತ್ಮಕ ಬೆಳವಣಿಗೆಗಳನ್ನು ಕಾಣಬಹುದಾಗಿದೆ, ಅನುಭವಿಸಬಹುದಾಗಿದೆ. ಒಟ್ಟಿನಲ್ಲಿ ಕ್ರಾಂತಿಯ ಹೆಸರಿನಲ್ಲಿ, ಕೈಗಾರಿಕಾ ಕ್ರಾಂತಿಯ ಹೆಸರಿನಲ್ಲಿ ಲಾಭ-ನಷ್ಟದ ನಡುವಿನ ಅಂತರ ಹೆಚ್ಚುತ್ತಿದೆ, ಸಮಾಜದಲ್ಲಿ ಆಧುನಿಕತೆಯ ಕಾರಣಕ್ಕೆ, ವೈಜ್ಞಾನಿಕ ಬೆಳವಣಿಗೆಯ ಕಾರಣಕ್ಕೆ, ಆಧುನಿಕತೆಗೆ ದಾಸರಾಗಿರುವ ಮಂದಿಯ ಮನೋಭಾವದ ಜೀವನವೇ ಒಂದು ಮಹತ್ತರವಾದ ಕ್ರಾಂತಿ ಎಂದರೂ ತಪ್ಪಾಗದು ! ಒಟ್ಟಿನಲ್ಲಿ ಕ್ರಾಂತಿ ಎಂಬುದು ಬದಲಾವಣೆಯ ಸಂಕೇತವಾದ ಹಿನ್ನೆಲೆಯಲ್ಲಿ ಬದಲಾವಣೆ ಸಕಾರಾತ್ಮಕವಾಗಿರಬೇಕೇ, ಇಲ್ಲವೇ ಚಿಂತನೆಗಳು ಬದಲಾಗಬೇಕೆ ಎನ್ನುವುದೇ ಕ್ರಾಂತಿಯ ವಿಚಾರದಲ್ಲಿ ಗೊಂದಲ ಮೂಡಿಸಿರುವ ವಿಚಾರಗಳಾಗಿವೆ!

*ಬೆಂಗಳೂರು* **ನಳಿನಿ. ಆರ್. ಮಾಗಲ್**

**ಅನೈತಿಕ ಹಾಗೂ ಜನವಿರೋಧಿ ರಾಜಕೀಯ ಪ್ರಕ್ರಿಯೆಗೆ ವಿರೋಧ**

ರಾಜ್ಯದ ಚುನಾವಣಾನಂತರದ ರಾಜಕೀಯವು ಅತ್ಯಂತ ಹೀನಸ್ಥಿತಿಯನ್ನು ತಲುಪಿದೆ. ಅನೈತಿಕತೆ, ಭ್ರಷ್ಟತೆ ಹಾಗೂ ಜನವಿರೋಧೀ ಮಾರ್ಗವನ್ನು ಅಟ್ಟಹಾಸದಿಂದ ಕೇಂದ್ರ ಸರ್ಕಾರ ಹಾಗೂ ಅದರ ಬಾಲಗಳಂತೆ ವರ್ತಿಸು ತ್ತಿರುವ ಉಪಾಂಗಗಳು ಅನುಸರಿಸಿ ಎಲ್ಲ ಸಂವಿಧಾನಾತ್ಮಕ ತತ್ವಗಳನ್ನು ಗಾಳಿಗೆ ತೂರಿ ಕುತರ್ಕದಿಂದ ಸಮರ್ಥಿಸಿ ಕೊಳ್ಳುತ್ತಿರುವುದು ಈ ರಾಜ್ಯದ ಜನತೆಯ ಅತ್ಯಂತ ದೊಡ್ಡ ದೌರ್ಭಾಗ್ಯ ಎಂದು ಹೇಳಬಹುದು.

ಈ ದೇಶದ ಎಲ್ಲ ಹಿತಚಿಂತಕರ ಪರವಾಗಿ ಅದರಲ್ಲೂ ಹತ್ತಾರು ಶತಮಾನಗಳಿಂದ ಸತತವಾಗಿ ಸತ್ಯ, ಧರ್ಮ ಹಾಗೂ ಸರಳತೆಯ ತತ್ವಗಳನ್ನು ಆಚರಿಸಿಕೊಂಡು ಬಂದ ಕರ್ನಾಟಕದ ಜನತೆಯ ಪರವಾಗಿ, ಗ್ರಾಮ ಸೇವಾ ಸಂಘವು ಪ್ರಸ್ತುತ ರಾಜಕೀಯ ಅನೈತಿಕತೆಯ ವಿರುದ್ಧ ದನಿ ಏರಿಸಲು ಬದ್ಧವಾಗಿದೆ. ಗ್ರಾಮ ಸೇವಾ ಸಂಘದ ಮೂಲ ತತ್ವವು ಕೈ ಉತ್ಪನ್ನಗಳಿಗೆ ಸೂಕ್ತಬೆಲೆಯನ್ನು ಕೊಡಲೆಂದು ಸತ್ಯಾಗ್ರಹ ಹೂಡುವ ಮಾರ್ಗದಲ್ಲಿದೆ. ಬೆಲೆ ಕೊಡುವುದು ಎಂಬುದಕ್ಕೆ ಎರಡು ಅರ್ಥಗಳಿವೆ? ಆರ್ಥಿಕವಾಗಿ ಹಾಗೂ ಮಾನವ ಮೌಲ್ಯಗಳನ್ನು ಗೌರವಿಸುವ ಮೂಲಕವೆಂದು. ಯಾವುದೇ ವಸ್ತುವನ್ನು ಕೈಗಳನ್ನು ಉಪಯೋಗಿಸಿ ಉತ್ಪಾದನೆ ಮಾಡುವುದು ಕೇವಲ ಒಂದು ಅಮಾನಸ ಕ್ರಿಯೆಯಲ್ಲ. ನಮ್ಮೆಲ್ಲ ವಿಚಾರಗಳು - ಸರಿ ತಪ್ಪು, ಜನ ಹಿತ ಜನವಿರೋಧಿ, ಮೇಲು ಕೀಳು, ಸೂಕ್ತ ಅಸೂಕ್ತಗಳ ಬಗ್ಗೆ ಸ್ಪಷ್ಟವಾದ ನಿಲುವುಗಳು - ಉತ್ಪಾದನೆಯ ಕ್ರಿಯೆ ಹಾಗೂ ಅದರ ಆಧಾರದ ಮೇಲೆ ನಿಂತಿರುವ ಮಾನವೀಯ ಸಂಬಂಧಗಳ ಮೇಲೆ ಆಳವಾದ ಪ್ರಭಾವ ಬೀರುತ್ತವೆ. ಹಾಗಾಗಿ ನಮ್ಮ ನೈತಿಕತೆಯು ಕೂಡ ಉತ್ಪಾದನೆಯ ಅವಿಭಾಜ್ಯ ಅಂಗವಾಗಿರುತ್ತದೆ. ನೈತಿಕತೆ ಇಲ್ಲದೆ ಉತ್ಪಾದನೆ ಅರ್ಥಹೀನ, ಉತ್ಪಾದನೆಯಿಲ್ಲದೆ ನೈತಿಕತೆಯ ಅತ್ಯುಚ್ಚ ವಿಚಾರಗಳು ಕೂಡ ಹಾನಿಕಾರಕ ಎಂಬುದು ಗ್ರಾಮ ಸೇವಾ ಸಂಘದ ಮೂಲತತ್ವ. ಈ ಹಿನ್ನೆಲೆಯಲ್ಲಿ ಇಂದಿನ ರಾಜಕೀಯ ಪಿತೂರಿಗಳು, ಕುತರ್ಕಗಳಿಂದ ಕೂಡಿದ ಸಮರ್ಥನೆಗಳು ಮತ್ತು ದುರುದ್ದೇಶಪೂರಿತ ಶಾಸಕರ ಕೊಳ್ಳುವಿಕೆಗಳು ನಮ್ಮ ನಾಡಿನ ಸಾಮಾನ್ಯ ಜನಜೀವನಕ್ಕೆ ಅತ್ಯಂತ ಹಾನಿಕಾರಕವಲ್ಲದೆ ಭವಿಷ್ಯದಲ್ಲಿ ಇನ್ನೂ ದೊಡ್ಡ ಮಟ್ಟದ ಅನೈತಿಕತೆಗೆ ಎಡೆಮಾಡಿಕೊಡುವ ನೀಚಾನು ಸಂಧಾನ ಎಂಬ ದೃಷ್ಟಿಯಿಂದ ಎಲ್ಲ ಪ್ರಜ್ಞಾವಂತ ನಾಗರಿಕರೂ ಇದರ ವಿರುದ್ಧ ಒಮ್ಮತದಿಂದ ಒಗ್ಗೂಡಿ ಹೋರಾಟ ನಡೆಸಬೇಕೆಂದು ಆಗ್ರಹಿಸುತ್ತೇವೆ.

*ಬೆಂಗಳೂರು* **ಗ್ರಾಮ ಸೇವಾ ಸಂಘ**

ಜರ್ಮನ್ ದೇಶದ ತತ್ವಜ್ಞಾನಿ, ಆರ್ಥಿಕ ತಜ್ಞ, ಪತ್ರಿಕೋದ್ಯಮಿ, ಇತಿಹಾಸಕಾರ, ರಾಜಕೀಯ ಸಿದ್ಧಾಂತಿ, ಸಮಾಜಶಾಸ್ತ್ರಜ್ಞ... ಎಲ್ಲದಕ್ಕೂ ಮುಖ್ಯವಾಗಿ ಕ್ರಾಂತಿಕಾರಿ ಸಮಾಜವಾದಿ ಎಂದೇ ಗುರುತಿಸಲ್ಪಟ್ಟ ಕಾರ್ಲ್ ಮಾರ್ಕ್ಸ್ ಕೈಗಾರಿಕಾ ಕ್ರಾಂತಿಯತ್ತ ಒಲವು ತೋರಿದ್ದರ ಕಾರಣ

ತಿಳಿಯುವ ಕುತೂಹಲ ಮುಖ್ಯವಾಗುತ್ತೆ. ಮಾರ್ಕ್ಸ್ ತನ್ನ ಕಿರಿಯ ವಯಸ್ಸಿನಲ್ಲಿಯೇ ಕಮ್ಯುನಿಸ್ಟ್ ಪ್ರಣಾಳಿಕೆಯನ್ನು ಸಿದ್ಧಪಡಿಸಿದ ಹೆಗ್ಗಳಿಕೆಗೆ ಪಾತ್ರನಾಗಿದ್ದಾನೆ ಹಾಗೂ ಪ್ರತಿಯೊಬ್ಬ ಕಾರ್ಮಿಕನೂ ಸಹ ತನ್ನ ಸಾಮರ್ಥ್ಯದ ಅನುಸಾರ ತಾನು ನೌಕರಿ ಮಾಡುವ ಸಂಸ್ಥೆಯಲ್ಲಿ ಸೂಕ್ತವಾದ, ಗೌರವಾನ್ವಿತ ಸ್ಥಾನ–ಮಾನಕ್ಕೆ ಅರ್ಹನಾಗಬೇಕು ಎಂಬ ವಾದವನ್ನು ಮಂಡಿಸಿದ ಮೂಲ ಕಾರಣವೇ ಆತನ ಆಲೋಚನೆಯನ್ನು ಮಾರ್ಕ್ಸ್‌ವಾದ ಎಂದು ಗುರುತಿಸಲಾಗಿದೆ. ಸ್ವಾತಂತ್ರ್ಯ ನಂತರದ ಭಾರತ ದೇಶದಲ್ಲಿ, ಪ್ರಜಾಪ್ರಭುತ್ವದ ತಳಹದಿಯಲ್ಲಿ ಸ್ಥಾಪಿಸಲಾದ ಆಡಳಿತ ವೈಖರಿಯಲ್ಲಿ, ಕೈಗಾರಿಕೋದ್ಯಮ ಬೆಳೆಯುತ್ತ ಹೋದಂತೆ, ಮಾರ್ಕ್ಸ್ ಸಿದ್ಧಾಂತವನ್ನು ಪರಿಣಾಮಕಾರಿಯಾಗಿ ಅಳವಡಿಸಲು ಸಾಧ್ಯವಾಗಿಲ್ಲವೆಂದೇ ಹೇಳಬಹುದು.

ಸ್ವಾತಂತ್ರ್ಯಪೂರ್ವದ ಹೊಸ್ತಿಲಲ್ಲಿ ಹುಟ್ಟಿದ್ದರೂ, ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸದೇ ಹೋದರೂ ತದನಂತರದ ಆಗು–ಹೋಗುಗಳನ್ನು ಇದುವರೆಗೂ ಗಮನಿಸುತ್ತಿದ್ದು ಹಲವಾರು ಕ್ರಾಂತಿಕಾರಕ ಬದಲಾವಣೆಗಳ ಬಗ್ಗೆ ಮಾಹಿತಿಯು ಮನದಲ್ಲಿರುವ ಹಿನ್ನೆಲೆಯಲ್ಲಿ ಸದರಿ ಚರ್ಚೆಯಲ್ಲಿ ಭಾಗವಹಿಸುವುದು ಸುಲಭವಾಗಿದೆ ಎಂದೇ ಹೇಳಬಹುದು. ಸುಮಾರು ೬–೭ ದಶಕಗಳ ಹಿಂದೆ ಭಾರತದ ಮಾರುಕಟ್ಟೆಯಲ್ಲಿನ ಬಹುತೇಕ ವಸ್ತುಗಳು, ಪದಾರ್ಥಗಳು ವಿದೇಶಿ ಮೂಲದ್ದಾಗಿದ್ದು, ಒಂದು ಕಾಲಘಟ್ಟದಲ್ಲಿ ಆಹಾರ ಪದಾರ್ಥವನ್ನೂ ಸಹ ಆಮದು ಮಾಡಿಕೊಳ್ಳುವ ಪರಿಸ್ಥಿತಿ ಇತ್ತೆಂದರೆ ಇಂದಿನ ಯುವ ಪೀಳಿಗೆಗೆ ನಂಬುವುದು ಅಸಾಧ್ಯ... ಮಾತ್ರವಲ್ಲ, ಬ್ರಿಟಿಷರ ಆಡಳಿತ ಕಾಲದಲ್ಲಿ ನಮ್ಮ ರೈತಾಪಿ ವರ್ಗ ಬೆಳೆದ ಆಹಾರ ಪದಾರ್ಥಗಳನ್ನು ಸ್ವಂತಕ್ಕೆ ಬಳಕೆ ಮಾಡುವಲ್ಲಿ ಕಟ್ಟುಪಾಡುಗಳಿದ್ದವೆಂದರೆ ಅಚ್ಚರಿಯಾಗುತ್ತದೆ. ಅದೇ ರೀತಿ ಕೈಗಾರಿಕೆಗಳ ಕಾರ್ಯವೈಖರಿಯಲ್ಲಿಯೂ ಸಹ ವಿದೇಶಿಯರ ಪ್ರಭಾವ ಇದ್ದದ್ದು ವಾಸ್ತವ. ಆದರೆ, ಕಾಲಕ್ರಮೇಣ ಭಾರತದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಡಳಿತ ನಡೆಸಿದ ಸರ್ಕಾರಗಳು, ಚುನಾಯಿತ ಪ್ರತಿನಿಧಿಗಳ ನಿರಂತರ ಶ್ರಮದಿಂದ, ಆಲೋಚನೆಯಿಂದ ನಮ್ಮ ಕೈಗಾರಿಕಾ ರಂಗದಲ್ಲಿ ನಿರಂತರ ಬದಲಾವಣೆಗಳಾಗುತ್ತಿವೆ... ಇಂದಿಗೂ ಸಹ ಬದಲಾವಣೆಗಳ ಪರ್ವವನ್ನು ಕಾಣಬಹುದಾಗಿದೆ.

ನಮ್ಮ ದೇಶದಲ್ಲಿ, ಮಾರ್ಕ್ಸ್ ಸಿದ್ಧಾಂತದ ಪ್ರಕಾರ, ಇದುವರೆಗಿನ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, 'ವೈಜ್ಞಾನಿಕ ತಾಂತ್ರಿಕ ಕ್ರಾಂತಿ' ಸಂಪೂರ್ಣವಾಗಿ ಪರಿಣಾಮಕಾರಿಯಾಗದಿರಲು ಹಲವು ಕಾರಣಗಳಿರಬಹುದು. ಅವುಗಳಲ್ಲಿ ಪ್ರಮುಖವಾದದ್ದು ಬಂಡವಾಳಶಾಹಿಗಳ (ಧಣಿಗಳ), ಕಾರ್ಮಿಕರ ಹಾಗೂ ಕಾರ್ಮಿಕ ಮುಖಂಡರ ನಡುವಿನ ಸುಸಂಘಟನೆಯ ಕೊರತೆ... ಮಾತ್ರವಲ್ಲ, ಕಾರ್ಮಿಕರಲ್ಲಿ ಸಾಕ್ಷರತೆಯ ಕೊರತೆ... ಹೀಗೆ ಮುಂದುವರೆದು ಅವಲೋಕಿಸಿದರೆ ಸ್ವಾತಂತ್ರ್ಯದ ನಂತರದಲ್ಲಿ ಬದಲಾವಣೆ, ಸುಧಾರಣೆ ಕಾಣದ ಹಲವಾರು ಕಾನೂನುಗಳು ಹಾಗೂ ಕಾರ್ಮಿಕರ ಮನಃಸ್ಥಿತಿ ಎಂದರೆ ತಪ್ಪಾಗಲಿಕ್ಕಿಲ್ಲ. ಅಪ್ರಚಲಿತ ಕಾರ್ಮಿಕ ಸ್ನೇಹೀ ಕಾನೂನುಗಳಿಗೆ ನೀಡಬಹುದಾದ ಉದಾಹರಣೆ ಎಂದರೆ ಕಾರ್ಮಿಕ ಮುಖಂಡ ದತ್ತ ಸಾಮಂತ್ ನೇತೃತ್ವದಲ್ಲಿ ಆಯೋಜಿಸಿದ ಸುದೀರ್ಘ ಹರತಾಳದ ಕಾರಣಕ್ಕೆ ಮುಂಬೈ ನಗರದ ಜವಳಿ ಕಾರ್ಖಾನೆಗಳು ಹಾಗೂ ಪ್ರತಿಷ್ಠಿತ ಪ್ರೀಮಿಯರ್ ಆಟೊಮೊಬೈಲ್ ಸಂಸ್ಥೆ ಶಾಶ್ವತವಾಗಿ ಮುಚ್ಚಿದ್ದು... ಮುಂದುವರೆದು ಗಮನಿಸಿದರೆ ಭೋಪಾಲ್ ಅನಿಲ ದುರಂತದ ನಂತರ ಕಾರ್ಖಾನೆಯ ಆಡಳಿತ ಮಂಡಳಿಯ ಮೇಲೆ ಯಾವುದೇ ಕಾನೂನಾತ್ಮಕ ಕ್ರಮಕ್ಕೆ ಮುಂದಾಗದೆ, ನೊಂದ ಕಾರ್ಮಿಕರ ಕುಟುಂಬಗಳಿಗೆ ಇದುವರೆಗೂ ಪರಿಹಾರ ನೀಡಿಲ್ಲದಿರುವುದು.... ಕೃಷಿ ಕ್ಷೇತ್ರಕ್ಕೆ ಸೀಮಿತವಾಗಿ ಗೇರು ಬೆಳೆಗಾರರನ್ನು ಸಂಕಷ್ಟಕ್ಕೆ ಗುರಿ ಮಾಡಿದ ಎಂಡೋ ಸಲ್ಫಾನ್ ಅವಘಡ !

ಒಟ್ಟಾರೆಯಾಗಿ, ವಿದೇಶಿ ಬಂಡವಾಳದ ಹಿನ್ನೆಲೆಯಲ್ಲಿ, ವಿದೇಶಿ ತಂತ್ರಜ್ಞಾನದ ನೆರವಿನಿಂದ, ಜಾಗತೀಕರಣದ ಬುನಾದಿಯಲ್ಲಿ ಸ್ಥಾಪಿತವಾದ ಕೈಗಾರಿಕೆಗಳು ಹಂತ–ಹಂತವಾಗಿ ಉನ್ನತಿ ಕಂಡರೂ ಸಹ ಕಾರ್ಮಿಕರ ಆರ್ಥಿಕ ಪರಿಸ್ಥಿತಿಯಲ್ಲಿ ನಿರೀಕ್ಷಿತ ಮಟ್ಟದ ಬೆಳವಣಿಗೆಯನ್ನು ಕಾಣಲಾಗುತ್ತಿರುವುದು ಕೇವಲ ಒಂದೆರಡು ದಶಕಗಳಿಂದೀಚೆಗೆ. ಐ. ಟಿ. / ಬಿ. ಟಿ. ಉದ್ಯೋಗಿಗಳಲ್ಲಿ ಕಾಣಲಾಗುತ್ತಿರುವ ಆರ್ಥಿಕ ಬದಲಾವಣೆಗಳಿಂದ ಇತರೆ ಕೆಲವು ವರ್ಗದ ವ್ಯಾಪಾರ/ವ್ಯವಹಾರದ ಮೇಲೆ ಸಕಾರಾತ್ಮಕ ಪರಿಣಾಮ ಉಂಟಾಗಿದೆ ಎಂದರೆ ಅತಿಶಯೋಕ್ತಿಯಾಗದು. ಆದರೂ ಇತ್ತೀಚೆಗೆ ಆತಂಕ ಮೂಡಿಸಿರುವ ಎ. ಐ. (Artificial Intelligence) ಮುಂದಿನ ದಿನಗಳಲ್ಲಿ ಎಸಗಬಹುದಾದ ಪರಿಣಾಮಗಳನ್ನು ಗಂಭೀರವಾಗಿ ವಿಮರ್ಶಿಸಬೇಕಾಗಿದೆ.

*ಬೆಂಗಳೂರು* **ಸುಶೀಲಾ ಬಿ. ಆರ್. ರಾಮಣ್ಣ**

✉ ಜೂನ್ ಸಂಚಿಕೆಯು, ಎರಡು ಪ್ರಮುಖ ವೈಚಾರಿಕ ಲೇಖನಗಳಿಂದ, ತನ್ನ ಮೌಲ್ಯವನ್ನು ಹೆಚ್ಚಿಸಿಕೊಂಡಿದೆ. ಮೊದಲನೆಯದಾಗಿ, ಡಾ॥ ಜಿ. ರಾಮಕೃಷ್ಣರವರ ಸೃಜನಶೀಲ ರಾಜಕೀಯದ ಕುರಿತಾದ ಲೇಖನ. ಸೃಜನಶೀಲ ರಾಜಕೀಯ, ಸಮಾಜದಲ್ಲಿ ಗುಣಾತ್ಮಕ ಸಾಮಾಜಿಕ ಬದಲಾವಣೆಯನ್ನುಂಟುಮಾಡಬಲ್ಲದೆಂಬ ವಿಷಯ, ಐತಿಹಾಸಿಕವಾಗಿ ನಿರೂಪಿಸಲ್ಪಟ್ಟಿದೆ. ಅನೇಕ ದೇಶಗಳಲ್ಲಿ, ವಸಾಹತುಶಾಹಿ ದಬ್ಬಾಳಿಕೆ ಶೋಷಣೆಗಳ ಹಿನ್ನೆಲೆಯಲ್ಲಿ, ರಾಷ್ಟ್ರೀಯ ವಿಮೋಚನಾ ಚಳುವಳಿಗಳು, ವಸಾಹತುಶಾಹಿ ಆಡಳಿತದಿಂದ ಮುಕ್ತಗೊಂಡು ಗುಣಾತ್ಮಕ ಬದಲಾವಣೆಗಳನ್ನು ತಂದಿವೆ. ಭಾರತದಲ್ಲಿ ಕೂಡ, ಬ್ರಿಟಿಷರ ವಿರುದ್ಧ ನಡೆದ ಸ್ವಾತಂತ್ರ್ಯ ಸಂಗ್ರಾಮ, ದೇಶದಲ್ಲಿ ಗುಣಾತ್ಮಕ ಬದಲಾವಣೆ ಉಂಟುಮಾಡಿತು. ಸ್ವಾತಂತ್ರ್ಯಾನಂತರದ ಹಲವು ದಶಕಗಳಲ್ಲಿ, ರಾಜಕೀಯ ಸ್ವಲ್ಪಮಟ್ಟಿಗೆ ಮೌಲಿಕವಾಗಿತ್ತೆಂದು ಹೇಳಬಹುದು. ಪ್ರಸ್ತುತ ಸನ್ನಿವೇಶದಲ್ಲಿ, ನಮ್ಮ ದೇಶದ ರಾಜಕೀಯ, ಅಧಿಕಾರ ಕೇಂದ್ರಿತ ಚುನಾವಣಾ ರಾಜಕೀಯವಾಗಿದೆ. ಸಾಮಾನ್ಯವಾಗಿ, ಐದು ವರ್ಷಕ್ಕೊಮ್ಮೆ ಜರುಗುವ ಚುನಾವಣಾ ಪ್ರಕ್ರಿಯೆ ಯಾವುದಾದರೂ ರಾಜಕೀಯ ಪಕ್ಷವನ್ನು ಅಧಿಕಾರಕ್ಕೇರಿಸುತ್ತದೆ. ಆಡಳಿತಾರೂಢ ರಾಜಕೀಯ ಪಕ್ಷ ಜನತೆಗೆ ಕೆಲವು 'ಭಾಗ್ಯ'ಗಳನ್ನು ಕರುಣಿಸಿ, ಸರ್ಕಾರದ 'ಸಾಧನೆ'ಗಳೆಂದು ಸಂಭ್ರಮಿಸುತ್ತದೆ. ನಮ್ಮ ದೇಶದಲ್ಲೂ, ರಾಜಕೀಯ ಸೃಜನಶೀಲತೆಯ ನೆಲೆಯಲ್ಲಿ ಭದ್ರವಾಗಿ ನೆಲೆಯೂರಿದಾಗ, ಗುಣಾತ್ಮಕ ಸಾಮಾಜಿಕ ಬದಲಾವಣೆ ಸಾಧ್ಯವೆಂದು ನಿರೀಕ್ಷಿಸಬಹುದು.

ಎರಡನೆಯದಾಗಿ, ಶ್ರೀಯುತ ಅನಿಲ್ ರಾಜಿಮ್‌ವಾಲೆಯವರ ವೈಜ್ಞಾನಿಕ, ತಾಂತ್ರಿಕ ಕ್ರಾಂತಿಯ ಕುರಿತಾದ ಲೇಖನ. ನನ್ನ ಅಭಿಪ್ರಾಯದಲ್ಲಿ ಲೇಖನ ಅತ್ಯಂತ ಸೂಕ್ತ, ಸಾಂದರ್ಭಿಕ, ಸಮಯಯೋಚಿತ ಮತ್ತು ಔಚಿತ್ಯಪೂರ್ಣ. ಲೇಖಕರು ಗಮನ ಸೆಳೆದಿರುವ ಹಲವು ಬದಲಾವಣೆಗಳನ್ನು ಎಡಪಂಥೀಯ ಸಿದ್ಧಾಂತದ ಕುರಿತು ಬದ್ಧತೆಯನ್ನು ಬೆಳೆಸಿಕೊಂಡಿರುವ ಎಲ್ಲರೂ ಪರಿಗಣಿಸಬೇಕು. ಮೊದಲನೆಯದಾಗಿ, ಹತ್ತೊಂಭತ್ತನೆ ಶತಮಾನದ ಉತ್ತರಾರ್ಧದಲ್ಲಿ, ಘಟಿಸಿದ ಔದ್ಯೋಗಿಕ ಕ್ರಾಂತಿಯ ಹಿನ್ನೆಲೆಯಲ್ಲಿ ರೂಪುಗೊಂಡ ಉತ್ಪಾದನಾ ವಿಧಾನಗಳು, ಸಂಬಂಧಗಳು, ಕಾರ್ಮಿಕ ವರ್ಗದ ಸ್ವರೂಪ, ಮಾರುಕಟ್ಟೆಗಳ ಸ್ಥಿತಿ, ಸಾಮಾಜಿಕ ಸ್ಥಿತಿಗತಿಗಳು ಇಂದು ಗಮನಾರ್ಹವಾಗಿ ಬದಲಾಗಿವೆ ಎಂಬುದು ಸತ್ಯ. ಅಂದು ರಷ್ಯಾ, ಚೀನಾ, ಕ್ಯೂಬ, ವಿಯಟ್ನಾಂ ದೇಶಗಳಲ್ಲಿ ಕ್ರಾಂತಿಕಾರಿ ನಾಯಕರು ರೂಪಿಸಿದ್ದ ಕ್ರಾಂತಿಯ ಪರಿಕಲ್ಪನೆಯು ಇಂದಿಗೂ ಸಾರ್ವಕಾಲಿಕವಾಗಿ ಪ್ರಸ್ತುತ ಎಂದು ಸಾಧಿಸಲಾಗುವುದಿಲ್ಲ. ತೀವ್ರ ವೇಗದಲ್ಲಿ ಜಗತ್ತನ್ನು ಆಕ್ರಮಿಸುತ್ತಿರುವ ವೈಜ್ಞಾನಿಕ ತಾಂತ್ರಿಕ ಕ್ರಾಂತಿ, ಔದ್ಯೋಗಿಕ ಕ್ಷೇತ್ರದಲ್ಲಿ, ಉತ್ಪಾದನಾ ವಿಧಾನ ಸಂಬಂಧಗಳು ಸಾಮಾಜಿಕ ಸನ್ನಿವೇಶ ಮತ್ತು ಮಾರುಕಟ್ಟೆಯ ವಿಸ್ತಾರಗಳಲ್ಲಿ ಮಾರ್ಪಾಡುಗಳನ್ನು ಉಂಟುಮಾಡಿವೆ. ಕಾರ್ಲ್ ಮಾರ್ಕ್ಸ್ ತಾನು ವೈಜ್ಞಾನಿಕವಾಗಿ ವಿಶ್ಲೇಷಿಸಿ, ನಿರೂಪಿಸಿದ ಸೈದ್ಧಾಂತಿಕ ಸೂತ್ರಗಳು ಕಾಲಪರಿಮಿತಿಗೊಳಪಡದ, ಸಾರ್ವಕಾಲಿಕವಾಗಿ, ಎಲ್ಲ ದೇಶಗಳಲ್ಲೂ, ಎಲ್ಲ ಸಂದರ್ಭಗಳಿಗೂ ಅನ್ವಯ ಎಂದು ಪರಿಗಣಿಸಿರಲಿಲ್ಲ. ಮಾರ್ಕ್ಸ್‌ವಾದವು ಜಡ್ಡುಗಟ್ಟಿದ ಸಿದ್ಧ ಸೂತ್ರವಲ್ಲ, ಸಾಮಾಜಿಕ ಬದಲಾವಣೆಯ ನಿಟ್ಟಿನಲ್ಲಿ ರೂಪುಗೊಳ್ಳುವ ಹೋರಾಟಗಳಿಗೆ ಮಾರ್ಗದರ್ಶಿ ಸೂಚಕ ಎಂಬುದನ್ನು ಮನಗಾಣಬೇಕು.

ಇಂದು ನಮ್ಮ ದೇಶದಲ್ಲಿ, ಕಮ್ಯುನಿಸ್ಟ್ ಮತ್ತು ಎಡಪಂಥೀಯ ಪಕ್ಷಗಳು ತಮ್ಮ ಅಸ್ತಿತ್ವದ ನೆಲೆ ಕಳೆದುಕೊಂಡು ಅವನತಿಯ ದಿಕ್ಕಿನತ್ತ ಸಾಗಿವೆ. ಭಾರತದಲ್ಲಿ ಕಮ್ಯುನಿಸ್ಟ್ ಚಳುವಳಿ ಸಾವಿರಾರು ಕಾರ್ಯಕರ್ತರ, ನಾಯಕರ ಪರಿಶ್ರಮ, ತ್ಯಾಗ, ಬಲಿದಾನಗಳಿಂದ ರೂಪುಗೊಂಡಿದೆ. ಆದರೆ ಕಮ್ಯುನಿಸ್ಟ್ ಪಕ್ಷಗಳು ಸಾಂದರ್ಭಿಕವಾಗಿ ಎದುರುಗೊಳ್ಳುವ ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಬಿಕ್ಕಟ್ಟುಗಳು, ಸವಾಲುಗಳಿಗೆ ಪ್ರತಿಸ್ಪಂದಿಸದೆ ಜನಮಾನಸದಿಂದ ದೂರಾಗಿವೆ. ಪಕ್ಷಗಳ ನೇತೃತ್ವದಲ್ಲಿ ಶ್ರಮಿಸುತ್ತಿರುವ ಕಾರ್ಮಿಕ ಸಂಘಟನೆಗಳು, ಕಾರ್ಮಿಕರ ಆರ್ಥಿಕ ಬೇಡಿಕೆಗಳು ಮತ್ತು ಸವಲತ್ತುಗಳನ್ನು ಈಡೇರಿಸುವ ಕಾರ್ಯಕ್ಕೆ ಸೀಮಿತಗೊಂಡಿವೆ.

ಇಂದು ಯಾರೇ ಮಾರ್ಕ್ಸ್‌ವಾದಿ ಸಿದ್ಧಾಂತವನ್ನು, ಸೂತ್ರಗಳನ್ನು ವಿಶ್ಲೇಷಿಸುವ, ಪರಾಮರ್ಶಿಸುವ ಪ್ರಯತ್ನ ಮಾಡಿದರೂ, ಅಂತಹ ಪ್ರಯತ್ನವನ್ನು ಪರಿಷ್ಕರಣವಾದಿ ಪ್ರಯತ್ನ ಎಂದು ಅರ್ಥೈಸುವ ಸಾಧ್ಯತೆಯಿದೆ. ಅಂತಹ ಪ್ರಯತ್ನಗಳನ್ನು ಸಂಪೂರ್ಣವಾಗಿ ತಿರಸ್ಕರಿಸುವುದು ಸರಿಯಲ್ಲ. ಯಾವ ಪ್ರಯತ್ನ ನಮ್ಮ ದೇಶದ ಆರ್ಥಿಕ ಸಾಮಾಜಿಕ, ರಾಜಕೀಯ ಮೂಲಭೂತ ಬದಲಾವಣೆಯ ಗುರಿಗೆ ಪೂರಕವಾಗಿದೆ ಎಂಬುದನ್ನು ಗುರುತಿಸಬೇಕಾಗಿದೆ. ಕಮ್ಯುನಿಸ್ಟ್ ಪಕ್ಷಗಳ ನಾಯಕರು, ಸೈದ್ಧಾಂತಿಕ ನಿಪುಣರು, ಪ್ರಾಮಾಣಿಕ, ಸದುದ್ದೇಶದ ಪ್ರಯತ್ನಗಳನ್ನು ಗಂಭೀರವಾದ ಚಿಂತನೆಗೊಳಪಡಿಸಬೇಕು.

*ಬೆಂಗಳೂರು* **ಶಂಕರನಾರಾಯಣ**

# ಸಾಹಿತ್ಯ ಸಿದ್ಧಾಂತ ಸಮಾಜ

ಜಿ. ರಾಮಕೃಷ್ಣ

ಇದೇ ಮೇ ೨೬–೨೭ರಂದು "ಬಹುತ್ವ ಭಾರತ – ಇಂದು ಮತ್ತು ನಾಳೆ" ಎಂಬ ಶೀರ್ಷಿಕೆಯಡಿ ಧಾರವಾಡದಲ್ಲಿ ಸಮಾವೇಶವೊಂದು ಜರುಗಿತು. ಅಲ್ಲಿಯ ಒಂದು ಗೋಷ್ಠಿಯಲ್ಲಿ ನೀಡಲಾದ ಉಪನ್ಯಾಸದ ಲಿಖಿತ ರೂಪ ಇಲ್ಲಿದೆ. 'ಎಡ ಮತ್ತು ಬಲ' ಎಂಬ ವಿಭಜನೆ ಬೇಡವೆಂದು ಆಗ್ರಹಿಸುತ್ತಿದ್ದ ಡಾ॥ ಗಿರಡ್ಡಿ ಗೋವಿಂದರಾಜ ಅವರು ಸಮಾವೇಶಕ್ಕೆ ಕೆಲವೇ ದಿನಗಳ ಹಿಂದೆ ತೀರಿಕೊಂಡಿದ್ದರು. "ಅವರ ಬಗ್ಗೆ ನಮಗೆ ಏನೇ ತಕರಾರುಗಳಿರಲಿ, ಅವರ ಪ್ರೌಢಿಮೆಯನ್ನು ಗುರುತಿಸಿ ಗೌರವಿಸಬೇಕು" ಎಂದು ಹೇಳಿದ ಲೇಖಕನು ತನ್ನ ಅಂದಿನ ಚರ್ಚೆಯನ್ನು ಮಾನ್ಯ ಗಿರಡ್ಡಿಯವರಿಗೆ ಅರ್ಪಿಸಿದ್ದು ಔಚಿತ್ಯಪೂರ್ಣವಾಗಿತ್ತು.

ಬಹುತ್ವವು ನಮ್ಮ ದೇಶದ ವಿಶೇಷ ಲಕ್ಷಣ ಎಂದು ಶತಮಾನಗಳಿಂದ ಹೇಳಿಕೊಂಡು ಬಂದಿದ್ದೇವೆ. ವಿವೇಕಾನಂದರು ಋಗ್ವೇದದ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ಮಾತನ್ನು ನೂರಾರು ಸಲ ಉದ್ಧರಿಸಿದ್ದಾರೆ. ಮೂಲದಲ್ಲಿ ಅದರ ತಾತ್ಪರ್ಯಕ್ಕೂ ಬಹುತ್ವಕ್ಕೂ ಏನೂ ಸಂಬಂಧವಿಲ್ಲ. ಉಪನಿಷತ್ತುಗಳಲ್ಲಿ ಬಹುವಿಧದ ಚಿಂತನೆಗಳಿವೆ. ಜಗತ್ತು ಯಾರಿಂದಲೂ ಸೃಷ್ಟಿಸಲ್ಪಟ್ಟಿಲ್ಲ, ಪ್ರಕೃತಿಯು ಬಾಹ್ಯ ಶಕ್ತಿಯ ಮಧ್ಯಪ್ರವೇಶವಿಲ್ಲದೆ ತನ್ನಿಂದ ತಾನೇ ವಿಕಾಸಗೊಂಡಿದೆ ಎಂಬ ಗಾಢ ಚಿಂತನೆಯು ಛಾಂದೋಗ್ಯದಲ್ಲಿ ವಿಸ್ತರಿಸಲ್ಪಟ್ಟಿದೆ. (ಸದೇವ ಸೋಮ್ಯ ಇದಂ ಅಗ್ರೇ ಆಸೀತ್। ತದೈಕ್ಷತ ಬಹು ಸ್ಯಾಂ ಪ್ರಜಾಯೇಯ). "ಆತ್ಮವೆಂದರೆ ನೀನು ಏನೆಂದು ತಿಳಿದಿದ್ದೀಯೆ?" ಎಂಬ ಪ್ರಶ್ನೆಗೆ ಉದ್ದಾಲಕ ಆರುಣಿಯು "ಪೃಥ್ವಿಯನ್ನು ನಾನು ಆತ್ಮವೆಂದು ಪರಿಗಣಿಸುತ್ತೇನೆ" ಎಂಬ ಉತ್ತರವನ್ನು ನೀಡಿದನೆಂದು ಅದೇ ಉಪನಿಷತ್ತಿನಲ್ಲಿ ಹೇಳಲಾಗಿದೆ. ಅಂದರೆ, ಭೌತ ವಸ್ತುವೇ ಜಗತ್ತಿನ ಮೂಲ, ಅದು ತನ್ನ ಸ್ವಭಾವದಿಂದ ನಿಯಂತ್ರಿತವಾಗಿದೆ, ಆತ್ಮವೇನಾದರೂ ಪ್ರತ್ಯೇಕವಾದ ದ್ರವ್ಯವೆಂದೆನಿಸಿಕೊಂಡರೆ ಅದರ ಮೂಲ ಸಹ ಭೌತವಸ್ತುವೇ ಆಗಿರುತ್ತದೆ ಎಂದರ್ಥ. ಶ್ವೇತಾಶ್ವತರ ಉಪನಿಷತ್ತು ಆರಂಭವಾಗುವುದೇ ಜಗತ್ತಿನ ಅಸ್ತಿತ್ವಕ್ಕೆ ಹಲವು ಪ್ರತ್ಯೇಕ ಕಾರಣಗಳನ್ನು ನೀಡಲಾಗಿದೆಯೆಂಬ ಮಾತಿನಿಂದ. ಇದೆಲ್ಲಾ ಬಹುತ್ವವನ್ನು ಚಿಂತನೆಯ ಅನಿವಾರ್ಯ ಲಕ್ಷಣವೆಂಬುದನ್ನು ಸ್ಥಾಪಿಸಲು ಹೊರಟ ಪ್ರಕ್ರಿಯೆಯೇ ಆಗಿದೆ. ಆದರೆ ಉಪನಿಷತ್ತುಗಳ ಸುಮಾರು ಏಳುನೂರು–ಎಂಟುನೂರು ವರ್ಷಗಳ ನಂತರ ರಚಿತವಾದ 'ಬ್ರಹ್ಮಸೂತ್ರ'ವೆಂಬ ಗ್ರಂಥವು ಬಹುತ್ವವನ್ನು ಹೊಸಕಿಹಾಕಿ ಎಲ್ಲ ಉಪನಿಷತ್ತುಗಳ ಸರ್ವಸ್ವವೂ ಏಕಾರ್ಥತೆಯನ್ನು ಹೊಂದಿದೆಯೆಂಬ ಮಿಥ್ಯಾ ಸಿದ್ಧಾಂತವನ್ನು ಪ್ರತಿಪಾದಿಸಿತು. ಅದನ್ನು 'ಸಮನ್ವಯ' ಎಂದು ಕರೆಯಲಾಯಿತು (ಬ್ರ. ಸೂ. ೧.೧.೪: ತತ್ತು ಸಮನ್ವಯಾತ್). ವಿರೋಧಾರ್ಥಗಳಿರುವಂತೆ ಕಂಡುಬಂದರೆ ಅಂತಹ ವಾಕ್ಯಗಳನ್ನು ಏಕಾರ್ಥವಿರುವ ವಾಕ್ಯಗಳೆಂದು ಸಮನ್ವಯಗೊಳಿಸಿಕೊಳ್ಳಬೇಕೆಂಬುದು ಅದರ ಸೂಚನೆ. ಮೂರು–ನಾಲ್ಕು ಶತಮಾನಗಳಲ್ಲಿ ವಿವಿಧ ಚಿಂತಕರು ಹತ್ತಾರು ವಿಭಿನ್ನ ಭೌಗೋಳಿಕ ಪ್ರದೇಶಗಳಲ್ಲಿ ರಚಿಸಿದ ಉಪನಿಷತ್ತುಗಳಿಗೆಲ್ಲಾ ಒಂದೇ ಅರ್ಥ ಅಥವಾ ಉದ್ದೇಶ ಇರಬೇಕೆಂದು ಆಗ್ರಹಿಸುವುದು ಬೌದ್ಧಿಕ ದಾರಿದ್ರ್ಯವನ್ನು ಸೂಚಿಸುತ್ತದೆ, ಉಪನಿಷತ್ತುಗಳಿಗೆ ಅಪಚಾರವೆಸಗುತ್ತದೆ. ಈ ಮಾದರಿಯ ಚಿಂತನೆಯು ವಿವೇಕವೂ ಅಲ್ಲ, ವಿದ್ವತ್ತೂ ಅಲ್ಲ. ಬಹ್ವರ್ಥಗಳಿದ್ದರೆ ಏನು ಅಡ್ಡಿ ಎಂಬುದನ್ನು ಶಂಕರಾದಿ ಆಚಾರ್ಯರು ವಿಮರ್ಶಿಸ ಹೋಗಲಿಲ್ಲ, ಬದಲಾಗಿ ಬ್ರಹ್ಮಸೂತ್ರವೆಂಬ ಕಗ್ಗಂಟಿನಲ್ಲಿ ಸಿಲುಕಿ ಏಕಮುಖೀ ಚಿಂತನೆಗೆ ತಮ್ಮನ್ನು ತಾವು ತೆತ್ತುಕೊಂಡರು. ಬೇರೆ ಬೇರೆ ಸಿದ್ಧಾಂತಗಳಿದ್ದರೆ

ಅವನ್ನು ತಿಳಿಯಬೇಕು, ಆಯ್ಕೆ ಮಾಡಿಕೊಳ್ಳಬೇಕು, ಅವುಗಳ ನಡುವೆ ಏನಾದರೂ ಸಾಮ್ಯತೆ ಇದ್ದರೆ ಅದನ್ನು ಬೆಳೆಸಬೇಕು, ಒಂದಕ್ಕೊಂದು ಪೂರಕವಾಗುವಂತೆ ಗ್ರಹಿಸಬೇಕು. ಏಕಮೇವ ಸಿದ್ಧಾಂತವೆಂಬುದು ಏಕಮೇವ ವ್ಯಕ್ತಿಯ ಸಂದರ್ಭದಲ್ಲಿ ಸಾಧ್ಯವಿರಬಹುದು, ಆದರೆ ಬಹುಜನರು ಒಂದೇ ದೃಷ್ಟಿಗೆ ಕಟ್ಟುಬೀಳಬೇಕೆಂಬುದು ಇತಿಹಾಸದಲ್ಲೆಂದೂ ವ್ಯಾವಹಾರಿಕವಾಗಿ ಸಾಧ್ಯವಾಗಿಲ್ಲ. "ಬಹುಜನ ಕನ್ನಡಿಗರು" ಎಂಬ ವಾರಪತ್ರಿಕೆಯಲ್ಲಿ ಇತ್ತೀಚೆಗೆ ಪ್ರದೀಪ್ ಎಸ್. ಶೆಟ್ಟಿ ಇದನ್ನು ಚರ್ಚಿಸಿ ಅಪಸಿದ್ಧಾಂತಗಳನ್ನು ಹೇಗೆ ಮತ್ತು ಏಕೆ ಬೆಳೆಸಲಾಗುತ್ತದೆಂಬುದನ್ನು ವಿವರಿಸಿದ್ದಾರೆ.

ಸಾಹಿತ್ಯದ ಸಂದರ್ಭದಲ್ಲಿ ಸಿದ್ಧಾಂತಗಳನ್ನು ಕುರಿತು ವ್ಯಾಖ್ಯಾನಿಸಿಕೊಳ್ಳುವಾಗ ತಾಂತ್ರಿಕ ವಿಮರ್ಶಾ ಸಿದ್ಧಾಂತಗಳನ್ನಾಗಲಿ, ಅವುಗಳ ಪ್ರಮುಖ ಪ್ರತಿಪಾದಕರನ್ನಾಗಲಿ ಅಗತ್ಯವಾಗಿ ಹೆಸರಿಸಲೇಬೇಕೆಂಬ ಗೋಜಿಗೆ ಹೋಗಬೇಕಾಗಿಲ್ಲ. ನಮ್ಮ ನಾಡಿನ ಚಿಂತಕರಲ್ಲಿ ಮಾನ್ಯ ಡಾ॥ ಎಂ. ಚಿದಾನಂದಮೂರ್ತಿಯವರು ಪಾಂಡಿತ್ಯಕ್ಕೆ ಖ್ಯಾತರಾಗಿರುವಂತೆ ವಿಚಿತ್ರ ವಿಮರ್ಶಾ ಪದ್ಧತಿಗೂ ಖ್ಯಾತರಾಗಿದ್ದಾರೆ. ತಮ್ಮ ಕೆಲವು ಪ್ರಕಟಿತ ಲೇಖನಗಳ ಸಂಕಲನವೊಂದನ್ನು ಸದ್ಯದಲ್ಲೇ ಹೊರತರಲಿದ್ದಾರೆ. ಆ ಪೈಕಿ ಎರಡು ಲೇಖನಗಳ ಪ್ರತಿಗಳನ್ನು ನನಗೆ ಕಳಿಸುವ ಕೃಪೆ ತೋರಿದ್ದಾರೆ. ಕನ್ನಡದ ಪ್ರಗತಿಪರ ಸಾಹಿತಿಗಳು ನಿಜಕ್ಕೂ ಹೃದಯರಹಿತರು ಎಂಬರ್ಥ ಬರುವ ಟೀಕೆಯನ್ನು ಅವರು ತಮ್ಮ ಒಂದು ಲೇಖನದಲ್ಲಿ ಮಾಡಿದ್ದಾರೆ: "ದಯೆ, ಮಾನವೀಯತೆ, ಸಾಮಾಜಿಕ ಕಳಕಳಿ, ಪ್ರಗತಿಗಾಮಿ ಮನೋಧರ್ಮ, ಕ್ರಾಂತಿ ಇತ್ಯಾದಿಗಳೆಲ್ಲ ಬಹುತೇಕ ಅವರ ಮಾತುಗಳಿಗೆ ಅಥವಾ ಬರಹಕ್ಕೆ ಮೀಸಲು. ಬಡತನ, ರೋಗ, ನಿಸ್ಸಹಾಯಕತೆ, ಅಸ್ಪೃಶ್ಯತೆ, ಅಸಮಾನತೆ ಇತ್ಯಾದಿಗಳೆಲ್ಲ ಅವರಿಗೆ ಮಾತಿನ (ಅಥವಾ ಸಾಹಿತ್ಯದ) ಮೂಲಕ ಖಂಡನೆಯ ವಿಷಯಗಳು. ಬಡತನ ನಿವಾರಣೆಗೆ ಅವರು ವಾಸ್ತವವಾಗಿ ಏನು ಮಾಡಿದ್ದಾರೆ, ತಮ್ಮ ಕೈಲಾದಷ್ಟು ಧನಸಹಾಯ ಏನು ನೀಡಿದ್ದಾರೆ ಎಂಬ ಪ್ರಶ್ನೆಗೆ ಉತ್ತರ ಸಿಗುವುದು ಕಷ್ಟ. ಬಡತನ ಇರುವುದು ಅಗತ್ಯ – ಇಲ್ಲದಿದ್ದರೆ ಪದ್ಯ, ನಾಟಕ, ಕತೆ ಹೇಗೆ ಬರೆಯುವುದು?"

ಧಾರವಾಡದ ಸಮಾವೇಶದಲ್ಲಿ ಸೇರಿರುವ ಸಾಹಿತಿಗಳಿಗೆ ಇದೊಂದು ಪ್ರಬಲವಾದ ಸವಾಲು ಎನ್ನಲಡ್ಡಿ ಇಲ್ಲ. ತಾವಾದರೋ ಅತ್ಯಂತ ಹೃದಯವಂತರು ಮತ್ತು ಢೋಂಗಿ ಪ್ರಗತಿಪರ ಸಾಹಿತಿಗಳು ನಿಜಕ್ಕೂ ಹೃದಯಹೀನರು ಎಂಬ ಗಟ್ಟಿದನಿ ಮಾನ್ಯ ಚಿದಾನಂದಮೂರ್ತಿಯವರದು. ಅದನ್ನು ಸಮರ್ಥಿಸಲು ತಾವೆಸಗಿರುವ ಪರೋಪಕಾರದ ಪಟ್ಟಿಯನ್ನು ಅವರು ನೀಡಿದ್ದಾರೆ. ಬಡವರಿಗೆ ಸಹಾಯ ಮಾಡಿದ್ದು, ಭಾರತ – ಚೀಣಾ ಯುದ್ಧದ ಸಮಯದಲ್ಲಿ ಯೋಧರ ನಿಧಿಗೆ ಧನಸಂಗ್ರಹ ಮಾಡಿದ್ದು, ಬಾಂಗ್ಲಾದೇಶದ ವಿಮೋಚನೆಯ ಸಮಯದಲ್ಲಿ ಹಣ ಹಾಗೂ ತಮ್ಮ ಚಿನ್ನದ ಪದಕವನ್ನು ನೀಡಿದ್ದು, ಇವೆಲ್ಲಾ ಪಟ್ಟಿಯಲ್ಲಿ ಸೇರಿವೆ. ಅನ್ಯರಿಗೆ ಅಸಹ್ಯಪಡಬೇಡ, ತನ್ನ




ಬಣ್ಣಿಸಬೇಡ, ಇತರರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಎಂಬ ನುಡಿಗೆ ತೀರಾ ವಿರುದ್ಧವಾದ್ದು ಡಾ॥ ಮೂರ್ತಿಯವರ ಆತ್ಮನಿವೇದನೆ. ಉಳ್ಳವರು ಶಿವಾಲಯವ ಮಾಡುವಂತೆ ಉಳ್ಳವರು ಚಿನ್ನದ ಪದಕ ದಾನ ಮಾಡುತ್ತಾರೆ, ಇತರರು 'ನನ್ನ ಕಾಲೇ ಕಂಬ' ಎಂದು ಸುಮ್ಮನಿರಬೇಕು! ನಾವು ಮಾಡಿದ್ದನ್ನೆಲ್ಲಾ ಸದಾ ಹೇಳಿಕೊಳ್ಳುತ್ತಿರಬೇಕೆಂಬುದು ಏಕೋ ಬಾಲಿಶ ಪ್ರತಿಕ್ರಿಯೆಯಂತೆ ತೋರುತ್ತದೆ. ಬಾಂಗ್ಲಾ ವಿಮೋಚನಾ ಸಮಯದಲ್ಲಿ ನಾನು ಎರಡು ಚಿನ್ನದ ಪದಕಗಳನ್ನು ಸರ್ಕಾರದ ರಕ್ಷಣಾ ಇಲಾಖೆಗೆ ಕೊಟ್ಟೆನೆಂದು ಜಾಹಿರಾತು ನೀಡಬೇಕೆ? ನಮ್ಮ ಕಾರ್ಮಿಕ ಮತ್ತು ರೈತ ಸಂಘಗಳ ಕಾರ್ಯಕರ್ತರು ಇಲ್ಲವೇ ಸುಮಂಗಲಿ ಸೇವಾಶ್ರಮದ ವರೇಣ್ಯರಾದ ಶ್ರೀಮತಿ ಸುಶೀಲಮ್ಮ ಅವರು ತಮ್ಮ ಸೇವೆ ಮತ್ತು ತ್ಯಾಗಗಳನ್ನು ದಾಖಲಿಸ ಹೊರಟಿಲ್ಲ. ಕಾಗದವನ್ನು ಸಹ ವ್ಯರ್ಥ ಮಾಡುವುದು ಅವರಿಗೆ ಬೇಕಿಲ್ಲ. ಇಂಥವರು ಸಹಸ್ರ ಸಂಖ್ಯೆಯಲ್ಲಿ ಇದ್ದಾರೆ. "ನನ್ನ ಸಂಶೋಧನೆ ಸತ್ಯಪರವಾದ್ದು, ನಾನು ಎಡವೂ ಅಲ್ಲ, ಬಲವೂ ಅಲ್ಲ, ನಾನು ನಿರ್ಭಯೇಶ್ವರ, ನಾನು ಮುಕ್ತ ಮನಸ್ಸಿನಿಂದ ಬರೆಯುತ್ತಿದ್ದೇನೆ, ನಾನು ಸತ್ಯಪಂಥೀಯ" ಎಂದು ಸಹ ಡಾ॥ ಮೂರ್ತಿಯವರು ಬರೆದುಕೊಂಡಿದ್ದಾರೆ. ಧಾರವಾಡದ ಸಮಾವೇಶದಲ್ಲಿ ಸೇರಿರುವ ನಾವೆಲ್ಲಾ ತಿಳಿದೂ ತಿಳಿದೂ ಸುಳ್ಳನ್ನೇ ಆರಾಧಿಸುತ್ತಿರುವವೇನು? ನಾವೂ ಸತ್ಯಪಂಥೀಯರೇ, ಆದರೆ ಹಾಗೆಂದು ಹೇಳಿಕೊಂಡು ತಿರುಗುತ್ತಿಲ್ಲ, ಅಷ್ಟೆ. ಡಾ॥ ಮೂರ್ತಿಯವರ ವಾದಕ್ಕೆ ಏನೆಂದು ಪ್ರತಿಕ್ರಿಯಿಸುವುದು? ನಮಗೂ ನಮ್ಮ ದೃಷ್ಟಿಕೋನವಿದೆ, ಸತ್ಯಪರತೆ ಇದೆ; ಸತ್ಯವೆಂಬ ಕಾರಣದಿಂದಲೇ ಅದು ಆಪ್ತವಾಗಿರುವುದು. ಡಾ॥ ಮೂರ್ತಿಯವರ ವಾದವನ್ನು ಇಂಗ್ಲಿಷ್‌ನಲ್ಲಿ 'ಮೋಟಿವೇಟೆಡ್ ರೀಸನಿಂಗ್' ಎನ್ನುತ್ತಾರೆ. ಅಂದರೆ, ಶೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ತಾಯಿ ಗರ್ಟ್ರೂಡಳಂತೆ ತನ್ನ 'ಶುಭ್ರ' ವ್ಯಕ್ತಿತ್ವದ ಬಗ್ಗೆ ಅಪಾರವಾಗಿ ಹೇಳಿಕೊಳ್ಳುತ್ತಾ ಸ್ವಯಂ – ರಂಜನೆ ಪಡೆದುಕೊಳ್ಳುವುದು, ಒಳಗಿನ ಕಲ್ಮಶವನ್ನು ಮುಚ್ಚಿಕೊಳ್ಳಲು ಹರಸಾಹಸ ಮಾಡುವುದು. ಸಾಹಿತ್ಯ ಕ್ಷೇತ್ರದ ಮೌಲಿಕ ಸಿದ್ಧಾಂತಕ್ಕೆ ಈ ಪರಿಯ 'ಸೊಬಗು' ತೀರಾ ಅನವಶ್ಯಕ. ಕುವೆಂಪು ಅವರಾಗಲಿ, ವಿಕ್ಟರ್ ಹ್ಯೂಗೊ ಆಗಲಿ, ಕೆಳಸ್ತರದ ಜನರ ಬಗೆಗಿನ ಕಾಳಜಿ ವ್ಯಕ್ತಪಡಿಸುವುದು ಡಂಬಾಚಾರ ಎನಿಸಿಕೊಳ್ಳುತ್ತದೆಯೆ?

ಅಷ್ಟೇನೂ ಪ್ರಖ್ಯಾತರಾಗದೆಯೇ ಉಳಿದ ಚಿತ್ರದುರ್ಗದ ಅಂಬಾಬಾಯಿಯವರು ವಾಗ್ಗೇಯಕಾರರು, ಕೃಷ್ಣನಿಗೆ ಮೊರೆಹೋಗುವ ಭಾವವಿರುವ ಅನೇಕ ಕೃತಿಗಳನ್ನು ರಚಿಸಿರುವವರು. ಅವರ ಒಂದು ಕೃತಿ ಆರಂಭವಾಗುವುದು ಹೀಗೆ:

*ಇತ್ತಿತ್ತ ಬಾರೆಂದು ಕರೆಯುವವರಿಲ್ಲದಿರೆ / ವ್ಯರ್ಥವಲ್ಲವೆ ಜನ್ಮವು॥*

*ಅತ್ತತ್ತ ಹೋಗೆಂಬ ನುಡಿ ಕೇಳಿ ಜಗದೊಳಗೆ / ಮತ್ತೆ ಇರಬಹುದೆ ಹರಿಯೇ॥*

ಇಲ್ಲಿಯ ಮಾನಸಿಕ ಉದ್ವಿಗ್ನತೆಯನ್ನು ಎಡ ಅಥವಾ ಬಲವೆಂದು ಮಾಪನ ಮಾಡುವುದಿದೆಯೆ? ತಮ್ಮನ್ನು ಪರಕೀಯರಂತೆ ಕಂಡವರ ಬಗ್ಗೆ ಇಲ್ಲಿ ದ್ವೇಷವಿಲ್ಲ, ಆದರೆ ತಮ್ಮ ಸ್ವಂತದ ವ್ಯಕ್ತಿತ್ವಕ್ಕೆ ಎಂತಹ ಆಘಾತವೆಂದು ಮರುಗುವ ಜೀವ ಅದು. 'ಇವನಾರವ' ಎಂಬ ವಚನವನ್ನು ಇದು ನೆನಪಿಸಿದರೆ ಆಶ್ಚರ್ಯವೆಲ್ಲಿಯದು!

ಇನ್ನೊಂದು ಕೃತಿಯನ್ನು ನೋಡೋಣ. ಅದು ಕನಕದಾಸರ "ಕೇಶವನೊಲುಮೆಯು ಆಗುವ ತನಕ..." ಎಂಬುದು. ಅದರ ಉತ್ತರಾರ್ಧದಲ್ಲಿ "ಸತ್ಯ ಧರ್ಮಗಳ ಬೋಧೆಯು ತೊತ್ತಿಗೆ ರುಚಿಸೀತೆ?" ಎಂಬರ್ಥದ ಮಾತಿದೆ. ಇದನ್ನು ಅರ್ಥೈಸಿಕೊಳ್ಳುವುದು ಹೇಗೆ? ತೊತ್ತಿನವನು ಕನಿಷ್ಠ ಮಟ್ಟದವನು, ಶ್ರೇಷ್ಠ ಮೌಲ್ಯಗಳಾದ ಸತ್ಯ, ಧರ್ಮ, ಮುಂತಾದವು ಅವನಿಗೆ ಹೇಗೆ ತಾನೆ ಅರ್ಥವಾದೀತು, ಎಂದೆ? ಅಥವಾ, ತೊತ್ತಿಗೆ ಬೋಧನೆಯ ಅವಶ್ಯಕತೆಯಾದರೂ ಎಲ್ಲಿಯದು, ನಾವು ಬೋಧಿಸುವ ಸತ್ಯ, ಧರ್ಮ, ಮುಂತಾದ ತತ್ವಗಳು ಪ್ರಾಯೋಗಿಕವಾಗಿ ಸರ್ವಥಾ ಹುರುಳಿಲ್ಲದಂಥವು ಎಂಬುದು ಅವನಿಗೆ ನಿಜ ಜೀವನದಲ್ಲಿ ತಿಳಿದೇ ಇದೆಯಲ್ಲವೇ, ಎಂದೆ? ಮೊದಲನೆಯ ಅರ್ಥವನ್ನು ಸ್ವೀಕರಿಸಿದರೆ ನಮ್ಮ ಸಮಾಜದಲ್ಲಿ ಅಂತರ್ಗತವಾಗಿರುವ ಶ್ರೇಣೀಕರಣವನ್ನು ಎತ್ತಿಹಿಡಿದಂತಾಗುತ್ತದೆ, ಅದರ ಟೊಳ್ಳುತನವನ್ನು ಮರೆಮಾಚಿದಂತಾಗುತ್ತದೆ. ಎರಡನೆಯ ಅರ್ಥವನ್ನು ಸ್ವೀಕರಿಸಿದರೆ ಮೇಲಿನ ವರ್ಣದವರ ತೋರಿಕೆಯ ನಡೆನುಡಿಗಳು ಢಾಳಾಗಿ ಅನಾವರಣಗೊಳ್ಳುತ್ತವೆ. ಇದನ್ನೇ ನಾವು ಬಲ ಮತ್ತು ಎಡ ಎಂದು ಭಿನ್ನೈಸುವುದು. 'ಬಲ'ವು ಸಾಂಪ್ರದಾಯಿಕ ಆಚರಣೆಯಲ್ಲಿನ ಮೇಲು – ಕೀಳನ್ನು ಸಮರ್ಥಿಸುತ್ತದೆ ಮತ್ತು ವೈಭವೀಕರಿಸುತ್ತದೆ, ಅದು ಸಾರ್ವಕಾಲಿಕ ಸತ್ಯವೆಂದು ಅರಚಿಕೊಳ್ಳುತ್ತದೆ. 'ಎಡ'ವು ಸಮಾನತೆಯ ಆಶಯವನ್ನು ನಿರೀಕ್ಷಿಸುತ್ತದೆ, ಮಾನವತೆಯ ಉದಾತ್ತತೆಯನ್ನು ಸಾರ್ವತ್ರಿಕಗೊಳಿಸುವ ಮನಸ್ಸನ್ನು ಬೆಳೆಸಿಕೊಳ್ಳುತ್ತದೆ. ಚರಿತ್ರೆಯಲ್ಲಿ 'ಎಡ' ಮತ್ತು 'ಬಲ' ಎಂಬ ವಿಭಜನೆಗೆ ಫ್ರಾನ್ಸಿನ ೧೭೮೯ರ ಕ್ರಾಂತಿಯ ಹಿನ್ನೆಲೆಯಿದೆ. ಕ್ರಾಂತಿಯ ನಂತರದ ಪಾರ್ಲಿಮೆಂಟಿನಲ್ಲಿ ರೋಬ್ಸ್‌ಪಿಯರ್ ಪಂಗಡದವರು ಕ್ರಾಂತಿಯನ್ನು

ಮಾಡಿದವರು, ಅದರ ಸಮರ್ಥಕರು, ಸಭಾಧ್ಯಕ್ಷನ ಎಡಭಾಗದಲ್ಲಿ ಆಸೀನರಾಗಿರುತ್ತಿದ್ದರು; ಕ್ರಾಂತಿಯ ವಿರೋಧಿಗಳು, ರಾಜನ ಮತ್ತು ರಾಜವಂಶದವರ ಆಳ್ವಿಕೆಯನ್ನು ಸಮರ್ಥಿಸುತ್ತಿದ್ದವರು, ಸಭಾಧ್ಯಕ್ಷನ ಬಲಭಾಗದಲ್ಲಿ ಕುಳಿತು ಗಡಸು ಶಬ್ದಪ್ರಯೋಗ ಮಾಡುತ್ತಿದ್ದರು. ಇಂದಿಗೂ ಎಡ–ಬಲಗಳ ನಡುವಣ ಭಿನ್ನತೆಗೆ ಮೂಲಭೂತವಾದ ಸಾಮಗ್ರಿಯು ಈ ವಿರುದ್ಧ ಲಕ್ಷಣಗಳುಳ್ಳ ಮನೋವೃತ್ತಿ ಮತ್ತು ಕಾರ್ಯಾಚರಣೆಗಳೇ ಆಗಿವೆ. ನಿಜಜೀವನದಲ್ಲಿ ಬಹುಶಃ 'ಬಲ'ವು ಇನ್ನೂ ಪ್ರಬಲವಾಗಿಯೇ ಇದೆ, 'ಎಡ'ವು ಪೆಟ್ಟು ತಿನ್ನುವ ಸ್ಥಾನದಲ್ಲೇ ಇದೆ. ಸಾಹಿತ್ಯದಲ್ಲಿ ಮಾನವ ಆಕಾಂಕ್ಷೆಗಳನ್ನು ಬಿಂಬಿಸುವಾಗ ಇದರ ವೈವಿಧ್ಯಮಯವಾದ ಪ್ರಯೋಗಗಳು ನಡೆದಿವೆ, ನಡೆಯುತ್ತಲೇ ಇರುತ್ತವೆ. ಸದ್ಯದಲ್ಲೇ ಪ್ರಕಟವಾಗಲಿರುವ ಬೋಳುವಾರು ಮಹಮ್ಮದ್ ಕುಂಞಿ ಅವರ 'ಉಮ್ಮ' ಕಾದಂಬರಿಯಲ್ಲಿ ಇದು ಸೂಕ್ಷ್ಮವಾಗಿ ಪ್ರತಿಫಲಿತವಾಗಿದೆ: ಕ್ರೈಸ್ತ ಮತ್ತು ಇಸ್ಲಾಂ ಮತಧರ್ಮಗಳಲ್ಲಿ 'ಅಂತಿಮ ನ್ಯಾಯದ ದಿನ' ಎಂಬೊಂದು ಪರಿಕಲ್ಪನೆ ಇದೆ. ಅಂದು ಭಗವಂತನು ಪ್ರತಿಯೊಬ್ಬರ ಪಾಪ–ಪುಣ್ಯಗಳನ್ನು ತೂಕ ಮಾಡಿ ಸ್ವರ್ಗಕ್ಕೋ, ನರಕಕ್ಕೋ ಅವರನ್ನು ಅಟ್ಟುತ್ತಾನೆ. ಅದೆಷ್ಟು ಕಾಲ ಅವರೆಲ್ಲಾ ಅಲ್ಲೇ ಸುಖಿಸುತ್ತಾರೋ ಅಥವಾ ದುಃಖಿಸುತ್ತಾರೋ ತಿಳಿಯದು. ಕಾದಂಬರಿಯಲ್ಲಿ ಬರುವ ಮಾತಿದು: "ಅಂತಿಮ ನ್ಯಾಯದ ದಿನ ಭಾಗ್ಯವಂತರು ಬಲ ಗುಂಪಿನಲ್ಲಿ, ಭಾಗ್ಯಹೀನರು ಎಡ ಗುಂಪಿನಲ್ಲಿ. ಯಾವುದೇ ಗುಂಪಿಗೆ ಸೇರದವರು ನೇರವಾಗಿ ಸ್ವರ್ಗದಲ್ಲಿ." ಎಡ–ಬಲಗಳ ಪ್ರಸ್ತುತ ಸನ್ನಿವೇಶವನ್ನು ಸೊಗಸಾಗಿ ವ್ಯಂಜಿಸಲಾಗಿದೆಯೆಂದು ತೋರುತ್ತದೆ.

ನಿರ್ದಿಷ್ಟವಾದ ಸಂಗತಿ ಮತ್ತು ಸನ್ನಿವೇಶಗಳನ್ನು ಕುರಿತಂತೆ ಅಭಿಪ್ರಾಯಗಳನ್ನು ತೂಗಿನೋಡಬಹುದೇ ವಿನಾ ಅಮೂರ್ತ ಚರ್ಚೆಯೋ ಎಂಬಂತೆ ಎಡ ಮತ್ತು ಬಲ ಪಂಥಗಳ ನಿಲುವು ಹಾಗೂ ನಡತೆಗಳನ್ನು ಮಾಪನ ಮಾಡಲಾಗದು. ಅಂತೆಯೇ, ಎರಡನ್ನೂ ಬಿಟ್ಟು ಮಧ್ಯಮ ಮಾರ್ಗವನ್ನು ಹಿಡಿಯಬೇಕೆಂಬುದನ್ನು ಎಲ್ಲ ಸಂದರ್ಭಗಳಲ್ಲೂ ಸಮರ್ಥಿಸಲು ಬರುವುದಿಲ್ಲ. ಅಸ್ಪೃಶ್ಯತೆಯ ಪದ್ಧತಿ ಹೀನಾಯವಾದುದು ಮತ್ತು ಅಮಾನವೀಯವಾದುದು ಎಂಬ ಸರಳ ಉದಾಹರಣೆಯನ್ನು ನೋಡಿದರೆ ಅದರಲ್ಲಿ ಎಡ, ಬಲ, ಮಧ್ಯಮ, ಎಂಬುದಕ್ಕೆ ಅರ್ಥವೇನಿದೆ? ಹೌದು, ಅದು ಅಮಾನವೀಯ ಮತ್ತು ಆದ್ದರಿಂದ ವರ್ಜ್ಯ ಎಂಬುದೊಂದೇ ಸಮರ್ಥನೀಯವಾದ ನಿಲುವು. "ಅದು ಒಳ್ಳೆಯದಲ್ಲ, ಆದರೆ ಶತಮಾನಗಳಿಂದ ಅದು ನಮ್ಮಲ್ಲಿ ಆಚರಣೆಯಲ್ಲಿದೆ; ಈ ಸಂಪ್ರದಾಯಕ್ಕೂ ಏನೋ ಮಹತ್ತರ ಕಾರಣವಿದ್ದೀತು, ಆದ್ದರಿಂದ ಸಾರಾಸಗಟಾಗಿ ಅದನ್ನು ತಿರಸ್ಕರಿಸಬಾರದು" ಎಂಬ ನಿಲುವು ತಾಳಿದರೆ ಅದು ಸಂಪೂರ್ಣವಾಗಿ 'ಬಲ'ದ ನಿಲುವೇ ಆಗಿರುತ್ತದೆ. ಮಹಿಳೆಯ ಸ್ಥಾನಮಾನ, ಶಿಕ್ಷಣದಲ್ಲಿ ಸಮಾನತೆ, ವೈದ್ಯಕೀಯ ಸೌಲಭ್ಯದ ವ್ಯವಸ್ಥೆ, ಹೀಗೆ ಯಾವ ವಿಷಯವನ್ನು ಆರಿಸಿಕೊಂಡರೂ ಪುರೋಗಾಮಿತ್ವ ಮತ್ತು ಸ್ಥಾವರತ್ವದ

## ಅಭಿನಂದನೆ...

ಬರಗೂರು ಪ್ರತಿಷ್ಠಾನವು ರಾಜಲಕ್ಷ್ಮಿ ಬರಗೂರು ಸ್ಮರಣಾರ್ಥ ನೀಡುವ ೨೦೧೮ನೇ ಸಾಲಿನ 'ರಾಜಲಕ್ಷ್ಮಿ ಬರಗೂರು ಪುಸ್ತಕ ಪ್ರಶಸ್ತಿ'ಯು ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಡಾ॥ ಜಿ. ರಾಮಕೃಷ್ಣ ಅವರ 'ಋಗ್ವೇದ ಪ್ರವೇಶಿಕೆ – ಐತಿಹ್ಯ ಮತ್ತು ವಾಸ್ತವ' ಎಂಬ ಕೃತಿಗೆ ಲಭಿಸಿದೆ. ಜಿ. ಆರ್. ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ನಿಲುವುಗಳು ಸಾಧ್ಯ. ಅಥವಾ, ಕಳೆದ ವರ್ಷ ಮುಜ಼ಾಫರ್‌ನಗರದಲ್ಲಿ ನಡೆದ ಘಟನೆಯನ್ನು ನೋಡಿ: ಒಬ್ಬ ಮುಸಲ್ಮಾನನ ಮನೆಯಲ್ಲಿ ರೆಫ್ರಿಜಿರೇಟರ್ ಇದೆ (ಅಂದರೆ, ಅವನು ಅಷ್ಟರಮಟ್ಟಿಗೆ ಅನುಕೂಲಸ್ಥ); ಅದರಲ್ಲಿ ಮಾಂಸವನ್ನು ಶೇಖರಿಸಿ ಇಡಲಾಗಿದೆ. ಯಾವನೋ ತಲೆಹೋಕ ಹೇಳುತ್ತಾನೆ, ಅದು ಹಸುವಿನ ಮಾಂಸ, ಎಂದು. ಅದು ಹೌದೋ ಅಲ್ಲವೋ ಎಂದು ಅವನೇ ತೀರ್ಮಾನಿಸಿ ಮನೆಯೊಳಗೆ ನುಗ್ಗಿ ದಾಂಧಲೆ ಎಬ್ಬಿಸುತ್ತಾನೆ, ಮನೆಯವರನ್ನು ಥಳಿಸುತ್ತಾನೆ. ಸರ್ಕಾರವು ಅದನ್ನು ನೋಡಿಯೂ ಏನೂ ನಡೆದಿಲ್ಲವೆಂಬಂತೆ ಕಣ್ಣುಮುಚ್ಚಿ ಕುಳಿತಿರುತ್ತದೆ. ಇದರ ಬಗ್ಗೆ ಸಾಧ್ಯವಾದ ನಿಲುವುಗಳು ಎಷ್ಟಿರಬಹುದು? (ಅ) ಎಂಥದೋ ಮಾಂಸ ಅದು, ಅದನ್ನಿಟ್ಟುಕೊಳ್ಳಕೂಡದೆಂದು ಆಗ್ರಹಿಸಲು ಅಧಿಕಾರವು ಯಾವನೋ ತಲೆಹೋಕನಿಗುಂಟೆ? (ಆ) ಅವನು ದಾಂಧಲೆ ನಡೆಸಿದ್ದು ಸರಿಯಾದ ಕ್ರಮವೆಂದು ಸರ್ಕಾರವು ತಲೆದೂಗಬಹುದೆ? (ಇ) ಇಂಥದೇ ಮಾಂಸ ತಿನ್ನಬೇಕೆಂಬುದಕ್ಕೆ ವಿಧಿ–ನಿಷೇಧಗಳನ್ನು ಹೇರುವುದು ಸಂವಿಧಾನಕ್ಕೆ ಅನುಗುಣವಾಗಿದೆಯೆ? ಎಲ್ಲವೂ ವ್ಯಕ್ತಿಯ ಸ್ವಾತಂತ್ರ್ಯ, ಹಕ್ಕು, ಸಂವಿಧಾನದತ್ತವಾದ ವಿಧಾನ ಮುಂತಾದುವಕ್ಕೆ ಸಂಬಂಧಿಸಿದ್ದೇ ಆಗಿವೆ. ಇಲ್ಲಿ ಬಲ ಮತ್ತು ಎಡ ಏನೆಂಬುದು ಎಲ್ಲರಿಗೂ ತಿಳಿದಿದೆ. ಮತೀಯ ದ್ವೇಷ ಮತ್ತು ಸಾಮರಸ್ಯದ ಕದಡುವಿಕೆ ಒಂದು ಕಡೆ, ಕಾನೂನಾತ್ಮಕ ಹಕ್ಕು ಮತ್ತು ಅದರ ರಕ್ಷಣೆ ಇನ್ನೊಂದು ಕಡೆ. ಆದರೆ ಭಾವೋದ್ರೇಕದಿಂದ ಹಲ್ಲೆ ನಡೆಸಿದರೂ ಸಮರ್ಥನೆ ನೀಡುವುದು 'ಬಲ'ವನ್ನೂ ಮೀರಿದ ದುರ್ಮಾರ್ಗವೇ ಸರಿ. ಬೇರೊಂದು ಸಂಗತಿ ನೋಡಿ: ನೀರವ ಮೋದಿ ಹೆಸರಿಗೆ ತಕ್ಕಂತೆ ಸದ್ದುಮಾಡದೆ ದೇಶ ಬಿಟ್ಟು ಓಡಿಹೋಗಿದ್ದಾನೆ. (ರವ ಎಂದರೆ ಶಬ್ದ; ಇವನು ನೀರವ. ಆದ್ದರಿಂದ ಯಾವ ಸದ್ದೂ ಇಲ್ಲದಂತೆ ಕದ್ದು ಓಡುತ್ತಾನೆ). ಹೋಗುವ ಮುನ್ನ ೧೩,೦೦೦ ಕೋಟಿ ರೂಪಾಯಿಗಳನ್ನು ಲಪಟಾಯಿಸಿದ್ದಾನೆ. ಅದನ್ನು ಖಂಡಿಸಲು ಮತ್ತು ಅವನನ್ನು ಹಿಡಿದು ತಂದು ಶಿಕ್ಷೆಗೆ ಗುರಿ ಮಾಡಲೇಬೇಕು ಎಂದು ಹೇಳುವುದಕ್ಕೂ ಅಂಜುವವರು 'ಬಲ'ದವರು; ಜನರ ಸಂಪತ್ತು ದೋಚಿದವನನ್ನು ಶಿಕ್ಷಿಸಲು ಯಾವುದೇ ಅಡೆತಡೆಗಳನ್ನೂ ಲೆಕ್ಕಿಸಕೂಡದು ಎಂಬುದು 'ಎಡ'ದವರ ನಿಲುವು. ವಿದೇಶಿ ಸಂಬಂಧಗಳು, ವಾಣಿಜ್ಯ ವ್ಯವಸ್ಥೆ, ಸಂಶೋಧನೆಗಳಲ್ಲಿ ಯಾವುದಕ್ಕೆ ಆದ್ಯತೆ, ಹೀಗೆ ಯಾವುದೇ ವಿಷಯದಲ್ಲೂ ಸಂಪ್ರದಾಯ ಮತ್ತು ಜನಪರ ಎಂಬ ಎರಡು ನೆಲೆಗಳ ತೀರ್ಮಾನಗಳು ಸಾಧ್ಯ. ಎಡ–ಬಲ ಬೇಡದಿದ್ದರೆ ಬಿಟ್ಟುಬಿಡೋಣ, ಆದರೆ ಮಾನವೀಯತೆ, ಮಾನವ ಸಹಜ ಅನುಕಂಪ, ಸಂಕಷ್ಟದಲ್ಲಿರುವವರಿಗೆ ಸಾಂತ್ವನ, ಮಾನವ ಹಕ್ಕುಗಳು, ಇತ್ಯಾದಿಗಳನ್ನು ಗೌಣವಾಗಿಸುವುದು ಸಾಧುವೇ? ಒಟ್ಟಿನಲ್ಲಿ, ಈ ವಿಷಯಕ ಚರ್ಚೆಗಳೆಲ್ಲಾ ಇದರ ಸುತ್ತವೇ ಇರಬೇಕಾದ್ದು ಸಹಜ. ಸುಮ್ಮನೆ ಪದಗಳನ್ನು ಹಿಡಿದುಕೊಂಡು ಕಸರತ್ತು ಮಾಡುವ ತತ್ವಶಾಸ್ತ್ರ ಇದಲ್ಲ; ಇದು ಮಾನವನ ಇರವು ಮತ್ತು ಘನತೆಗೆ ಕೊಂಡಿಹಾಕಿಕೊಂಡಿರುವ ವಿಚಾರ; ಕೇವಲ ಬೌದ್ಧಿಕ ಆಯಾಮವಿರುವ ಸಂಗತಿಯಲ್ಲ, ಮೂಲಭೂತ ಸಂವೇದನೆಗಳ ನೇರ ಅಭಿವ್ಯಕ್ತಿಯ ಪ್ರಶ್ನೆ. ಆದ್ದರಿಂದಲೇ ೧೯೩೦ರ ದಶಕದಲ್ಲಿ ವಿಶ್ವದ ಸಾಂಸ್ಕೃತಿಕ – ಸಾಹಿತ್ಯಕ ಮೇಧಾವಿಗಳ ಮುಂದೆ ಮ್ಯಾಕ್ಸಿಂ ಗಾರ್ಕಿ ಒಂದು ಸವಾಲನ್ನು ಇಟ್ಟಿದ್ದ: "ಸಂಸ್ಕೃತಿಯ ಮಹಾನ್ ಆರಾಧಕರೇ, ಸೃಷ್ಟಿಕರ್ತರೇ, ಹೇಳಿ; ನೀವು ಯಾವ ಕಡೆಗಿದ್ದೀರೆಂದು."

ಸಾಹಿತ್ಯಕ್ಕೆ ನೆರವಾಗುವ ಸಿದ್ಧಾಂತದ ಚರ್ಚೆಯು ಒಣಚರ್ಚೆಯಾಗದಿರಬೇಕಾದರೆ ಮೊದಲು ಈ ಪ್ರಶ್ನೆಯನ್ನು ನಾವು ಹಾಕಿಕೊಳ್ಳಲೇಬೇಕು, ಅದರಲ್ಲಿ ಮುಜುಗರವು ಸರ್ವಥಾ ಅಪಥ್ಯವಾದ್ದು. ಜೀವನದಲ್ಲಿ ಹಾಗೂ ಸಾಹಿತ್ಯದಲ್ಲಿ ತಿರುಳಿದ್ದರೆ ಏನಾದರೊಂದು ತತ್ವವೂ ಇರುತ್ತದಲ್ಲವೆ? ಉದಾಹರಣೆಗೆ, ಟಿ. ಎಸ್. ಎಲಿಯಟ್‌ನ ಪ್ರಸಿದ್ಧ ಕವನೋಕ್ತಿ "ಲಂಡನ್ನಿನ ಸೇತುವೆಯು ಬಿದ್ದುಹೋಗುತ್ತಿದೆ" ಎಂಬುದನ್ನು ನೋಡೋಣ. ಆಧುನಿಕ ಯುಗದಲ್ಲಿ ಯುದ್ಧ ಮುಂತಾದ ಕಾರಣಗಳಿಂದಾಗಿ ನಾಗರಿಕತೆ, ಸಂಸ್ಕೃತಿ, ಮಾನವ ಸಹಜ ಸಂಬಂಧಗಳು ಮತ್ತು ಭಾವನೆಗಳು ಲುಪ್ತವಾಗಿಹೋಗುತ್ತಿವೆ, ನಾಗರಿಕತೆಯ ಭವ್ಯ ನಿರ್ಮಾಣಕ್ಕೆ ದುರ್ಗತಿ ಉಂಟಾಗುತ್ತಿದೆ, ಮುಂತಾಗಿ ಕವಿಯ ಕಲಕಿದ ಮನಸ್ಸಿನ ಆತಂಕ ಇಲ್ಲಿ ಅಭಿವ್ಯಕ್ತವಾಗಿದೆ, ಹತಾಶೆಯ ಭಾವವು ಆವರಿಸಿದೆ. ಎಲಿಯಟ್‌ನ ಸಮಕಾಲೀನನಾಗಿದ್ದ ವಿಜ್ಞಾನಿ ಅರ್ನೆಸ್ಟ್ ರುದರ್ಫರ್ಡ್ ಅದಕ್ಕೆ ಪ್ರತಿಕ್ರಿಯಿಸಿದ್ದ: ಯುದ್ಧವು ವಿನಾಶಕಾರಿ, ಹೌದು; ಆದರೆ ನಾವೂ ಎಲ್ಲಾ ಅದೇ ಪ್ರಪಂಚದಲ್ಲಿ ಅನುಭವ ಪಡೆಯುತ್ತಿದ್ದೇವೆ ಮತ್ತು ಹತಾಶೆಗೆ ತುತ್ತಾಗಿಲ್ಲ. ಅಸಮಾಧಾನವು ಸಾರ್ವತ್ರಿಕ, ಆದರೆ ಅದರ ಒಡಲಲ್ಲೇ ಕ್ರಿಯಾವಂತಿಕೆಯೂ ಇದೆ, ಹೊಸ ಆವಿಷ್ಕಾರಗಳಾಗುತ್ತಿವೆ, ಬಿದ್ದುಹೋಗುತ್ತಿರುವ ಸೇತುವೆಗಳ ಪುನರ್ನಿರ್ಮಾಣ ಮಾಡಲು ಯತ್ನಿಸೋಣ, ಎಂದು. ಈ ಎರಡು ಬಗೆಗಳಲ್ಲದೆ

ಬೇರೆ ನಿಲುವುಗಳೂ ಸಾಧ್ಯ. ಒಟ್ಟಿನಲ್ಲಿ, ಸಾಹಿತ್ಯದಲ್ಲಿ ಧೋರಣೆಗಳು ಪ್ರಕಟವಾಗುವುದು ಅಸಹಜವಲ್ಲ. ಅವುಗಳಲ್ಲಿ ಯಾವುದು ಹೃದ್ಯ, ಮನನಯೋಗ್ಯ ಅಥವಾ ಅನುಕರಣೆಗೆ ಯೋಗ್ಯ, ಎಂಬ ಪ್ರಶ್ನೆ ಬಂದಾಗ ಆಯ್ಕೆಯು ಅನಿವಾರ್ಯ. "ರಾಮಣೀಯಕವೆಂದು ಬಿಸುಸುಯ್ಯಲದು ಕವಿತೆ" ಎಂದರು ಪು. ತಿ. ನ. ಅಷ್ಟೇ ಸಾಕೆ ಎಂದು ಕೆಲವರು ಹುಬ್ಬೇರಿಸಿದರು. "ಕವಲು" ಬರೆದವರ ತೆವಲು ಒಂದು ಧೋರಣೆಯಾದರೆ "ನಾನು ಕೊಂದ ಹುಡುಗಿ" ಎಂಬ ಸಣ್ಣಕತೆ ಬರೆದವರದು ಬೇರೊಂದು ಧೋರಣೆ. ಇಬ್ಬರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯವಿರುವಂತೆ ಓದುಗರಿಗೆ ಆಯ್ಕೆಯ ಸ್ವಾತಂತ್ರ್ಯವಿರುತ್ತದೆ. ಅದು ಆಯಾ ಓದುಗರ ವಿಮರ್ಶಾದೃಷ್ಟಿಯಾಗುತ್ತದೆ. ಇಲ್ಲಿ ಎಡ-ಬಲ ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಪರಂಪರಾಗತ ಮೌಲ್ಯಗಳು ಮಹಿಳೆಯ ಬಂಧನಕ್ಕೆ ಕಾರಣವಾಗಿರುವಂಥವೂ ಇವೆ, ಅವು ವರ್ಜ್ಯ, ಅವುಗಳ ಜಾಗದಲ್ಲಿ ನವೀನ ಯುಗದ ಸಮಾನತೆಯ ಮೌಲ್ಯವು ಸ್ಥಾಪಿತವಾಗಬೇಕೆಂಬುದು 'ಎಡ ಪಂಥ'; ಹಾಗೆ ಬದಲಾವಣೆಗೆ ದುಡುಕಬಾರದು, ಮಹಿಳೆಗೆ ಪರಂಪರೆಯಲ್ಲಿ ನೀಡಿರುವ (ಅಥವಾ ನೀಡಿಲ್ಲದ) ಸ್ಥಾನಕ್ಕೆ ಸಮಂಜಸವಾದ ಕಾರಣಗಳಿವೆ, ಅವುಗಳನ್ನು ಒಪ್ಪಿ ನಡೆಯುವುದು ಹಿತಕರ, ಜಾರಿಯಲ್ಲಿರುವ ವ್ಯವಸ್ಥೆಯು ಬಂಧನವಲ್ಲವಾದ್ದರಿಂದ ಅದನ್ನು ಬಂಧನ ಎಂದು ಪರಿಗಣಿಸಬಾರದು, ಇತ್ಯಾದಿ ಉಪದೇಶ ಸಾಹಸ್ರಿಯ ಪಠಣ ಮಾಡುವುದು 'ಬಲ ಪಂಥ'. ಬದಲಾವಣೆ ಅಥವಾ ಚಲನೆಯು ಸಮಾಜದ ಲಕ್ಷಣವೋ ಅಥವಾ ಸ್ಥಗಿತತೆಯು ಅದರ ಲಕ್ಷಣವೋ? ಮಾನವ ಶರೀರ ಮತ್ತು ಸಂವೇದನೆಯಲ್ಲಿ ಹೃದಯವು ಎಡಭಾಗದಲ್ಲಿರುತ್ತದೆ, ಹೃದಯವು ಬಡಿದುಕೊಳ್ಳುತ್ತಿರುತ್ತದೆ. ಸಂಪ್ರದಾಯವೇ ನಮ್ಮನ್ನು ಆಳಬೇಕೆಂದು ಹಲುಬುವವರ ಹೃದಯವು ಬಲಭಾಗಕ್ಕೆ ಸರಿದು ಸ್ಥಗಿತಗೊಳ್ಳುತ್ತದೆ. 'ಬಲ' ಪಂಥವು ಸಂಪ್ರದಾಯವನ್ನು ಶಾಶ್ವತವೆಂದು ಭಾವಿಸುತ್ತದೆ; ಆದರೆ ಆ ಸಂಪ್ರದಾಯವು ಇಲ್ಲದಿದ್ದ ಕಾಲವೂ ಇದ್ದಿರಬೇಕಲ್ಲ! ಹಳೆಯವಕ್ಕೇ ನೇತುಬಿದ್ದಿದ್ದರೆ ಹೊಸ ತುಡಿತಗಳಿಗೆ ಅವಕಾಶವೆಲ್ಲಿ ಸಾಧ್ಯ? "ನನಗೆ ೪೫, ಆದರೂ ನಾನಿನ್ನೂ ಕ್ರಿಕೆಟ್ ನಾಯಕನೇ ಆಗಿರುತ್ತೇನೆ" ಎಂದು ಧೋನಿಯು ಧೇನಿಸುತ್ತಲೇ ಇದ್ದರೆ "ನನಗೆ ೨೦, ನನಗೆ ಅವಕಾಶವೇ ಇಲ್ಲವಾಗಿದೆ, ೪೫ ಆದರೂ ಅವನೇ ಇದ್ದರೆ ನಾನು ೩೫ರ ನಂತರ ಅನರ್ಹನೆಂಬ ಪಟ್ಟ ಕಟ್ಟಿಬಿಡುತ್ತಾರಲ್ಲ, ಇದೇನನ್ಯಾಯ?" ಎಂದು ಚಡಪಡಿಸುವ ಯುವಕ-ಯುವತಿಯರೂ ಇರುತ್ತಾರಲ್ಲವೆ? ಆದ್ದರಿಂದಲೇ ನಾವು ಹೇಳಬೇಕಾದ್ದು, "ಹೃದಯವು ಎಡಭಾಗದಲ್ಲಿ ಇರದಿದ್ದರೆ ಅದೊಂದು ಐಬು" ಎಂದು. ಅರಿಸ್ಟಾಟಲ್ ಹೇಳಿದ್ದ, "ಮಹಿಳೆಯು ಒಳ್ಳೆಯವಳಾಗಬಹುದು, ಆದರೆ ಗುಲಾಮನು ಎಂದೂ ಒಳ್ಳೆಯವನಾಗಲಾರ" ಎಂದು. ಅಂದರೆ, ಸ್ವಭಾವತಃ ಮಹಿಳೆಯು ಒಳ್ಳೆಯವಳಲ್ಲ, ಆದರೆ ಒಳ್ಳೆಯವಳಾಗಬಹುದಾದ ಸಾಧ್ಯತೆ ಉಂಟು; ಆದರೆ ಗುಲಾಮನೆಂದೂ ನಿಕೃಷ್ಟನೇ. ಇದನ್ನು ಸಮರ್ಥಿಸುವುದು 'ಬಲ' ಮತ್ತು ಅರಿಸ್ಟಾಟಲನ ಕಾಲ




ಮುಗಿದುಹೋಗಿದೆ, ಇದು ನಮ್ಮ ನವಯುಗ ಎನ್ನುವುದು 'ಎಡ'. ಅರಿಸ್ಟಾಟಲನ ಕಾಲದ ಎರಡು ಶತಮಾನಗಳ ನಂತರ ಸ್ಪಾರ್ಟಕಸ್ ಆ ಘೋಷ ವಾಕ್ಯವನ್ನು ಉಚ್ಚರಿಸಿದ, ಗುಲಾಮರನ್ನು ಸಂಘಟಿಸಿದ ಮತ್ತು ಗುಲಾಮಗಿರಿಯನ್ನು ಹೂತುಹಾಕಿದ.

ಒಂದೆರಡು ಸಮಕಾಲೀನ ಸಂದರ್ಭಗಳನ್ನು ಪರಿಶೀಲಿಸೋಣ: ನಮಗೆ 'ಅಭಿವೃದ್ಧಿ' ಬೇಕು, ಅದೇ ನಮ್ಮ ಮೂಲಮಂತ್ರ, ಆದ್ದರಿಂದ ನಾವು 'ಮೇಕ್ ಇನ್ ಇಂಡಿಯ' ಮೂಲಕ ಅಭಿವೃದ್ಧಿ ಹೊಂದುತ್ತೇವೆ: ಇದು ಒಂದು ಧೋರಣೆ. ಇನ್ನೊಂದು ಧೋರಣೆ: ಅಭಿವೃದ್ಧಿ ಮಂತ್ರವನ್ನು ಜಪಿಸುತ್ತಾ ಜನತೆಯ ಆರೋಗ್ಯ ನಾಶ ಮತ್ತು ಪರಿಸರದ ವಿಗತಿಯನ್ನು ಸ್ವಾಗತಿಸುವುದು ಬೇಡವೆಂದು ದುರಂತಕ್ಕೆ ತುತ್ತಾದ ತೂತ್ತುಕುಡಿಯ ಜನತೆಯು ಹೇಳಿತು, ೧೩ ಮಂದಿಯನ್ನು ಕಳೆದುಕೊಂಡಿತು. ಮಾಜಿ ಕೇಂದ್ರ ಸಚಿವ ಪಿ. ಚಿದಂಬರಂ ನೆಂಟಸ್ತನ ಇರಿಸಿಕೊಂಡಿರುವ ವೇದಾಂತ ಕಂಪನಿಯ ಬಾಗಿಲಿಗೆ ಬೀಗ ಜಡಿಯಲಾಯಿತು. ಇನ್ನೊಂದು ಸಂದರ್ಭ ಹೀಗಿದೆ: ಅರುಂಧತಿ ರಾಯ್ ಬಸ್ತಾರ್ ಜಿಲ್ಲೆಯಲ್ಲಿ ನಕ್ಸಲ್‌ವಾದಿಗಳ ಜೊತೆ ಕಾಡಿನ ಮತ್ತು ಬೆಟ್ಟಗುಡ್ಡಗಳ ನಡುವೆ ನಡೆದುಹೋಗುತ್ತಿದ್ದಾಗ ದೂರದಲ್ಲೆಲ್ಲೋ "ವೇದಾಂತ ಆಸ್ಪತ್ರೆ" ಎಂಬ ನಾಮಫಲಕ ನೋಡಿದಾಗ ಹೇಳಿದ್ದರಂತೆ, "ಹಾಳಾದವರು ಇಲ್ಲೂ ಬಂದು ಜನರನ್ನು ನಿರಾಶ್ರಿತರನ್ನಾಗಿಸುತ್ತಿದ್ದಾರಲ್ಲ, ಇದು ಕೂಡದು. ಮೊದಲು ಆಸ್ಪತ್ರೆ ಸ್ಥಾಪಿಸುತ್ತಾರೆ, ನಂತರ ಬೆಟ್ಟ ಅಗೆದು ಖನಿಜ ಸಾಗಿಸಲು ಸಿದ್ಧರಾಗುತ್ತಾರೆ," ಎಂದು. ಈ ಎರಡೂ ಪ್ರಕರಣಗಳ ಬಗ್ಗೆ ಎಡ-ಬಲಗಳು ಯಾವ ನಿಲುವು ಹೊಂದುತ್ತವೆಂದು ತರ್ಕಿಸುವುದು ಸುಲಭ.

ಸಾಹಿತ್ಯದಲ್ಲಿ ಇಂತಹ ಸಂಗತಿಗಳು ಅದೇ ಸ್ವರೂಪದಲ್ಲಿ ಹಾಸುಹೊಕ್ಕಾಗಿ ಸೇರಿರುವುದಿಲ್ಲ. ಅಸಮಾನತೆ, ಹಸಿವು, ಯುದ್ಧ, ಬಡತನ, ಇವುಗಳನ್ನು ಚಿತ್ರಿಸದೆಯೂ ಸಾಹಿತ್ಯ ಸೃಷ್ಟಿಯು ಜರುಗಿದೆ. ಆದರೆ ಅಂಥವುಗಳ ನಿವಾರಣೆಗೆ ದೈವೀ ಕಾರುಣ್ಯವನ್ನು ನಿರೀಕ್ಷಿಸುತ್ತಾ ಕೂರುವುದು ಅಪರೂಪ. ದೈವೀ ಕಾರುಣ್ಯವೆಂದ ಕೂಡಲೆ ಭಗವದ್ಗೀತೆಯು ನೆನಪಿಗೆ ಬರುತ್ತದೆ. ಆ ಮಹದ್ಗ್ರಂಥವನ್ನು ಎಡ-ಬಲಗಳು ಹೇಗೆ ಪರಾಮರ್ಶಿಸುತ್ತವೆ? 'ಎಡ'ದ್ದು ವೈಚಾರಿಕ ನೆಲೆಯಾದ್ದರಿಂದ ಗ್ರಂಥವನ್ನು ಚಾರಿತ್ರಿಕ ಮತ್ತು ಸಾಮಾಜಿಕ-ಸಾಂಸ್ಕೃತಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತದೆ. 'ಬಲ'ವು ರಮ್ಯತೆಯ ಭಾವೋದ್ರೇಕ, ದೈವೀ ಶ್ರದ್ಧೆ, ಭಗವಂತನ ಅಸೀಮಿತ ಕರುಣೆಯ ಬಗೆಗೆ ಗಾಢ ನಂಬಿಕೆ ಮುಂತಾದುವನ್ನು ಆಶ್ರಯಿಸಿ ಗ್ರಂಥವನ್ನು ವೈಭವೀಕರಿಸುತ್ತದೆ. ಗೀತೆಯು ಭಗವಾನನಲ್ಲಿ ಅಚಲ ನಂಬಿಕೆಯನ್ನು ಬೋಧಿಸುವಾಗ 'ಯಃಕಶ್ಚಿತ್ ಮಾನವ, ತಾನೇ ಏನೂ ಮಾಡಲಾರ' ಎಂದು ಸಿದ್ಧಾಂತೀಕರಿಸುವುದಲ್ಲದೆ ಆಯಾಕಾಲದ ಸಾಮಾಜಿಕ ಸಂಬಂಧಗಳು ಶಾಶ್ವತ, ಅವನ್ನು ಅಲುಗಿಸಬಾರದು ಎಂದೂ ಪ್ರತಿಪಾದಿಸುತ್ತದೆ. ಆದ್ದರಿಂದಲೇ ಆ ಗ್ರಂಥವು 'ಬಲ'ದ ಪ್ರಶಸ್ತ ಮತ್ತು ಪ್ರಧಾನ ಸಾಧನವಾಗಿದೆ.

ಹೀಗೆ ನಿರ್ದಿಷ್ಟ ಸಾಹಿತ್ಯ ಮತ್ತು ತತ್ತ್ವಶಾಸ್ತ್ರ ಇತ್ಯಾದಿಗಳನ್ನು ಗತಕಾಲ ಮತ್ತು ವರ್ತಮಾನದ ಇತಿಹಾಸದೊಂದಿಗೆ ತಾಳೆ ಹಾಕಿ, ಅವು ವಿಶಾಲಾರ್ಥದಲ್ಲಿ ಜನತೆಗೆ ಎಂತಹ ಇಂಬು ಕೊಡುತ್ತವೆಂದು ನೋಡುವುದು ಸಾಹಿತ್ಯದ ಸೈದ್ಧಾಂತಿಕ ನಿರೂಪಣೆಯಾಗುತ್ತದೆ. ಅದನ್ನೇ ನಾವು ಸಾಹಿತ್ಯದ ಮಾಪನ ಎನ್ನಬಹುದು. ಅದಕ್ಕೆ ದೊಡ್ಡ ದೊಡ್ಡ ಅಳತೆಕೋಲುಗಳು ಸಾಕಷ್ಟಿವೆ. ಅವುಗಳ ಕೆಲಸ ಸಹ ಇಂತಹ ಮಾಪನ ಮಾಡುವುದೇ ಆಗಿರುತ್ತದೆ. ಆದರೆ ಅದರ ಪರಿಭಾಷೆಯು ಹೆಚ್ಚು ಜಟಿಲ ಮತ್ತು ಸಂಕೀರ್ಣ. ಆದಾಗ್ಯೂ ಅದೂ ಕೂಡ ಸೈದ್ಧಾಂತಿಕ ಪ್ರಶ್ನೆಗಳನ್ನು ಗೌಣಗೊಳಿಸಲು ಸಾಧ್ಯವಿಲ್ಲ. ಯಾವುದೇ ಮಾಪನ ಸಾಧನವಿರಲಿ, ಉತ್ತಮ ಸಾಹಿತ್ಯಕ್ಕೆ ಮೂರು ಮೂಲಭೂತ ಲಕ್ಷಣಗಳಿರಬೇಕೆಂಬುದನ್ನು ಅವಗಣಿಸುವಂತಿಲ್ಲ: (ಅ) ತನ್ನ ಸಮಕಾಲೀನ ಸಂದರ್ಭಕ್ಕೆ ಸೀಮಿತವಾದ ಅನುಭವವನ್ನು ನೀಡಿ ವಿರಮಿಸದೆ, ಸಂಪೂರ್ಣ ಜೀವಿತಾನುಭವವನ್ನು ದೊರಕಿಸಿಕೊಡಬೇಕು ; ಇಲ್ಲದಿದ್ದರೆ ಇಂದಿನದನ್ನು ನಾಳೆಯವರು ಮಾನ್ಯ ಮಾಡಿಯಾರೆ? (ಆ) ತನ್ನ ಕಾಲದ ಜೀವನದ ಅನನ್ಯ ಲಕ್ಷಣಗಳ ಅನುಭೂತಿಯು ಓದುಗನಿಗೆ ಲಭ್ಯವಾಗಬೇಕು. ಅದು ಮಹಾಭಾರತ ಕಾವ್ಯವಿರಬಹುದು, ಲೋಕಾಯತರನ್ನು ಹಂಗಿಸಿ ಅದ್ವೈತ ವೇದಾಂತವನ್ನು ಪುರಸ್ಕರಿಸುವ ನಾಟಕ ಪ್ರಬೋಧ ಚಂದ್ರೋದಯ ಇರಬಹುದು, ಇಲ್ಲವೇ ಬುದ್ಧನ ಚರಿತ್ರೆಯನ್ನು ಹೇಳುವ ಬುದ್ಧಚರಿತ ಎಂಬ ಕಾವ್ಯವಿರಬಹುದು, ಯಾವುದೇ ಆದರೂ ಅದರಲ್ಲಿ ಈ ಲಕ್ಷಣವು ಅಗತ್ಯವಾಗಿ ಇರಬೇಕು; ಮತ್ತು (ಇ) ಮಾನವ ಜನಾಂಗದ ಇತಿಹಾಸದ ದೃಷ್ಟಿಯಿಂದ ಅಂದಿನ ಅನುಭೂತಿಯು ಹೇಗೆ ಸಾರ್ವತ್ರಿಕ ಮತ್ತು

ಸಾರ್ವಕಾಲಿಕ ಎಂಬುದನ್ನು ಸದೃಢವಾಗಿ ತೋರಿಸಬೇಕು. ಇದೇ ಅಂತಿಮ ಸಾಹಿತ್ಯ ಸಿದ್ಧಾಂತ. ಅದು ಎಡವೋ, ಬಲವೋ, ಸರ್ವಸ್ವವೋ ಎಂಬುದನ್ನು ನಾವು ತೀರ್ಮಾನಿಸಿಕೊಳ್ಳಲು ಸ್ವತಂತ್ರರು.

ಬಹಳ ಹಿಂದೆ ಮಾನ್ಯ ಬಿ. ಸಿ. ರಾಮಚಂದ್ರ ಶರ್ಮರು "ತತ್ವಕ್ಕೆ ಗಂಟುಬಿದ್ದು ಬರಗೂರು ಸತ್ತರು" ಎಂದಿದ್ದರು. ತತ್ವಕ್ಕೆ ಗಂಟುಬಿದ್ದಿದ್ದರಿಂದಲೇ ಬರಗೂರು ಉಳಿದಿದ್ದಾರೆ ಮತ್ತು ಉಳಿಯುತ್ತಾರೆಂಬುದು ಇಂದು ತಿಳಿದ ವಿಷಯ. ಬದುಕಬೇಕಾದರೆ ಮೋಜಿನ ಮಾತಿನ ಸರಪಳಿ ಹೆಣೆಯಬೇಕಾಗಿಲ್ಲ ಎಂಬುದು ಅವರ ಕೃತಿಗಳಿಂದ ಸಾಬೀತಾಗಿದೆ. "ಶುದ್ಧ ಜೀವನಾನುಭವ"ವನ್ನು ಸಾಹಿತ್ಯವು ಪ್ರತಿಪಾದಿಸಬೇಕೆಂಬ ಹಟತೊಟ್ಟವರನೇಕರು ಹೇಳ ಹೆಸರಿಲ್ಲದಂತೆ ಹೋಗಿಬಿಟ್ಟಿದ್ದಾರೆ. "ತತ್ವವು ಕೃತಿಯ ಒಳಗಿಂದಲೇ ಮೂಡುವಂತೆ ಮಾಡಬೇಕು" ಎಂಬ ಕಾವ್ಯ ಮೀಮಾಂಸಾ ಸೂತ್ರವನ್ನು ಅಂಗೀಕರಿಸಿ ಕೃತಿಗಳನ್ನು ರಚಿಸಿದವರು ಯಾವ ತತ್ವವನ್ನು ಮೂಡಿಸಿದರೋ ತಿಳಿಯುತ್ತಿಲ್ಲ. "ನಿಗೂಢತೆಯು ಸಾಹಿತ್ಯದ ಲಕ್ಷಣ; ಭೈರಪ್ಪನವರು 'ಸಾಕ್ಷಿ'ಯಲ್ಲಿ ಅದನ್ನು ಮಾಡಿ ತೋರಿಸಿದ್ದಾರೆ" ಎನ್ನುತ್ತಿದ್ದ ವಿಮರ್ಶಕರು ಯಾವ ನಿಗೂಢತೆಯನ್ನು ಭೇದಿಸಿದ್ದರೆಂಬುದು ವರದಿಯಾಗಿಲ್ಲ. ಇಲ್ಲಿ ಒಂದೆರಡು ಅಂಶಗಳನ್ನು ಗುರುತಿಸಬೇಕು: ಶುದ್ಧ ಜೀವನಾನುಭವವೆಂಬುದು ಮೂರ್ತವೋ ಅಮೂರ್ತವೋ? ಮೂರ್ತವಾದರೆ ಆ ಅನುಭವ ಬರುವುದು ಒಂದು ಹಿನ್ನೆಲೆಯಲ್ಲಿ ಮಾತ್ರ. ಒಂದೇ ಸಂಗತಿಗೆ ಬೇರೆ ಬೇರೆ ಪ್ರತಿಕ್ರಿಯೆಗಳು ಬರುವಂತಿದ್ದರೆ ಶುದ್ಧ ಯಾವುದು, ಅಶುದ್ಧ ಯಾವುದು ? ಎರಡನೆಯದಾಗಿ, 'ಶುದ್ಧ' ಅನುಭವ ನೀಡುವ ಕೃತಿಯಲ್ಲೂ ಯಾವುದೋ ತಾತ್ವಿಕತೆ ಇರುತ್ತದೆ ಮತ್ತು ಅದು ಬಹುಮಟ್ಟಿಗೆ ಅಂತಹ ಸಾಹಿತಿಯ ಎಲ್ಲ ಕೃತಿಗಳಲ್ಲೂ ಬಂದಿರುತ್ತದೆ. ಒಂದೊಂದು ಕೃತಿಯಲ್ಲಿ ಒಂದೊಂದು ತಾತ್ವಿಕತೆಯನ್ನು ಮೂಡಿಸುವ ಸಾಹಿತಿಯು ಸಾಹಿತ್ಯ ಲಂಪಟನಾಗಿ ಬಿಟ್ಟಾನು.

ಒಂದರ್ಥದಲ್ಲಿ 'ಎಡ' ಮತ್ತು 'ಬಲ' ಪ್ರತ್ಯೇಕವೇ ಆದರೂ ಸಾಹಿತ್ಯ ಕೃತಿಗಳಲ್ಲಿ ಎರಡೂ ಪ್ರತಿಫಲನಗೊಂಡಿರುತ್ತವೆ. ಅಂತಿಮ ಜೀವನವ್ಯಾಖ್ಯೆಯು ಒಂದು ಕಡೆಗೆ ವಾಲಿದರೂ ಇನ್ನೊಂದು ಮಗ್ಗಲು ಪೂರ್ವಪಕ್ಷವಾಗಿಯಾದರೂ ಚಿತ್ರಿತವಾಗಿರುತ್ತದೆ. ಚಿಂತನೆಯಲ್ಲಿ ಮತ್ತು ಕ್ರಿಯೆಯಲ್ಲಿ ಎಡ–ಬಲಗಳು ಬೇರೆ ಇರುವಂತೆ ಸಾಹಿತ್ಯ ಸಂವಹನದಲ್ಲೂ ಅವು ಭಿನ್ನವೇ. ಎರಡೂ ಕಡೆಯವರಿಗೆ ಓದುಗರಿದ್ದಾರಲ್ಲ, ವ್ಯಾಜ್ಯ ಏಕೆ ಬೇಕು ? ಬದಲಾಗುವ ಓದುಗರು ಬದಲಾದರೆ ಸಾಹಿತಿ ಏನು ಮಾಡಬಲ್ಲ ! ಚಿದಾನಂದಮೂರ್ತಿ – ಭೈರಪ್ಪ ಇರುವಂತೆ ಬರಗೂರು – ಕುಂವೀ ಸಹ ಇರುತ್ತಾರೆ. ಅದಕ್ಕೆ ವ್ಯಗ್ರತೆ ಏಕೆ ಬೇಕು ? ಆಂಗ್ಲ ಕವಿಗಳಲ್ಲಿ ಎಜ್ರಾ ಪೌಂಡ್ ಮತ್ತು ಡಬ್ಲ್ಯು. ಎಚ್. ಆಡೆನ್ (ಒಬ್ಬ ಫ್ಯಾಸಿಸಂ ಸಮರ್ಥಕ, ಇನ್ನೊಬ್ಬ ಅದರ ಕಡು ವಿರೋಧಿ) ಇಬ್ಬರೂ ಇದ್ದಾರೆ, ಅವರಿಬ್ಬರಲ್ಲಿ ಜನಮತ ಯಾರು ಗಳಿಸುತ್ತಾರೋ ಗಳಿಸಿಕೊಳ್ಳಲಿ. ನಮ್ಮಲ್ಲಿ ಎಜ್ರಾ ಪೌಂಡ್‌ನಂಥವರು ಬಂದಿಲ್ಲ; ಬಂದಿರುವುದು ಬಸವಣ್ಣ, ಬ್ರಹ್ಮಶಿವ, ಇತ್ಯಾದಿಗಳು. ಅಡಿಗರೂ ಇದ್ದಾರೆ, ಬೇಂದ್ರೆಯೂ ಇದ್ದಾರೆ. ಯಾರು ಉಳಿಯುತ್ತಾರೋ ಕಾದು ನೋಡೋಣ. ಮುಖ್ಯ ವಿಚಾರವೇನೆಂದರೆ ನಾವೆಲ್ಲ ಸ್ಮರಿಸುವುದು ಮಾನವ ಪರ ಮೌಲ್ಯಗಳನ್ನು ಬಿತ್ತಿದವರನ್ನೇ. ಯೋಚನೆ ಮಾಡಿ ನೋಡಿ, ಭೈರಪ್ಪನವರ ಲೈಂಗಿಕತೆಯ ಗೀಳು ಮತ್ತು ಅದಕ್ಕೆ ತಕ್ಕುದಾದ ಪದಕಟ್ಟು ಪುಷ್ಕಲವಾಗಿ ಇಲ್ಲದಿದ್ದರೆ ಅವರ ಕೃತಿಗಳು ಎಷ್ಟು ವ್ಯಾಪಕವಾಗಿರುತ್ತಿದ್ದವು? 'ದಾಟು' ಕಾದಂಬರಿಯಲ್ಲಿ ಒಬ್ಬ ಮಹಿಳೆಯ ಬಗ್ಗೆ ಅವರಾಡುವ ಮಾತಿದು: "ಉಜ್ಜಿಸಿಕೊಳ್ಳಬೇಕೆನಿಸಿತ್ತು, ಉಜ್ಜಿಸಿಕೊಂಡಳು." 'ಯಾನ'ದಲ್ಲಿ ನಮ್ಮ ಲೋಕದಾಚೆ ಹೋದರೂ ಲೈಂಗಿಕತೆಯ ಚಿತ್ರಣವಿಲ್ಲದೆ ಭೈರಪ್ಪನವರ ಸಾಹಿತ್ಯತಂತ್ರವು ಪೂರ್ಣವಾಗುವುದಿಲ್ಲ. ಡಿ. ಎಚ್. ಲಾರೆನ್ಸ್‌ನ "ಲೇಡಿ ಚ್ಯಾಟರ್ಲೀಸ್ ಲವರ್" ಕಾದಂಬರಿಯನ್ನು ಕೇವಲ ಸಾಹಿತ್ಯವೆಂದು ಸ್ವೀಕರಿಸುವವರೆಷ್ಟು ಮಂದಿ ಮತ್ತು ಅದರ ಲೈಂಗಿಕತೆಯ ಚಿತ್ರಣಕ್ಕಾಗಿಯೇ ಓದುವವರೆಷ್ಟು ಮಂದಿ ಎಂಬುದನ್ನು ಲೆಕ್ಕ ಮಾಡಿ ಹೇಳಿದರೆ ನಮ್ಮ ಕಣ್ಣುಗಳು ತೆರೆದುಕೊಳ್ಳುತ್ತವೆಯೆಂದು ತೋರುತ್ತದೆ. ನಮ್ಮ ದೇಶದ ಸಾಹಿತ್ಯ ಚರಿತ್ರೆಯಲ್ಲಿ ಹಿಂದೆ ಮತ್ತು ಇಂದು ಯಾರಿಗೆ ಮೆಚ್ಚುಗೆ ಸಂದಿದೆ, ಯಾರು ಪ್ರತಿಪಾದಿಸಿದ ಮೌಲ್ಯಗಳನ್ನು ರುಚಿಕರವೆಂದು ಪ್ರಶಂಸಿಸಿದ್ದೇವೆ ? (ಆ ಮೌಲ್ಯಗಳನ್ನು ಮೈಗೂಡಿಸಿಕೊಂಡಿದ್ದೇವೆಯೋ ಇಲ್ಲವೋ ಎನ್ನುವುದು ಬೇರೆ ಪ್ರಶ್ನೆ).

ಸಿದ್ಧಾಂತಕ್ಕೆ ಕಟ್ಟುಬಿದ್ದರೆ ಮೌಲಿಕ ಸಾಹಿತ್ಯದ ನಿರ್ಮಿತಿಯು ಸಾಧ್ಯವಿಲ್ಲವೆಂಬ ತೀರ್ಮಾನವೊಂದಿದೆ. "ಕಟ್ಟು ಬೀಳುವುದು" ಎಂದರೇನು? ಅದು ಸಾಂಸ್ಥಿಕವೋ ಅಥವಾ ವ್ಯಕ್ತಿ ನೆಲೆಯದೋ? ಉದಾಹರಣೆಗೆ, ಬಸವಣ್ಣನ ಮೌಲ್ಯಗಳಿಗೆ 'ಕಟ್ಟುಬಿದ್ದು' ಸಾಹಿತ್ಯ ರಚಿಸಿದರೆ ಅದು ನಿರಾಕರಣೆಗೆ ಯೋಗ್ಯವಾಗಿರಲೇಬೇಕೆಂಬ 'ಕಟ್ಟುನಿಟ್ಟು' ನಿಯಮವೇನಾದರೂ ಉಂಟೆ? 'ಸಿದ್ಧಾಂತ' ಎಂಬ ಪದವು ಸಿಟ್ಟಿಗೆಬ್ಬಿಸುತ್ತದೆ ಎಂದಾದರೆ ಅದನ್ನು ಬಿಟ್ಟುಬಿಡೋಣ, ಆದರೆ ಅದು ಸೂಚಿಸುವ ಒಲವು–ನಿಲುವುಗಳು ಇಲ್ಲವಾಗುತ್ತವೆಯೆ? ಅನೇಕ ವರ್ಷಗಳ ಹಿಂದೆ ಆಕಾಶವಾಣಿಗಾಗಿ ನಿರಂಜನರನ್ನು ಪಿ. ಲಂಕೇಶ್ ಸಂದರ್ಶಿಸಿದ್ದರು. ಒಂದು ಪ್ರಶ್ನೆಗೆ ಉತ್ತರವಾಗಿ ನಿರಂಜನರು ತಮ್ಮ ಪೂರ್ವಾಶ್ರಮದ ಬಗ್ಗೆ ಹೇಳುತ್ತಾ "ನನಗಾಗ ಪೂರ್ಣ ಸ್ವಾತಂತ್ರ್ಯವಿರಲಿಲ್ಲ, ನಾನೊಂದು ಸಿದ್ಧಾಂತಕ್ಕೆ ಬದ್ಧನಾಗಿದ್ದೆ; ಆದ್ದರಿಂದ ಆಗಿನ ನನ್ನ ಸಾಹಿತ್ಯವು ಏಕಮುಖಿಯಾಗಿತ್ತು" ಎಂದಿದ್ದರು. ಪಾಬ್ಲೊ ನೆರುದನ ಸಾಹಿತ್ಯ ಏಕೆ ಏಕಮುಖಿಯಾಗಲಿಲ್ಲ? ಡಿಕಿನ್ಸ್, ಗಾರ್ಕಿ, ಲೋರ್ಕ, ಮುಂತಾದವರ ಕೃತಿಗಳು ಏಕಮುಖಿಯಾಗಿವೆಯೆ? ಅಥವಾ ಅವು ಏಕಮುಖಿಗಳಾಗಿದ್ದರೂ ಚಿರಂತನವಾಗಿ ಉಳಿದಿವೆಯೆ? ಹೋಗಲಿ, ನಿರಂಜನರು "ಪೂರ್ಣ ಸ್ವಾತಂತ್ರ್ಯ" ಪಡೆದ ನಂತರದ ಅವರ ಕೃತಿಗಳು "ಚಿರಸ್ಮರಣೆ"ಯಷ್ಟು ಸ್ಮರಣೆಯಲ್ಲಿ ಉಳಿದಿಲ್ಲವಲ್ಲಾ, ಏಕೆ? ಪ್ರತ್ಯಕ್ಷ ಪ್ರಮಾಣದ ನೆಲೆಯಲ್ಲಿ ನಿಂತು ಮಾತನಾಡುವುದು ಕ್ಷೇಮ. ಪಿಕಾಸೊ 'ಗೆರ್ನಿಕಾ' ಕಲಾಸೃಷ್ಟಿ ಮಾಡಿದಾಗ ಇಡೀ ಯೂರೋಪು ಬಂಧನದಲ್ಲಿದ್ದಿತಲ್ಲವೆ?

ಇನ್ನು ಕಡೆಯ ಪ್ರಶ್ನೆ: ಸಿದ್ಧಾಂತವೆಂದರೆ ಮೂಗುಮುರಿಯುತ್ತಾರಲ್ಲ, ಅವರ ದೃಷ್ಟಿಯಲ್ಲಿ ಸಿದ್ಧಾಂತದಲ್ಲಿನ ಹುಳುಕಾದರೂ ಎಂಥದು? ಸಾಮಾನ್ಯವಾಗಿ ಹೇಳುವುದಾದರೆ, ಮೂಲತಃ ಅದನ್ನು "ಚಾರಿತ್ರಿಕ ಭೌತವಾದ" ಎನ್ನುತ್ತಾರೆ. ಸಾಹಿತ್ಯ ಮತ್ತು ಕಲೆಯ ಸಂದರ್ಭದಲ್ಲಿ ಅದರ ಇಂಗಿತ ಸರಳವಾಗಿದೆ: ಸಾಹಿತ್ಯ ಮತ್ತು ಸಮಾಜದ ನಡುವೆ ಸಜೀವ ಸಂಬಂಧವಿದೆ, ಅದಕ್ಕೆ ಒತ್ತು ಕೊಡುವುದು ಸಾಹಿತ್ಯ ವಿಮರ್ಶೆಯ ದೃಷ್ಟಿಯಾಗಬೇಕು, ಎಂದು. ಇದರಲ್ಲಿ ತಪ್ಪೇನಿದೆ? ಚಾರಿತ್ರಿಕ ಭೌತವಾದವು ನಿರೂಪಿಸುವುದೇನನ್ನು? ಅತಿಮುಖ್ಯವಾಗಿ ಅದು "ಚರಿತ್ರೆಯುದ್ದಕ್ಕೂ ಸಂಘರ್ಷಗಳು ನಡೆದಿವೆ, ಅವುಗಳ ಪರಿಹಾರ ರೂಪದಲ್ಲಿ ಹೊಸ ಹೊಸ ವ್ಯವಸ್ಥೆಗಳು ಅಸ್ತಿತ್ವಕ್ಕೆ ಬಂದಿವೆ, ಎಂದು." ಇದು ಯಾರದೋ ಭಾವನೆಯಲ್ಲ, ಚರಿತ್ರೆಯಲ್ಲಿನ ವಸ್ತುಸ್ಥಿತಿ. ಒಂದೊಂದು ಹಂತದಲ್ಲೂ ಮಾನವನ ಸ್ವಾತಂತ್ರ್ಯದ ಪರಿಧಿಯು ವಿಸ್ತರಿಸುತ್ತಾ ಹೋಗಿದೆ ಮತ್ತು ಅಂತೆಯೇ ಸಾಗುತ್ತಾ ಹೋಗುತ್ತದೆ. ಗುಲಾಮಗಿರಿಯಾಗಲಿ, ಊಳಿಗಮಾನ್ಯ ಪ್ರಭುತ್ವವಾಗಲಿ ನಷ್ಟವಾಯಿತೆಂದು ನಾವು ದುಃಖಿಸುತ್ತಾ ಕೂಡಬೇಕಿಲ್ಲ. ಸಂಘರ್ಷವು ಹಿಂಸಾತ್ಮಕವಾಗಿಯೇ ಇರಬೇಕೆಂಬ ನಿಯಮವೂ ಇಲ್ಲ. ನ್ಯಾಯಾಲಯ ದಲ್ಲಿನ ತನ್ನ ಹೇಳಿಕೆಯಲ್ಲಿ ಭಗತ್ ಸಿಂಗ್ ಇದನ್ನು ಸುಮಾರು ತೊಂಭತ್ತು ವರ್ಷಗಳ ಹಿಂದೆಯೇ ಸ್ಪಷ್ಟಪಡಿಸಿದ್ದ. ಅಸ್ಪೃಶ್ಯತೆಯಂತಹ ಹೀನ ಪದ್ಧತಿಯನ್ನು ಎರಡು ಸಾವಿರ ವರ್ಷಗಳ ಕಾಲ ಆಚರಿಸಿರುವ ನಮ್ಮ ದೇಶದಲ್ಲಿ ಹಿಂಸೆಯ ವಿರುದ್ಧ ಸೊಲ್ಲೆತ್ತುತ್ತೇವೆಂಬುದೇ ಒಂದು ವಿಪರ್ಯಾಸ. ಈಗಲೂ ಆ ಅತೀವ ಹಿಂಸೆಯ ಆಚರಣೆ ನಮ್ಮಲ್ಲಿ ಉಳಿದಿದೆ. ಅಸ್ಪೃಶ್ಯತೆಗೆ ಗುರಿಯಾದವರು ಆ ಹಿಂಸೆಗೆ ಉತ್ತರವಾಗಿ ಪ್ರತಿ ಹಿಂಸೆಗೆ ಮುನ್ನುಗ್ಗಿಲ್ಲ; ಹಾಗೇನಾದರೂ ಅವರು ಮುನ್ನುಗ್ಗಿದ್ದಿದ್ದರೆ ನಾವೇನು ಹೇಳಬಹುದಿತ್ತು?

ಸಾರರೂಪದಲ್ಲಿ ಹೇಳುವುದಾದರೆ, ಸಾಮಾಜಿಕ ರಚನೆಯು ಯಾರ ಪೂರ್ವಜನ್ಮದ ಸಂಸ್ಕಾರದಿಂದಲೂ ನಡೆದುಬಂದಿಲ್ಲ. ಕಣ್ಣಿಗೆ ಕಾಣುವ ಮೂರ್ತ ಸಂಗತಿಗಳಿಂದ ಅದು ಘಟಿಸಿದೆ. ಹಿಂದಿನ ಸಂರಚನೆಗಳು ಬದಲಾದಂತೆ ಅಥವಾ ಇಲ್ಲವಾದಂತೆ ಇಂದಿನ ಸಂರಚನೆಯ ಪ್ರಶ್ನಾರ್ಹ ಸಂಗತಿಗಳೂ ಬದಲಾಗಬೇಕು, ಇಲ್ಲವಾಗಬೇಕು. ಆ ದಿಕ್ಕಿನಲ್ಲಿ ಸಾಹಿತ್ಯ ಸಹ ತನ್ನ ಅಳಿಲು ಕಾಣಿಕೆ ಕೊಡುವುದಾದರೆ ಯಾರಾದರೂ ಏಕೆ ಮುನಿಸಿಕೊಳ್ಳಬೇಕು? ಅಂತಹ ಉತ್ಕೃಷ್ಟ ಕೊಡುಗೆ ನೀಡುವ ಸಾಧನವಾಗಬಲ್ಲ ಸಿದ್ಧಾಂತವು ಸಾಹಿತ್ಯ ಕ್ಷೇತ್ರವನ್ನು ಪ್ರಭಾವಿಸಿದರೆ ಪರಿತಪಿಸಲು ಸರ್ವಥಾ ಯಾವ ಕಾರಣವೂ ಇರಲಾರದು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ, ಬೆಂಗಳೂರು – ೫೬೦ ೦೮೫

ಡಾ॥ ಟಿ. ಆರ್. ಚಂದ್ರಶೇಖರ





# ಕರ್ನಾಟಕದ ೨೦೧೮ರ ಚುನಾವಣೆ: ಪಕ್ಷಗಳ ಪ್ರಣಾಳಿಕೆಗಳ ಪ್ರಸ್ತಾವನೆ

**ಕ**ರ್ನಾಟಕದಲ್ಲಿ ೨೦೧೮ರ ಮೇನಲ್ಲಿ ನಡೆದ ಚುನಾವಣೆಯಲ್ಲಿ ಮತದಾರರು ಯಾವ ಪಕ್ಷಕ್ಕೂ ಬಹುಮತ ನೀಡಲಿಲ್ಲ. ಇದರ ಅರ್ಥವೇನು ? ಸರಳವಾಗಿ ಹೇಳಬೇಕೆಂದರೆ ಜನರಿಗೆ ರಾಜಕೀಯ ಪಕ್ಷಗಳ ಬಗ್ಗೆ ಬಹಳ ವಿಶ್ವಾಸವೇನೂ ಇದ್ದಂತೆ ಕಾಣುವುದಿಲ್ಲ. ಎರಡು ರಾಷ್ಟ್ರೀಯ ಪಕ್ಷಗಳು ಮತ್ತು ಒಂದು ಪ್ರಾದೇಶಿಕ ಪಕ್ಷ ಚುನಾವಣೆಯಲ್ಲಿ ಸ್ಪರ್ಧೆ ನಡೆಸಿದ್ದವು. ದೇಶದ ಪ್ರಧಾನಿಯಂತಹ ಪ್ರಧಾನಿಯೇ ಇಲ್ಲಿಗೆ ಬಂದು ೨೧ ಪ್ರಚಂಡ ಭಾಷಣಗಳನ್ನು, ರೋಡ್ ಶೋಗಳನ್ನು ನಡೆಸಿದರು. ಜನರೇನು ಅದಕ್ಕೆ ಬಗ್ಗಿ / ಒಗ್ಗಿದಂತೆ ಕಾಣಲಿಲ್ಲ. ಏಕೆಂದರೆ ಅವರ ಪಕ್ಷ ಪಡೆದುಕೊಂಡ ಮತಗಳ ಪ್ರಮಾಣ ಕೇವಲ ಶೇ. ೩೬. ಆದರೂ ಅದು ಜನಾದೇಶದ ಬಗ್ಗೆ ಮಾತನಾಡುತ್ತಿದೆ. ಈಗ ಚುನಾವಣೆಯಲ್ಲಿ ಒಟ್ಟಿಗೆ ಶೇ. ೫೬ರಷ್ಟು (ಕಾಂಗ್ರೆಸ್ ಶೇ. ೩೮ + ಜೆಡಿಎಸ್ ಶೇ.೧೮) ಮತಗಳನ್ನು ಪಡೆದಿರುವ ಕಾಂಗ್ರೆಸ್ ಮತ್ತು ಜಾತ್ಯತೀತ ಜನತಾದಳ ಒಟ್ಟಿಗೆ ಸೇರಿ ಸಮ್ಮಿಶ್ರ ಸರ್ಕಾರ ರಚಿಸಿವೆ. ಈ ಪಕ್ಷಗಳು ಚುನಾವಣೆಯಲ್ಲಿ ಜನತೆಗೆ ನೀಡಿದ್ದ ಆಶ್ವಾಸನೆಗಳೇನು? ಅವುಗಳು ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಬಗೆ ಯಾವುದು ? ಕೃಷಿ ಬಿಕ್ಕಟ್ಟನ್ನು ಅವು ಹೇಗೆ ನೋಡಿವೆ ? ಕೃಷಿ ಸಾಲ ಮನ್ನಾ ನಮ್ಮ ರೈತಾಪಿಗಳ ಎಲ್ಲ ಸಮಸ್ಯೆ ಗಳಿಗೂ ಪರಿಹಾರವೇ ? ಶಿಕ್ಷಣ, ಆರೋಗ್ಯ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ, ನೀರಾವರಿ ಮುಂತಾದವುಗಳ ಬಗ್ಗೆ ಅವುಗಳ ಆಲೋಚನೆಯೇನು ? ಇವು ನಾವು ಚರ್ಚಿಸ ಬೇಕಾಗಿರುವ ಸಂಗತಿಗಳು. ಈ ಚರ್ಚೆಗೆ ನಾವು ಅನುಸರಿಸಿರುವ ಮಾರ್ಗವೆಂದರೆ ೨೦೧೮ರ ಚುನಾವಣೆಯಲ್ಲಿ ರಾಜಕೀಯ ಪಕ್ಷಗಳು ಹೊರಡಿಸಿದ್ದ ಪ್ರಣಾಳಿಕೆಗಳನ್ನು ಮುಂದಿಟ್ಟುಕೊಂಡು ಚರ್ಚೆ ಮಾಡುವುದು. ಇಂತಹ ಒಂದು ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಭಾಗ – ೧**

**ಚುನಾವಣಾ ಪ್ರಣಾಳಿಕೆಗಳು**

ರಾಜಕೀಯ ಪಕ್ಷಗಳು ಚುನಾವಣೆಯ ಸಂದರ್ಭದಲ್ಲಿ ತಮ್ಮ ನೀತಿಗಳನ್ನು, ಕಾರ್ಯಕ್ರಮಗಳನ್ನು, ಭರವಸೆಗಳನ್ನು ತಮ್ಮ ಪ್ರಣಾಳಿಕೆಗಳಲ್ಲಿ ಪ್ರಕಟಿಸುವುದು ರೂಢಿಯಲ್ಲಿದೆ. ಇದರ ಬಗ್ಗೆ ಈಗೀಗ ಜನರಲ್ಲಿ ಮತ್ತು ಪಕ್ಷಗಳಲ್ಲಿ ಜಾಗೃತಿ ಮೂಡುತ್ತಿದೆ. ರಾಜಕೀಯ ಪಕ್ಷಗಳ ಪ್ರಣಾಳಿಕೆಗಳ ಲೆಕ್ಕಪರಿಶೋಧನೆಯ ಕ್ರಮ ನಮ್ಮಲ್ಲಿ ನಡೆಯುತ್ತಿಲ್ಲ. ಚುನಾವಣೆ ಪ್ರಣಾಳಿಕೆಯಲ್ಲಿ ನೀಡಿದ ಭರವಸೆಗಳಲ್ಲಿ ಐದು ವರ್ಷಗಳ ನಂತರ ಎಷ್ಟನ್ನು ಸಂಬಂಧಿಸಿದ ರಾಜಕೀಯ ಪಕ್ಷ ಈಡೇರಿಸಿದೆ ಎಂಬುದರ ಮೌಲ್ಯಮಾಪನ ಮಾಡುವ ಕ್ರಮ ರೂಪುಗೊಂಡಿಲ್ಲ. ಈ ಪ್ರಣಾಳಿಕೆ ಗಳನ್ನು ಒಂದು ವಿಧ್ಯುಕ್ತ ಕ್ರಿಯೆಯಂತೆ ರಾಜಕೀಯ ಪಕ್ಷಗಳು ಸಿದ್ಧಪಡಿಸಿದರೆ ಮತದಾರರು ಅವುಗಳ ಬಗ್ಗೆ, ಕೆಲವು ಅಪವಾದಗಳನ್ನು ಬಿಟ್ಟರೆ, ಗಮನ ನೀಡುತ್ತಿಲ್ಲ. ಆದರೆ ೨೦೧೪ರ ನಂತರ ಜನರು ಪ್ರಣಾಳಿಕೆಗಳಲ್ಲಿ ಆಶ್ವಾಸನೆ ನೀಡಿದ್ದ ಸಂಗತಿಗಳ ಬಗ್ಗೆ ಸಂಬಂಧಿಸಿದ ರಾಜಕೀಯ ಪಕ್ಷಕ್ಕೆ ಪ್ರಶ್ನೆ ಕೇಳತೊಡಗಿದ್ದಾರೆ. ತಮ್ಮ ತುರ್ತು ಬೇಡಿಕೆಗಳನ್ನು ಪ್ರಣಾಳಿಕೆಗಳಲ್ಲಿ ಸೇರಿಸಿಕೊಳ್ಳುವಂತೆ ಮತದಾರರು ಒತ್ತಾಯ ಮಾಡುವ ಕ್ರಮಗಳು ಚಾಲು ಆಗಿವೆ. ವಿವೇಚನಾರಹಿತವಾಗಿ ಆಶ್ವಾಸನೆಗಳನ್ನು ನೀಡಿದರೆ ಏನಾಗುತ್ತದೆ ಎಂಬುದು ಕರ್ನಾಟಕದಲ್ಲಿನ ರೈತರ ಸಾಲ ಮನ್ನಾ ಬಗ್ಗೆ ರಾಜಕೀಯ ಪಕ್ಷಗಳು ಪ್ರಣಾಳಿಕೆಯಲ್ಲಿ ನೀಡಿದ್ದ ಆಶ್ವಾಸನೆಯಿಂದ ಇಲ್ಲದ ಸಂಕಷ್ಟ ಎದುರಿಸುವಂತಾಗಿದೆ. ಸರ್ಕಾರದ ಆಯವ್ಯಯದಲ್ಲಿ ಸಾರ್ವಜನಿಕ ವೆಚ್ಚವು ಒಂದು ಭಾಗವಾದರೆ ಸಾರ್ವಜನಿಕ ರಾಜಸ್ವ ಮತ್ತೊಂದು ಭಾಗವಾಗಿದೆ. ಆದರೆ ರಾಜಕೀಯ ಪಕ್ಷಗಳು ತಮ್ಮ ಪ್ರಣಾಳಿಕೆಯನ್ನು ಸಿದ್ಧಪಡಿಸುವಾಗ ವೆಚ್ಚದ ಬಗ್ಗೆ ಗಮನ ನೀಡುತ್ತಿವೆಯೇ ವಿನಾ ರಾಜಸ್ವ ಸಂಗ್ರಹದ ಬಗ್ಗೆ, ಅದರ ಸಂಭಾವ್ಯ ಸಾಮರ್ಥ್ಯದ ಬಗ್ಗೆ ಯೋಚಿಸುತ್ತಿಲ್ಲ. ಇದಕ್ಕೆ ಸೈದ್ಧಾಂತಿಕವಾಗಿ ಒಂದು ಸಮರ್ಥನೆ ನೀಡಬಹುದು. ಖಾಸಗಿ ಆಯವ್ಯಯದಲ್ಲಿ ವರಮಾನವು ವೆಚ್ಚಗಳನ್ನು ನಿರ್ಧರಿಸಿದರೆ ಸಾರ್ವಜನಿಕ ಹಣಕಾಸು ವ್ಯವಹಾರದಲ್ಲಿ ವೆಚ್ಚವು ವರಮಾನವನ್ನು ನಿರ್ಧರಿಸುತ್ತದೆ. ಆದರೆ ಇದು ಒಂದು ಹಂತದವರೆಗೆ ಸರಿ. ಕೊನೆಯಲ್ಲಿ ಸರ್ಕಾರಗಳೂ ಸಹ ರಾಜಸ್ವ ಸಂಗ್ರಹದ ಬಗ್ಗೆ ಯೋಚಿಸಬೇಕಾಗುತ್ತದೆ. ಆದರೆ ಪ್ರಣಾಳಿಕೆಗಳಲ್ಲಿ ಇದರ ಬಗ್ಗೆ ಚರ್ಚೆ ಕಾಣುತ್ತಿಲ್ಲ. ಕರ್ನಾಟಕದಲ್ಲಿ ೨೦೧೮ರ ಚುನಾವಣೆಯಲ್ಲಿ ಕಾಂಗ್ರೆಸ್, ಜಾತ್ಯತೀತ ಜನತಾದಳ ಮತ್ತು ಭಾರತೀಯ ಜನತಾ ಪಕ್ಷಗಳು ಪ್ರಕಟಿಸಿರುವ ಪ್ರಣಾಳಿಕೆಗಳ

ಮೌಲ್ಯಮಾಪನ ಮಾಡುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪಕ್ಷಗಳು ಅಭಿವೃದ್ಧಿಯನ್ನು ಪರಿಭಾವಿಸಿಕೊಂಡಿರುವ ಬಗೆ, ನೀಡಿರುವ ಆಶ್ವಾಸನೆಗಳು, ಅವುಗಳನ್ನು ಸಾಧಿಸಿಕೊಳ್ಳಲು ರೂಪಿಸಿರುವ ಕಾರ್ಯಯೋಜನೆ, ಹಣಕಾಸಿನ ಸಂಗ್ರಹದ ತಂತ್ರ ಮುಂತಾದ ಸಂಗತಿಗಳನ್ನು ಇಲ್ಲಿ ಚರ್ಚಿಸುವ ಉದ್ದೇಶವಿದೆ. ಇಂದು ರಾಜಕೀಯ ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಗಳನ್ನು ಜನರ ಸಹಭಾಗಿತ್ವದಲ್ಲಿ ಸಿದ್ಧಪಡಿಸುವ ಕ್ರಮವನ್ನು ಅನುಸರಿಸುತ್ತಿವೆ. ಅದಕ್ಕಾಗಿ ಪಕ್ಷದ ಬುದ್ಧಿಜೀವಿಗಳ ಸಮಿತಿಯನ್ನು ನೇಮಿಸುವ ಪದ್ಧತಿಯೂ ಜಾರಿಗೆ ಬಂದಿದೆ. ಪಕ್ಷದ ಬಗ್ಗೆ ಸಹಾನುಭೂತಿ ಇರುವವರ ನೆರವನ್ನು ಇದಕ್ಕಾಗಿ ಪಡೆಯಲಾಗುತ್ತಿದೆ. ಇವೆಲ್ಲ ಸ್ವಾಗತಾರ್ಹ ಸಂಗತಿಗಳಾಗಿವೆ. ಆದರೆ ಇಲ್ಲಿ ಅನೇಕ ಸಮಸ್ಯೆಗಳಿವೆ.

**ಭಾಗ – ೨**

**ಅಭಿವೃದ್ಧಿ ಎಂದರೇನು?**

ಅಭಿವೃದ್ಧಿ ಅನ್ನುವುದನ್ನು ರಾಜಕೀಯ ಪಕ್ಷಗಳಿಗೆ ಲೋಕಾಭಿರಾಮದ ಸಂಗತಿಯಾಗಿರುವುದು ಅವುಗಳ ಪ್ರಣಾಳಿಕೆಗಳ ಅಧ್ಯಯನದಿಂದ ಕಂಡುಬರುತ್ತದೆ. ಅಭಿವೃದ್ಧಿ ಅನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿಯಾಗಿರುವುದರಿಂದ ಅದನ್ನು ನಿರ್ವಚಿಸುವ ಅಗತ್ಯವಿಲ್ಲವೆಂದು ಪಕ್ಷಗಳು ಭಾವಿಸಿರುವಂತೆ ಕಾಣುತ್ತದೆ. ಹಾಗಾದರೆ ಅದನ್ನು ಈ ಪಕ್ಷಗಳು ಪರಿಭಾವಿಸಿಕೊಂಡಿರುವ ಬಗೆ ಯಾವುದು? ಕರ್ನಾಟಕದಲ್ಲಿ ೨೦೧೮ರ ಚುನಾವಣೆಯಲ್ಲಿ ಭಾಗವಹಿಸಿರುವ ಪಕ್ಷಗಳು ಪರಿಭಾವಿಸಿಕೊಂಡಿರುವ ಅಭಿವೃದ್ಧಿ ತತ್ವಗಳ ನಡುವೆ ತೀವ್ರ ಭಿನ್ನತೆಗಳು ಇದ್ದಂತೆ ಕಾಣುವುದಿಲ್ಲ. ಅವುಗಳ ಅಭಿವೃದ್ಧಿಯು ವರಮಾನ (ಜಿಡಿಪಿ / ಜಿಎಸ್‌ಡಿಪಿ) ಕೇಂದ್ರಿತವಾದುದಾಗಿದೆ. ವರಮಾನದ ಏರಿಕೆಯೇ ಅಭಿವೃದ್ಧಿ ಎಂಬುದು ಪಕ್ಷಗಳ ನಂಬಿಕೆಯಾಗಿದೆ. ಅದಕ್ಕೆ ಬಂಡವಾಳ ಹೂಡಿಕೆಯು ಅತ್ಯಂತ ಸೂಕ್ತವಾದ ತಂತ್ರ ಎಂಬುದು ಇಲ್ಲಿನ ನಂಬಿಕೆಯಾಗಿದೆ. ಇದಕ್ಕಾಗಿಯೇ ಎಲ್ಲ ಪಕ್ಷಗಳು ಬಂಡವಾಳ ಹೂಡಿಕೆ, ವಿದೇಶಿ ಬಂಡವಾಳ, ತಂತ್ರಜ್ಞಾನ, ಯಂತ್ರೋಪಕರಣಗಳು, ಥಳಥಳನೆ ಹೊಳೆಯುವ ರಸ್ತೆಗಳು, ಗಗನಚುಂಬಿ ಕಟ್ಟಡಗಳು, ಭಾರಿ ನೀರಾವರಿ ಯೋಜನೆಗಳು ಮುಂತಾದವುಗಳನ್ನು ಅಭಿವೃದ್ಧಿಯ ಸೂಚಿಗಳನ್ನಾಗಿ ಬಳಸುತ್ತಿವೆ. ಆದರೆ ಜಗತ್ತಿನಲ್ಲಿ ಇಂದು ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮ ಬದಲಾಗಿದೆ. ವರಮಾನಕ್ಕೆ ಪ್ರತಿಯಾಗಿ ಜನರು (ಮಹಿಳೆಯರನ್ನೂ ಸೇರಿಸಿಕೊಂಡು), ಜನರ ಬದುಕು ಅಭಿವೃದ್ಧಿಯ ಮೂಲದ್ರವ್ಯ ಎಂಬುದರ ಬಗ್ಗೆ ಪ್ರಣಾಳಿಕೆಗಳಲ್ಲಿ ಚರ್ಚೆ ನಡೆದಿಲ್ಲ. ವರಮಾನವು ಅಭಿವೃದ್ಧಿಯ ಸಾಧನವೇ ವಿನಾ ಅದೇ ಅಭಿವೃದ್ಧಿಯಲ್ಲ. ಸಮಾನತೆ, ಮಹಿಳಾ ಸ್ವಾತಂತ್ರ್ಯ, ಸಾಮಾಜಿಕ ನ್ಯಾಯ, ಶಿಕ್ಷಣ, ಆರೋಗ್ಯ ಮುಂತಾದವು ಆನುಷಂಗಿಕವಾದ ಸಂಗತಿಗಳಾಗಿರುವುದು ಪ್ರಣಾಳಿಕೆಗಳ ಅಧ್ಯಯನದಿಂದ ತಿಳಿದುಬರುತ್ತದೆ.

**ಭಾಗ – ೩**

**ಪ್ರಣಾಳಿಕೆಗಳ ನಡುವೆ ಮೂಲ ಭಿನ್ನತೆಯೇನಿಲ್ಲ !!**

ಕಾಂಗ್ರೆಸ್, ಜಾತ್ಯತೀತ ಜನತಾದಳ ಮತ್ತು ಬಿಜೆಪಿ ಪಕ್ಷಗಳ ೨೦೧೮ರ ಚುನಾವಣಾ ಪ್ರಣಾಳಿಕೆಗಳ ನಡುವೆ, ಅವುಗಳ ವಿನ್ಯಾಸದಿಂದ ಆರಂಭಿಸಿ ಅವುಗಳ ಪರಿವಿಡಿ, ಭರವಸೆಗಳು ಮುಂತಾದವುಗಳ ನಡುವೆ ಗುಣಾತ್ಮಕವಾದ ವ್ಯತ್ಯಾಸಗಳು ಕಂಡುಬರುವುದಿಲ್ಲ. ಈ ಮೂರು ಪ್ರಣಾಳಿಕೆಗಳನ್ನು ಒಂದರ ಪಕ್ಕ ಒಂದನ್ನಿಟ್ಟು ಪರಿಶೀಲಿಸಿದರೆ ಅವುಗಳೆಲ್ಲವೂ ಒಂದೇ ರೀತಿ ಗೋಚರಿಸುತ್ತವೆ. ಪರಿವಿಡಿಯಲ್ಲಿಯೂ ಮೂರೂ ಸಮಾನತೆಯನ್ನು ಕಾಯ್ದುಕೊಂಡಿವೆ.

**ಚೌಕಟ್ಟು : ೧**

***ಪ್ರಣಾಳಿಕೆಗಳ ಪರಿವಿಡಿ ಸ್ವರೂಪ :*** *ಮೂರು ಪ್ರಣಾಳಿಕೆಗಳ ಪರಿವಿಡಿಗಳಲ್ಲಿನ ಸಮಾನ ಸಂಗತಿಗಳು: ಸಂದೇಶ, ಕೃಷಿ, ಶಿಕ್ಷಣ, ಆರೋಗ್ಯ, ನೀರಾವರಿ, ವಿದ್ಯುತ್, ಮೂಲಸೌಕರ್ಯ, ಪ್ರವಾಸೋದ್ಯಮ, ಕೈಗಾರಿಕೆ, ಪರಿಸರ, ಬೆಂಗಳೂರು. ಸಂಸ್ಕೃತಿ ಬಿಜೆಪಿಯ ವಿಶಿಷ್ಟತೆಯಾದರೆ ಅಲ್ಪಸಂಖ್ಯಾತರು ಜೆಡಿಎಸ್‌ನ ವಿಶೇಷತೆ, ಮಾಹಿತಿ ತಂತ್ರಜ್ಞಾನ ಕಾಂಗ್ರೆಸ್ಸಿನ ವಿಶಿಷ್ಟತೆಯಾಗಿದೆ.*

ಮೂರು ಪ್ರಣಾಳಿಕೆಗಳಲ್ಲಿ, ಮೊದಲೇ ಹೇಳಿರುವಂತೆ ರಾಜಸ್ವ ಸಂಗ್ರಹದ ಬಗ್ಗೆ ಯಾವುದೇ ಚರ್ಚೆಯಾಗಲಿ ಅಥವಾ ಅದರ ಅಗತ್ಯತೆಯ ಬಗ್ಗೆ ಅವು ಮಾತನಾಡಿಲ್ಲ. ಉದಾಹರಣೆಗೆ, ಬಿಜೆಪಿಯು ತನ್ನ ಪ್ರಣಾಳಿಕೆಯಲ್ಲಿ ಸರಿ ಸುಮಾರು ರೂ. ೯೦,೦೦೦ ಕೋಟಿ ಮೊತ್ತದ ಭರವಸೆಗಳನ್ನು ನೀಡಿದೆ (ವಿವರಗಳಿಗೆ ಚೌಕಟ್ಟು ೨ ನೋಡಿ). ನೀರಾವರಿಗೆ ವಾರ್ಷಿಕ ಅದು ನಿಗದಿಪಡಿಸಿರುವ ಮೊತ್ತ ರೂ. ೩೦,೦೦೦ ಕೋಟಿ. ಕರ್ನಾಟಕದ ವಾರ್ಷಿಕ ಬಜೆಟ್ಟಿನ ಗಾತ್ರವು ರೂ. ೨.೨೦ ಲಕ್ಷ ಕೋಟಿಯಷ್ಟಿದೆ. ಕರ್ನಾಟಕದ ಆರನೆಯ ವೇತನ ಆಯೋಗದ ಶಿಫಾರಸ್ಸಿನ ಪ್ರಕಾರ ೨೦೧೮-೧೯ರಲ್ಲಿ ಎಲ್ಲ ಬಗೆಯ ವೇತನಗಳ ಒಟ್ಟು ಮೊತ್ತ ರೂ. ೬೦,೦೦೦ ಕೋಟಿಯಾಗಬಹುದು. ಸ್ಥಳೀಯ ಸಂಸ್ಥೆಗಳಿಗೆ ರಾಜ್ಯದ ರಾಜಸ್ವದಲ್ಲಿ ಶೇ. ೪೨ರಷ್ಟನ್ನು ನೀಡಬೇಕು. ಅದು ೨೦೧೭-೧೮ರಲ್ಲಿ ಸುಮಾರು ರೂ.೪೦,೦೦೦ ಕೋಟಿ ಮೀರುತ್ತದೆ. ಒಟ್ಟಾರೆ ಬಿಜೆಪಿಯ ಭರವಸೆಗಳನ್ನು ಈಡೇರಿಸುವುದಕ್ಕೆ ಮತ್ತು ವೇತನಕ್ಕೆ ಹಾಗೂ ಸ್ಥಳೀಯ ಸಂಸ್ಥೆಗಳ ವರ್ಗಾವಣೆಗೆ ಅಗತ್ಯವಾದ ಒಟ್ಟು ಮೊತ್ತ ಸುಮಾರು ರೂ. ೧.೮ ಲಕ್ಷ ಕೋಟಿ. ಆಡಳಿತ, ಶಿಕ್ಷಣ, ಆರೋಗ್ಯ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ, ಸಮಾಜ ಕಲ್ಯಾಣ, ಕೃಷಿ ಮುಂತಾದವುಗಳಿಗೆ ಉಳಿಯುವ ಹಣ ಸುಮಾರು ರೂ. ೪೦,೦೦೦ ಕೋಟಿಯಿಂದ ರೂ. ೫೦,೦೦೦ ಕೋಟಿ. ಇದರಲ್ಲಿ ಶಿಕ್ಷಣಕ್ಕೆ ಕರ್ನಾಟಕ ನೀಡುತ್ತಿರುವ ಮೊತ್ತ ರೂ. ೨೦,೦೦೦ ಕೋಟಿ, ಸಮಾಜ ಕಲ್ಯಾಣಕ್ಕೆ ಮೀಸಲಿಡುತ್ತಿರುವ ಮೊತ್ತ ರೂ.೧೫,೦೦೦ ಕೋಟಿ. ಇದರಲ್ಲಿ ರೈತರ ಸಾಲ ಮನ್ನಾಕ್ಕೆ ಎಲ್ಲಿದೆ ಹಣ ? ಉಳಿದ ಕೆಲಸ ಕಾರ್ಯಗಳಿಗೆ, ಅಂದರೆ ನೀರಾವರಿ, ಇಂಧನ, ಸಹಾಯಧನ (೨೦೧೭-೧೮ರ ಸಹಾಯಧನದ ಮೊತ್ತ ರೂ. ೨೩,೦೦೦ ಕೋಟಿ) ಮುಂತಾದವುಗಳಿಗೆ ಹಣವನ್ನು ಎಲ್ಲಿಂದ ತರಲಾಗುತ್ತದೆ? ಬಿಜೆಪಿಯ ಕಥೆಗಿಂತ ಉಳಿದ ಎರಡು ಪಕ್ಷಗಳ ರಾಜಸ್ವ ಸಂಗ್ರಹದ ಬಗೆಗಿನ ಯೋಜನೆ ಭಿನ್ನವಾಗಿಲ್ಲ ಅಥವಾ ಪ್ರಣಾಳಿಕೆಗಳಲ್ಲಿ ರಾಜಸ್ವ ಸಂಗ್ರಹದ ಬಗ್ಗೆ ಚರ್ಚೆ ಮಾಡಿಲ್ಲ. ಹಣವೇ ಇಲ್ಲದೆ ರಾಜಕೀಯ ಪಕ್ಷಗಳು ತಮ್ಮ ಭರವಸೆಗಳನ್ನು ಹೇಗೆ ಈಡೇರಿಸುತ್ತವೆ ? ಪ್ರಾಸಂಗಿಕವಾಗಿ ಬಿಜೆಪಿಯ ಪ್ರತ್ಯೇಕ ಕೃಷಿ ಬಜೆಟ್ ಅನ್ನುವುದು ಹೀಗೆ ರಾಜಸ್ವರಹಿತ ಬಜೆಟ್ಟಾಗಿದೆ. ಇದು ಅದರ ಅದ್ಭುತ ಸಂಶೋಧನೆ ಇರಬಹುದು ! ಇದು ರಾಜಕೀಯ ಪಕ್ಷಗಳ ಪ್ರಣಾಳಿಕೆಗಳ ಮತ್ತು









ರಾಜಕೀಯ ಪಕ್ಷಗಳ ಬಗೆಗಿನ ಮುಖ್ಯ ಟೀಕೆಯಾಗಿದೆ. ಇದರಿಂದಾಗಿ ಇಂದು ಮುಖ್ಯಮಂತ್ರಿ ಎಚ್. ಡಿ. ಕುಮಾರಸ್ವಾಮಿ ಅವರು ತಮ್ಮ ಪ್ರಣಾಳಿಕೆಯಲ್ಲಿ ನೀಡಿರುವ ರೈತರ ಸಾಲ ಮನ್ನಾ ಭರವಸೆಯನ್ನು ಪೂರೈಸುವುದರ ಬಗ್ಗೆ ದೊಡ್ಡ ಸಮಸ್ಯೆ ಎದುರಿಸುತ್ತಿದ್ದಾರೆ. ಇದನ್ನು ಈಡೇರಿಸದಿರುವುದು ಸಾಧ್ಯವಿಲ್ಲ; ಆದರೆ ಈಡೇರಿಸುವುದೂ ಸಾಧ್ಯವಿಲ್ಲ.

**ಚೌಕಟ್ಟು : ೨**

***ಪ್ರಣಾಳಿಕೆಯಲ್ಲಿ ಬಿ.ಜೆ.ಪಿ.ಯು ನೀಡಿರುವ ಆಶ್ವಾಸನೆಗಳ ಹಣಕಾಸು ಬಜೆಟ್ ಅಂದಾಜು***

*೧. ನೀರಾವರಿ ರೂ.೧.೫ ಲಕ್ಷ ಕೋಟಿ (ವಾರ್ಷಿಕ ರೂ. ೩೦,೦೦೦ ಕೋಟಿ. ೨. ರೈತ ಬಂಧು ಆವರ್ತ ನಿಧಿ ರೂ. ೫,೦೦೦ ಕೋಟಿ, ೩. ರೈತ ಬಂಧು ವಿದ್ಯಾರ್ಥಿವೇತನ ರೂ. ೧೦೦ ಕೋಟಿ, ೪. ತರಕಾರಿ ರಫ್ತು ಯೋಜನೆ ರೂ. ೩೦೦೦ ಕೋಟಿ, ೫. ಕಾಮಧೇನು ಅನುದಾನ ರೂ. ೩,೦೦೦ ಕೋಟಿ, ೬. ಪಶು ವೈದ್ಯ ಸೇವೆ ರೂ. ೧,೦೦೦ ಕೋಟಿ, ೭ . ಸ್ತ್ರೀ ಉನ್ನತಿ ನಿಧಿ. ರೂ. ೧೦,೦೦೦ ಕೋಟಿ, ೮. ಬಿಪಿಓ ಸಂಕೀರ್ಣ ರೂ. ೨೫೦ ಕೋಟಿ, ೯. ಕಾಲೇಜು ಕ್ರೀಡಾ ಸೌಕರ್ಯ ರೂ. ೧೦೦ ಕೋಟಿ, ೧೦. ವಿದೇಶಗಳಲ್ಲಿ ಉನ್ನತ ಶಿಕ್ಷಣ ರೂ. ೧,೫೦೦ ಕೋಟಿ, ೧೧. ಬಾಬು ಜಗಜೀವನರಾಮ್ ವಿದ್ಯಾರ್ಥಿವೇತನ ರೂ. ೩,೦೦೦ ಕೋಟಿ, ೧೨. ಮದಕರಿ ನಾಯಕ ವಸತಿ ಯೋಜನೆ ರೂ. ೬,೫೦೦ ಕೋಟಿ, ೧೩. ಮಾದಾರ ಚನ್ನಯ್ಯ ವಸತಿ ಯೋಜನೆ ರೂ. ೮,೫೦೦ ಕೋಟಿ, ೧೪. ಒ ಬಿ ಸಿ ನಿಧಿ ರೂ. ೧,೦೦೦ ಕೋಟಿ, ೧೫. ಒ ಬಿ ಸಿ ವಸತಿ ಸಂಕೀರ್ಣ ರೂ. ೭,೫೦೦ ಕೋಟಿ, ೧೬. ತಾಲ್ಲೂಕುಗಳಲ್ಲಿ ಹೊಸ ಕಾಲೇಜುಗಳ ಸ್ಥಾಪನೆ ರೂ. ೧,೩೦೦ ಕೋಟಿ, ೧೭. ರಾಷ್ಟ್ರಕವಿ ಕುವೆಂಪು ಜ್ಞಾನ ಯೋಜನೆ ರೂ. ೩,೦೦೦ ಕೋಟಿ, ೧೮. ಪ್ರವಾಸೋದ್ಯಮ ರೂ. ೨,೫೦೦ ಕೋಟಿ, ೧೯. ಬೆಂಗಳೂರು ಕೆರೆಗಳ ಅಭಿವೃದ್ಧಿ ರೂ. ೨,೫೦೦ ಕೋಟಿ, ೨೦. ಮೀನುಗಾರಿಕೆ ರೂ. ೧೦೦ ಕೋಟಿ. ಒಟ್ಟು ರೂ. ೮೯,೮೫೦ ಕೋಟಿ.*

ವಿವೇಚನೆಯಿಲ್ಲದೆ ಚುನಾವಣೆಗಳಲ್ಲಿ ಆಶ್ವಾಸನೆ ನೀಡಿದರೆ ಏನಾಗುತ್ತದೆ ಅನ್ನುವುದಕ್ಕೆ ಇಂದು ಎಚ್. ಡಿ. ಕುಮಾರಸ್ವಾಮಿ ಎದುರಿಸುತ್ತಿರುವ ಸಮಸ್ಯೆಯೇ ಸಾಕ್ಷಿ. ಸರ್ಕಾರದ ರಾಜಸ್ವವೆಷ್ಟು, ಅದನ್ನು ಎಷ್ಟರವರೆಗೆ ಹೆಚ್ಚಿಸಬಹುದು, ಅದರಲ್ಲಿ ಮಿತವ್ಯಯ ಎಷ್ಟು ಮಾಡಬಹುದು ಮುಂತಾದವುಗಳ ಬಗ್ಗೆ ಪ್ರಣಾಳಿಕೆಗಳಲ್ಲಿ ಲೆಕ್ಕಾಚಾರ ಅನ್ನುವುದು ಕಾಣುವುದಿಲ್ಲ.

**ಭಾಗ – ೪**

**ಕೃಷಿಯಲ್ಲಿನ ಬಿಕ್ಕಟ್ಟು?**

ಕೇಂದ್ರ ಸರ್ಕಾರವು ರೈತರ ವರಮಾನವನ್ನು ೨೦೨೨-೨೩ರಲ್ಲಿ ಎರಡು ಪಟ್ಟು ಮಾಡುವುದಾಗಿ ಹೇಳುತ್ತಿದೆ. ಅದು ಉತ್ಪಾದನೆ ವೆಚ್ಚದ ಮೇಲೆ ಶೇ. ೫೦ ಲಾಭ ಸೇರಿಸಿ ಕನಿಷ್ಠ ಶಾಸನಾತ್ಮಕ ಬೆಲೆಯನ್ನು ನೀಡುವುದಾಗಿಯೂ ಹೇಳುತ್ತಿದೆ. ಕರ್ನಾಟಕ ಚುನಾವಣೆಯಲ್ಲಿಯೂ ಅದು ಇಂತಹ ಭರವಸೆಯನ್ನು ತನ್ನ ಪ್ರಣಾಳಿಕೆಯಲ್ಲಿ ನೀಡಿದೆ. ಆದರೆ ಅದು ತನ್ನ ಪ್ರಣಾಳಿಕೆಯಲ್ಲಿ (ಕರ್ನಾಟಕ) ಉತ್ಪಾದನೆ ವೆಚ್ಚ ಅಂದರೆ ಅದು ಯಾವುದು ಎಂಬುದರ ಬಗ್ಗೆ ಏನನ್ನೂ ಹೇಳುತ್ತಿಲ್ಲ. ಕೃಷಿ ಉತ್ಪಾದನ ವೆಚ್ಚ ಅನ್ನುವುದು ಮುಖ್ಯವಾಗಿ ಮೂರು ಬಗೆಯಲ್ಲಿದೆ. ಮೊದಲನೆಯದು 'ಎ೨'. ಇದು ರೈತರು ಬೆಳೆಯುವ ಬೆಳೆಗೆ ನಗದು ಅಥವಾ ವಸ್ತುಗಳ ರೂಪದಲ್ಲಿ ಬೀಜ, ಗೊಬ್ಬರ, ಔಷಧಿ, ನೀರಾವರಿ, ವಿದ್ಯುತ್ ಮುಂತಾದವುಗಳಿಗೆ ನೀಡುವ ವೆಚ್ಚವಾಗಿದೆ. ಎರಡನೆಯದು 'ಎ೨ + ಎಫ್‌ಎಲ್'. ಇದರಲ್ಲಿ 'ಎ೨'ರ ಜೊತೆಗೆ ರೈತರು ಏನು ತಮ್ಮ ಹೊಲದಲ್ಲಿ ದುಡಿಯುತ್ತಾರೆ ಅದರ ಬಾಬ್ತು ಕೂಲಿಯನ್ನು ಸೇರಿಸಿದರೆ ಎರಡನೇ ರೂಪದ ವೆಚ್ಚ ದೊರೆಯುತ್ತದೆ. ಅವರು ತಮ್ಮ ಹೊಲದಲ್ಲಿ ದುಡಿಯದೆ ಬೇರೆ ಕಡೆ ದುಡಿದಿದ್ದರೆ ಅವರಿಗೆ ಕೂಲಿ ದೊರೆಯುತ್ತಿತ್ತು. ಮೂರನೆಯದು 'ಸಿ೨'. 'ಎ೨ + ಎಫ್‌ಎಲ್' ಮತ್ತು ಭೂಮಿ ಮತ್ತು ಬಂಡವಾಳ ಸರಕುಗಳಿಗೆ ಮುಚ್ಚಿಟ್ಟ ವೆಚ್ಚ ಅಥವಾ ಬಡ್ಡಿ ರೂಪದ ಖರ್ಚು ಸೇರಿದರೆ 'ಸಿ೨' ದೊರೆಯುತ್ತದೆ. ಈಗ ಕೇಂದ್ರ ಸರ್ಕಾರವು 'ಎ೨ + ಎಫ್‌ಎಲ್' ಮೇಲೆ ಶೇ. ೫೦ ಲಾಭ ಸೇರಿಸಿ ಕನಿಷ್ಠ ಶಾಸನಾತ್ಮಕ ಬೆಲೆ ನೀಡುತ್ತಿದೆ. ಆದರೆ ರೈತರ ಒತ್ತಾಯವೆಂದರೆ 'ಸಿ೨' ಮೇಲೆ ಶೇ. ೫೦ ಲಾಭ ಸೇರಿಸಿ ಎಮ್‌ಎಸ್‌ಪಿ ನೀಡಬೇಕು ಎಂಬುದಾಗಿದೆ. ಆದರೆ ಕರ್ನಾಟಕದ ಬಿಜೆಪಿ ೨೦೧೮ರ ಪ್ರಣಾಳಿಕೆಯಲ್ಲಿ ರೈತರ ವರಮಾನವನ್ನು ೨೦೨೨-೨೩ರಲ್ಲಿ ಎರಡು ಪಟ್ಟು ಮಾಡುವುದಾಗಿ ಭರವಸೆ ನೀಡಿದೆ. ಕನಿಷ್ಠ ವೆಚ್ಚದ ಮೇಲೆ ಶೇ. ೫೦ ಲಾಭ ಕೂಡಿಸಿ ಎಮ್‌ಎಸ್‌ಪಿ ನೀಡುವುದಾಗಿ ಭರವಸೆ ನೀಡಿದೆ. ಈ ರೀತಿಯ ಕ್ರಮದಲ್ಲಿ ರೈತರ ವರಮಾನವು ೨೦೨೨ರಲ್ಲಿ, ಅಲ್ಲ, ೨೦೩೦ರಲ್ಲಿಯೂ ಎರಡು ಪಟ್ಟಾಗುವುದು ಸಾಧ್ಯವಿಲ್ಲ. ಎರಡು ಪಟ್ಟಿರಲಿ, ಅವರ ಈಗಿನ ವರಮಾನವನ್ನು ಕಾಯ್ದುಕೊಂಡರೂ ಸಾಕು ! ಈ ಎಲ್ಲ ಕೃಷಿಗೆ ಸಂಬಂಧಿಸಿದ ಜಟಿಲ ಸಂಗತಿಗಳ ಬಗ್ಗೆ ಅದು ಚರ್ಚೆ ಮಾಡಿಲ್ಲ. ಅಂದರೆ ಪ್ರಣಾಳಿಕೆಯನ್ನು ಸಿದ್ಧಪಡಿಸುವಾಗ ಗಂಭೀರವಾದ ಹಣಕಾಸು, ಆಶ್ವಾಸನೆಗಳು, ಜನರ ಸದ್ಯದ ಸಮಸ್ಯೆಗಳು ಮುಂತಾದವುಗಳ ಬಗ್ಗೆ ವಿಶ್ಲೇಷಣೆ ನಡೆಸುವ ಕಷ್ಟವನ್ನು ಪಕ್ಷ ತೆಗೆದುಕೊಂಡಿಲ್ಲ. ಅದನ್ನು ಲೋಕಾಭಿರಾಮವಾಗಿ ಸಿದ್ಧಪಡಿಸಲಾಗಿದೆ.

ಜಾತ್ಯತೀತ ಜನತಾ ದಳವು ರೈತರ ಸಾಲ ಮನ್ನಾದ ಬಗ್ಗೆ ಪ್ರಣಾಳಿಕೆಯಲ್ಲಿ ಭರವಸೆ ನೀಡಿದೆ. ಅದನ್ನು ರಾಜ್ಯ ಬಜೆಟ್ ನೆಲೆಯಲ್ಲಿ ಹೇಗೆ ಅನುಷ್ಠಾನಗೊಳಿಸ ಲಾಗುವುದು ಎಂಬುದರ ಬಗ್ಗೆ ಪ್ರಣಾಳಿಕೆಯಲ್ಲಿ ಚಕಾರವಿಲ್ಲ. ಇಲ್ಲಿ ನಮಗೆ ಎದುರಾಗುವ ಪ್ರಶ್ನೆ: ಸಾಲ ಮನ್ನಾ ಕ್ರಮವು ರೈತರ ಸಂಕಷ್ಟವನ್ನು, ಕೃಷಿಯಲ್ಲಿ ಪ್ರಕಟವಾದ ಬಿಕ್ಕಟ್ಟನ್ನು ಪರಿಹರಿಸಬಲ್ಲುದೆ ? ಡಾ॥ ಎಮ್. ಎಸ್. ಶ್ರೀರಾಮ್ ಪ್ರಜಾವಾಣಿಯ (ಮೇ ೩೧ ಮತ್ತು ಜೂನ್ ೧, ೨೦೧೮) ತಮ್ಮ ಲೇಖನಗಳಲ್ಲಿ ಇದರ ಬಗ್ಗೆ ವಿಸ್ತೃತವಾಗಿ ಚರ್ಚೆ ಮಾಡಿದ್ದಾರೆ. ಅವರ ಒಟ್ಟಾರೆ ತೀರ್ಮಾನವೆಂದರೆ ಸಾಲ ಮನ್ನಾ ರೈತರ ಸಮಸ್ಯೆಗೆ ಮತ್ತು ಕೃಷಿಯ ಬಿಕ್ಕಟ್ಟಿಗೆ ಪರಿಹಾರವಾಗುವುದಿಲ್ಲ. ಇದರ ಬಗ್ಗೆ ಭಿನ್ನವಾಗಿ ಯೋಚಿಸುವ ಅಗತ್ಯವಿದೆ. ಆದರೆ ಮೂರೂ ಪಕ್ಷಗಳ ಪ್ರಣಾಳಿಕೆಗಳಲ್ಲಿ ರೂಢಿಯಲ್ಲಿರುವ ರೀತಿಯ ಚಿಂತನೆಯಿದೆ. ಭಿನ್ನವಾದ ಚಿಂತನೆ ನಡೆದಿಲ್ಲ. ಅದಕ್ಕೆ ನಾನು ಮೊದಲೇ ಹೇಳಿದ್ದು : ಮೂರು ಪಕ್ಷಗಳ ಪ್ರಣಾಳಿಕೆಗಳಲ್ಲಿ ತೀವ್ರ ಭಿನ್ನತೆ ಕಂಡುಬರುವುದಿಲ್ಲ ಎಂದು.

**ಒಣಭೂಮಿ ಬೇಸಾಯ**

ಹಸಿರು ಕ್ರಾಂತಿ ತಂತ್ರಜ್ಞಾನ, ವೈಜ್ಞಾನಿಕ ಕೃಷಿ, ಬೃಹತ್ ನೀರಾವರಿ ಯೋಜನೆಗಳು ಮುಂತಾದವುಗಳನ್ನು ಆಧಾರ ಮಾಡಿಕೊಂಡ ಕೃಷಿ ನೀತಿ ಇಂದು ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿದೆ. ಈ ಬಗೆಯ ಕೃಷಿ ನೀತಿಯು ಸುಸ್ಥಿರವಾದ ರೀತಿಯಲ್ಲಿ ಕೃಷಿಯನ್ನು ನಿರ್ವಹಿಸುವುದು ಸಾಧ್ಯವಿಲ್ಲ. ಇಂದು ನಮಗೆ ಅಗತ್ಯವಾಗಿರುವುದು ಉತ್ಪಾದನೆ-ಉತ್ಪಾದಕತೆ ಹೆಚ್ಚಿಸುವ ತಂತ್ರಗಳಲ್ಲ. ಚಾಲ್ತಿಯಲ್ಲಿ ಇರುವ ಉತ್ಪಾದಕತೆಯನ್ನು ಹೇಗೆ ಕಾಯ್ದುಕೊಳ್ಳಬೇಕು ಎಂಬುದು ನಮ್ಮ ಮುಂದಿರುವ ಪ್ರಶ್ನೆ. ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆ ದೃಷ್ಟಿಯಿಂದಲೂ

**ದಾರಿ ಯಾವುದಯ್ಯ ?!**

ಗೂಗ್ಲ್ ಮ್ಯಾಪಿಗೆ
ಶರಣಾಗಿ
ರಸ್ತೆಗಳ ನೆನಪಿಟ್ಟುಕೊಳ್ಳುವ
ಮರೆತೆವು !
ಮೊಬೈಲ್‌ಗೆ ಅಂಟಿಕೊಳ್ಳಲಾಗಿ
ನೆಂಟರಿಷ್ಟರ ಮನೆಗಳ ದಾರಿ
ಮರೆತೆವು !

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪

ಇದು ಸೂಕ್ತವಾದ ಕ್ರಮವಾಗಿದೆ. ಕರ್ನಾಟಕವು ಈಗಾಗಲೆ ಸ್ಥಿರಗತಿ ಜನಸಂಖ್ಯೆ ಬೆಳವಣಿಗೆಯನ್ನು ಸಾಧಿಸಿಕೊಂಡಿದೆ. ಜನಸಂಖ್ಯೆಯ ಬೆಳವಣಿಗೆಯ ಭಯ ಕರ್ನಾಟಕ ರಾಜ್ಯಕ್ಕಿಲ್ಲ. ಒಣಭೂಮಿ ಕೃಷಿಯ ಬಗ್ಗೆ ಪ್ರಣಾಳಿಕೆಗಳು ಮಾತನಾಡುತ್ತಿಲ್ಲ. ದೇಶದಲ್ಲಿ ಒಣಭೂಮಿ ಬೇಸಾಯದಲ್ಲಿ ಕರ್ನಾಟಕ ಎರಡನೆಯ ಸ್ಥಾನದಲ್ಲಿದೆ. ಇದರ ನಿರ್ವಹಣೆಯು ನಮಗೆ ಇಂದು ನಿರ್ಣಾಯಕ ಸಂಗತಿಯಾಗಬೇಕು. ಬೃಹತ್ ನೀರಾವರಿಗೆ ಪ್ರತಿಯಾಗಿ ತುಂತುರು, ಹನಿ ನೀರಾವರಿಗಳು, ಮಳೆ ನೀರು ಕೊಯ್ಲು, ನೀರನ್ನು ಸಾಂದ್ರವಾಗಿ ಬಳಸುವ ಬೆಳೆಗಳಿಗೆ ಪ್ರತಿಯಾಗಿ ಅದನ್ನು ವಿರಳವಾಗಿ ಬಳಸುವ ಬೆಳೆಗಳು ಹೆಚ್ಚು ಪ್ರಸ್ತುತವಾಗಿವೆ.

ಎರಡನೆಯದಾಗಿ, ಕೃಷಿ ಬಿಕ್ಕಟ್ಟಿನ ಮೂಲದಲ್ಲಿ ಅದರ ಸಾಲ ವ್ಯವಸ್ಥೆಯ ಸಂಗತಿಯಿದೆ. ರೈತರಿಗೆ ಸಾಲದ ಎರಡು ಮೂಲಗಳಿವೆ. ಮೊದಲನೆಯದು, ಸಾಂಸ್ಥಿಕ (ಶೇ. ೫೬) ಮತ್ತು ಎರಡನೆಯದು, ಸಾಂಸ್ಥಿಕೇತರ (ಶೇ. ೪೪). ಸಾಂಸ್ಥಿಕೇತರ ಮೂಲಗಳ ಸಾಲದ ಪ್ರಮಾಣ ೧೯೫೧ರಲ್ಲಿ ಶೇ. ೯೩ರಷ್ಟಿದ್ದುದು ೧೯೯೧ರಲ್ಲಿ ಶೇ. ೩೬ರಕ್ಕಿಳಿಯಿತು. ಆದರೆ ಅಲ್ಲಿಂದ ಮುಂದೆ ಅದು ಹೆಚ್ಚಾಗುತ್ತಾ ನಡೆದಿದೆ. ಇದಕ್ಕೆ ಕಾರಣವನ್ನು ಹುಡುಕುವ ಅಗತ್ಯವಿಲ್ಲ. ಉದಾರೀಕರಣದ ಕೊಡುಗೆ ಇದಾಗಿದೆ. ಕೃಷಿ ವ್ಯವಸ್ಥೆಯ ಸಾಲದ ಕ್ರಮವನ್ನು ಬದಲಾಯಿಸದೆ ಅದರ ಬಿಕ್ಕಟ್ಟು ಪರಿಹಾರವಾಗುವುದು ಸಾಧ್ಯವಿಲ್ಲ. ರೈತರ ಆತ್ಮಹತ್ಯೆ ಮೂಲದಲ್ಲಿ ಲೇವಾದೇವಿಗಾರರ ಪಾತ್ರ ಪ್ರಮುಖವಾಗಿದೆ. ನಮ್ಮ ಸಂದರ್ಭದಲ್ಲಿ ಕೃಷಿಯಲ್ಲಿ ಸಾಲ ವ್ಯವಹಾರ ಮತ್ತು ಮಾರುಕಟ್ಟೆ ಒಂದಾಗಿರುವ ಸಮಸ್ಯೆಯಿದೆ. ಲೇವಾದೇವಿಗಾರರು ಸಾಲ ನೀಡಿ ಬಡ್ಡಿ ಮತ್ತು ಕೃಷಿ ಉತ್ಪನ್ನಗಳನ್ನು ಕಡಿಮೆ ಬೆಲೆಗೆ (ಸಾಲದ ಅಡಮಾನವಾಗಿ) ಕೊಂಡು ಅಧಿಕಾಧಿಕ ಲಾಭ ಮಾಡಿಕೊಳ್ಳುತ್ತಿದ್ದಾರೆ. ಇವೆಲ್ಲವನ್ನು ಸುಧಾರಿಸದಿದ್ದರೆ ಕೃಷಿಯ ಬಿಕ್ಕಟ್ಟು ಬಗೆಹರಿಯುವುದಿಲ್ಲ.

**ಭಾಗ – ೫**

**ಕಾಂಗ್ರೆಸ್ ಮತ್ತು ಜೆಡಿಎಸ್ ಪ್ರಣಾಳಿಕೆಗಳು**

ಬಿಜೆಪಿ ಮತ್ತು ಉಳಿದೆರಡು ಪಕ್ಷಗಳ ಪ್ರಣಾಳಿಕೆಗಳ ನಡುವಿನ ಒಂದು ಮುಖ್ಯ ಭಿನ್ನತೆಯೆಂದರೆ ಇವೆರಡೂ ಬಿಜೆಪಿ ನೀಡಿರುವ ಆಶ್ವಾಸನೆಗಳ ಬಾಬ್ತು ವೆಚ್ಚದ ಅಂದಾಜನ್ನು ನೀಡಿಲ್ಲ. ಆದರೆ ಇವೂ ಕೂಡ ಸಂಪನ್ಮೂಲವನ್ನು ಹೇಗೆ ರೂಢಿಸಿಕೊಳ್ಳುತ್ತವೆ ಅನ್ನುವುದರ ಬಗ್ಗೆ ಚರ್ಚೆ ಮಾಡಿಲ್ಲ. ಈ ಸಂಪನ್ಮೂಲ ಸಂಗ್ರಹದ ಸಂಗತಿಯನ್ನು ಜಿಎಸ್‌ಟಿ ತೆರಿಗೆ ಜಾರಿಯ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಿದೆ. ಭಾರತೀಯ ಸಂವಿಧಾನ ರಾಜ್ಯಗಳಿಗೆ ನೀಡಿದ್ದ ತೆರಿಗೆ ವಿಧಿಸುವ ಹಕ್ಕನ್ನು ಜಿಎಸ್‌ಟಿ ಕಸಿದುಕೊಂಡಿದೆ. ಈಗ ರಾಜ್ಯಗಳ ರಾಜಸ್ವಕ್ಕೆ ಜಿಎಸ್‌ಟಿ ಮಂಡಳಿಯನ್ನು, ಕೇಂದ್ರದ ಹಣಕಾಸು ಆಯೋಗದ ವರ್ಗಾವಣೆಯನ್ನು ಅವಲಂಬಿಸಬೇಕಾಗಿದೆ. ಈ ವ್ಯವಸ್ಥೆಯನ್ನು ಕೇಂದ್ರವು ಆಕರ್ಷಣೀಯವಾಗಿ 'ಸಹಕಾರವಾದಿ ಒಕ್ಕೂಟ' (ಕೋ–ಆಪರೇಟಿವ್ ಫೆಡರಲಿಸಂ) ಎಂದು ಕರೆದಿದೆ. ಇಲ್ಲಿರುವ ಅಣಕವನ್ನು ಗಮನಿಸಬೇಕು. ಕಾಂಗ್ರೆಸ್ ಪಕ್ಷ ತನ್ನ ಪ್ರಣಾಳಿಕೆಯಲ್ಲಿ ಸಾಲ ಮನ್ನಾ ಬಗ್ಗೆ ಮಾತನಾಡಿಲ್ಲ. ಏಕೆಂದರೆ ಅದು ೨೦೧೮–೧೯ರ ಬಜೆಟ್ಟಿನಲ್ಲಿ ರೂ. ೮೬೦೦ ಕೋಟಿಯಷ್ಟು ಸಾಲ ಮನ್ನಾ ಘೋಷಿಸಿದೆ. ರೈತರ ನೂರಕ್ಕೆ ನೂರರಷ್ಟು ಸಾಲ ಮನ್ನಾ ಮಾಡುವುದಾಗಿ ಜೆಡಿಎಸ್ ಆಶ್ವಾಸನೆ ನೀಡಿದೆ. ಕಳೆದ ಐದು ವರ್ಷಗಳಲ್ಲಿ (೨೦೧೩–೨೦೧೮) ಕರ್ನಾಟಕವು ವಿತ್ತೀಯ ಶಿಸ್ತನ್ನು ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿದೆ. ಅದು ರೆವಿನ್ಯೂ ಖಾತೆಯಲ್ಲಿ ಆಧಿಕ್ಯವನ್ನು ಕಾಯ್ದುಕೊಳ್ಳುತ್ತಾ ನಡೆದಿದೆ. ಸಾಲದ ಮೇಲಿನ ಬಡ್ಡಿ ಪಾವತಿ ಪ್ರಮಾಣ ರಾಜಸ್ವದ ಶೇ. ೧೦ ಮೀರದಂತೆ ನೋಡಿಕೊಂಡಿದೆ. ಒಟ್ಟು ಹೊಣೆಗಾರಿಕೆಯು ರಾಜ್ಯದ ಒಟ್ಟು ವರಮಾನದ ಶೇ. ೨೫ ಮೀರಿಲ್ಲ. ಇದೆಲ್ಲ ಬಜೆಟ್ ಜಾದೂಗಾರ ಸಿದ್ದರಾಮಯ್ಯ ಅವರ ಸಾಧನೆಯಾಗಿದೆ. ಇದು ಕರ್ನಾಟಕದ ಮಹತ್ವದ ಸಾಧನೆಯಾಗಿದೆ ಮತ್ತು ದೇಶಕ್ಕೆ ಮಾದರಿಯಾಗಿದೆ. ಇದನ್ನು ಮುಂದುವರಿಸಿಕೊಂಡು ಹೋಗುವ ಅಗತ್ಯವಿದೆ. ಆದರೆ ಸಾಲ ಮನ್ನಾ ಇದಕ್ಕೆ ಧಕ್ಕೆ ಉಂಟುಮಾಡುವ ಸಾಧ್ಯತೆಯಿದೆ.

**ವಿಕೇಂದ್ರೀಕರಣ ಮೂಲೆಗುಂಪಿಗೆ !**

ಮೂರೂ ಪಕ್ಷಗಳ ಮತ್ತೊಂದು ಸಮಾನ ಅಂಶವೆಂದರೆ ಸ್ಥಳೀಯ ಸಂಸ್ಥೆಗಳ ಸ್ವಾಯತ್ತತೆಯ ಬಗ್ಗೆ ಮತ್ತು ವಿಕೇಂದ್ರೀಕರಣದ ಬಗ್ಗೆ ಯಾವ ಪ್ರಣಾಳಿಕೆಗಳಲ್ಲೂ ಉತ್ಸಾಹದ ಮಾತುಗಳಿಲ್ಲ. ಬಿಜೆಪಿಯಂತೂ ಸರಿಯೇ ಸರಿ. ಅದಕ್ಕೆ ವಿಕೇಂದ್ರೀಕರಣದ ಬಗ್ಗೆ ನಂಬಿಕೆಯಿಲ್ಲ. ಅದು ಮಾತುಮಾತಿಗೆ ಅಖಂಡತೆಯ ಬಗ್ಗೆ, ರಾಷ್ಟ್ರೀಯತೆಯ ಬಗ್ಗೆ ಅಬ್ಬರಿಸುತ್ತದೆ. ಈ ವಿಷಯದಲ್ಲಿ ಅದು ತನ್ನ ಮಾತೃ ಪರಿವಾರದ ನಿರ್ದೇಶನದಂತೆ ನಡೆಯುತ್ತಿರಬಹುದು. ಎಲ್ಲವೂ ಕೇಂದ್ರದಲ್ಲಿಯೇ ನಡೆಯಬೇಕು ಎಂಬುದು ಅದರ ಉದ್ದೇಶ. ಅದರ ಕೇಂದ್ರೀಕರಣ ನೀತಿಗೆ ಅನೇಕ ನಿದರ್ಶನಗಳನ್ನು ನೀಡಬಹುದು. ಅದು ನೀಟ್ ಪರೀಕ್ಷೆ ಇರಲಿ, ಜಿಎಸ್‌ಟಿ ಇರಲಿ, ಬ್ಯಾಂಕುಗಳ ವಿಲೀನ ಇರಲಿ ಎಲ್ಲವೂ ಕೇಂದ್ರದ ಮಟ್ಟದಲ್ಲಿಯೇ ನಡೆಯಬೇಕು. ಆದರೆ ೭೩ ಮತ್ತು ೭೪ನೆಯ ಸಂವಿಧಾನ ತಿದ್ದುಪಡಿಯ ಕರ್ತೃ ಕಾಂಗ್ರೆಸ್ ಇದನ್ನು ಮರೆತದ್ದು ವಿಚಿತ್ರವಾಗಿದೆ. ಕರ್ನಾಟಕದಲ್ಲಿ ವಿಕೇಂದ್ರೀಕರಣ ಬಗ್ಗೆ ಕಾಂಗ್ರೆಸ್ಸಿನ ಸಾಧನೆ ಗಣನೀಯವಾದುದಾಗಿದೆ. ಜೆಡಿಎಸ್ ಪಕ್ಷಕ್ಕೆ ಇವೆಲ್ಲ ಮುಖ್ಯವಲ್ಲ. ತಳಮಟ್ಟದಲ್ಲಿ ಅಭಿವೃದ್ಧಿಯ ಜವಾಬ್ದಾರಿಯನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನೀಡುವ ಬಗ್ಗೆ ಶಾಸಕರ ವಿರೋಧವನ್ನು ತಡೆಯುವುದು ಕಾಂಗ್ರೆಸ್ಸಿಗೂ ಸಾಧ್ಯವಾಗಿಲ್ಲ. ನಗರ ಸ್ಥಳೀಯ ಸಂಸ್ಥೆಗಳು ಅಂದರೆ ಮೂರು ಪಕ್ಷಗಳಿಗೆ ಬೆಂಗಳೂರು ಮತ್ತು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮಾತ್ರ ಅನ್ನುವಂತಾಗಿದೆ. ಮೂರೂ ಪಕ್ಷಗಳ ಪ್ರಣಾಳಿಕೆಗಳಲ್ಲಿ ಬಿಬಿಎಮ್‌ಪಿ ಬಗ್ಗೆ ಸಕಾರಣವಾಗಿಯೇ ಪ್ರತ್ಯೇಕ ಚರ್ಚೆ ಮಾಡಲಾಗಿದೆ. ಬೆಂಗಳೂರಿನ ನಿರ್ವಹಣೆ ದೊಡ್ಡ ಸಮಸ್ಯೆಯಾಗಿದೆ. ಅದರ ಜವಾಬ್ದಾರಿಯನ್ನು ಪೂರ್ಣವಾಗಿ ಬಿಬಿಎಮ್‌ಪಿಗೆ ವಹಿಸಿಕೊಡಬಹುದು. ಆದರೆ ಅದಕ್ಕೆ ಪಕ್ಷಗಳು ಸಿದ್ಧವಿದ್ದಂತೆ ಕಾಣುವುದಿಲ್ಲ.

ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಬಗ್ಗೆ ಎಲ್ಲ ಪಕ್ಷಗಳು ಮಾತನಾಡುತ್ತವೆ.









ಆದರೆ ಅದನ್ನು ಅಭಿವೃದ್ಧಿಯ ಅವಿಭಾಜ್ಯ ಅಂಗವನ್ನಾಗಿ ಅವು ಪರಿಭಾವಿಸಿಕೊಳ್ಳಲು ತಯಾರಿಲ್ಲ ಅನ್ನುವುದಕ್ಕೆ ಅವುಗಳ ಪ್ರಣಾಳಿಕೆಗಳು ಸಾಕ್ಷಿ ಒದಗಿಸುತ್ತವೆ. ಲಿಂಗ ಸಂಬಂಧಗಳನ್ನು ಒಂದು ಪ್ರತ್ಯೇಕ ಸಂಗತಿಯನ್ನಾಗಿ, ಅನುಕಂಪದ ನೆಲೆಯಲ್ಲಿ ಪರಿಭಾವಿಸಿಕೊಳ್ಳಲಾಗಿದೆಯೇ ವಿನಾ ಸ್ವಾಯತ್ತ ನೆಲೆಯಲ್ಲಿ ನಿರ್ವಹಿಸಲು ರಾಜಕೀಯ ಪಕ್ಷಗಳು ಸಿದ್ಧವಿಲ್ಲ. ಬಿಜೆಪಿಯಂತೂ ಪುರುಷಶಾಹಿ ಪಕ್ಷ. ಮಹಿಳಾ ಸ್ವಾತಂತ್ರ್ಯ ಅನ್ನುವುದು ವಿದೇಶಿ ಸಂಗತಿ ಅನ್ನುವುದು ಅದರ ಪಿತೃ ಸಂಸ್ಥೆಯ ಅಭಿಮತವಾಗಿದೆ. ಮಹಿಳೆಯರ ಕಾರ್ಯಕ್ಷೇತ್ರವೇನಿದ್ದರೂ ಮನೆ ಮತ್ತು ಮನೆವಾರ್ತೆ ಎಂಬುದು ಅದರ ಅಚಲ ನಂಬಿಕೆ. ದಾಂಪತ್ಯ ಸಂಬಂಧಗಳಲ್ಲಿ ನಡೆಯುವ ಲೈಂಗಿಕ ದೌರ್ಜನ್ಯವನ್ನು ಅತ್ಯಾಚಾರ ಎಂದು ಒಪ್ಪಲು ಅದು ಸಿದ್ಧವಿಲ್ಲ. ವಿಚಿತ್ರವೆಂದರೆ ಅದು ಕರ್ನಾಟಕದ ತನ್ನ ಪ್ರಣಾಳಿಕೆಯಲ್ಲಿ ಸ್ತ್ರೀ ಉನ್ನತಿ ನಿಧಿಗೆ ರೂ. ೧೦,೦೦೦ ಕೋಟಿ ಕಾರ್ಯಕ್ರಮವನ್ನು ಪ್ರಕಟಿಸಿದೆ. ಉಳಿದ ಎರಡು ಪಕ್ಷಗಳು ಲಿಂಗ ಸಮಾನತೆ ಯನ್ನು ಸ್ವಾಯತ್ತ ಸಂಗತಿಯಾಗಿ ಪರಿಭಾವಿಸಿಕೊಳ್ಳುತ್ತಿಲ್ಲ. ಈ ದಿಶೆಯಲ್ಲಿ ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆ, ಎಮ್‌ಜಿಎನ್‌ಆರ್‌ಜಿಎನಲ್ಲಿ ಮಹಿಳೆಯರು ಮತ್ತು ಪುರುಷರಿಗೆ ಸಮಾನ ವೇತನ ಮುಂತಾದ ವಿಷಯಗಳಲ್ಲಿ ಕಾಂಗ್ರೆಸ್ ಉದಾರ ನಿಲುವು ತಳೆದಿರುವುದು ಕಂಡುಬರುತ್ತದೆ. ಮಹಿಳಾ ಸಬಲೀಕರಣ ಅನ್ನುವುದನ್ನು ಬಿಜೆಪಿ ಮತ್ತು ಕಾಂಗ್ರೆಸ್ ತಮ್ಮ ಪ್ರಣಾಳಿಕೆಗಳಲ್ಲಿ ಬಳಸಿದ್ದರೆ ಜೆಡಿಎಸ್ ಮಹಿಳೆಯರ ಕ್ಷೇಮಾಭಿವೃದ್ಧಿ ಅನ್ನುವ ನುಡಿಯನ್ನು ಬಳಸಿದೆ. ಕಲ್ಯಾಣ, ಕ್ಷೇಮ ಮುಂತಾದವು ಅಭಿವೃದ್ಧಿಯನ್ನು ಹಕ್ಕಿನ ಸಂಗತಿಯನ್ನಾಗಿ ನೋಡುವುದಕ್ಕೆ ಪ್ರತಿಯಾಗಿ ಹಂಗಿನ ಸಂಗತಿಯನ್ನಾಗಿ ನೋಡುವ ಬಗೆಯನ್ನು ಸೂಚಿಸುತ್ತವೆ. ಕಲ್ಯಾಣ ಎಂಬುದನ್ನು ಬಿಜೆಪಿ ಹೆಚ್ಚು ಹೆಚ್ಚು ಬಳಸುತ್ತಿದೆ. ಬಿಜೆಪಿಯು ಮಹಿಳೆಯರ ಸಬಲೀಕರಣ ಎಂಬ ನುಡಿಯನ್ನು ಬಳಸಿದೆ. ಆದರೆ ಅದರ ನುಡಿ–ನಡೆ ನಡುವೆ ಅಪಾರ ಅಂತರವಿರುವುದು ಜಗಜ್ಜಾಹೀರಾಗಿದೆ. ಜೆಡಿಎಸ್ ಇದನ್ನು ಅನುಕಂಪದ ನೆಲೆಯಲ್ಲಿ ಪರಿಭಾವಿಸಿಕೊಂಡಿರುವುದು ಸ್ಪಷ್ಟ. ಅಭಿವೃದ್ಧಿಯಲ್ಲಿ ಮಹಿಳೆಯರು ಭಾಗೀದಾರರು ಎಂಬುದನ್ನು ಕಾಂಗ್ರೆಸ್ ತನ್ನ ಪ್ರಣಾಳಿಕೆಯಲ್ಲಿ ದಾಖಲಿಸಿದೆ. ಅಕ್ಷರಮಟ್ಟಿಗೆ ಅದರ ಧೋರಣೆಯು ಪ್ರಗತಿಪರವಾಗಿರುವಂತೆ ಕಾಣುತ್ತದೆ.

**ಭಾಗ – ೬**

**ಸಮ್ಮಿಶ್ರ ಸರ್ಕಾರದ ಮುಂದಿರುವ ಸವಾಲುಗಳು**

ಕರ್ನಾಟಕದ ೨೦೧೮ರ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಬಹುಮತ ಬರಲಿಲ್ಲ. ಅತಿ ದೊಡ್ಡ ಪಕ್ಷವೆಂದು ಬಿಜೆಪಿ ಸರ್ಕಾರ ರಚಿಸುವ ಪ್ರಯತ್ನ ಮಾಡಿತು. ಆದರೆ ಅದರಲ್ಲಿ ಅದು ಯಶಸ್ವಿಯಾಗಲಿಲ್ಲ. ಈಗ ಕಾಂಗ್ರೆಸ್ ಮತ್ತು ಜೆಡಿಎಸ್ ಕೂಡಿ ಸಮ್ಮಿಶ್ರ ಸರ್ಕಾರ ರಚಿಸಿವೆ. ಜನರಿಗೆ ಇದು ಸಮಾಧಾನ ತಂದಿದೆ. ಆದರೆ ಸಮ್ಮಿಶ್ರ ಸರ್ಕಾರವು ಸುಸ್ಥಿರವಾಗಿ ಉಳಿಯುವುದರ ಬಗ್ಗೆ ಮತ್ತು ಅಭಿವೃದ್ಧಿ ಆಡಳಿತ ನೀಡುವುದರ ಬಗ್ಗೆ ಜನರಿಗೆ ಅನುಮಾನಗಳಿವೆ. ಆದರೆ ಈ ಸರ್ಕಾರ ಯಶಸ್ವಿ ಯಾಗಬೇಕು ಅನ್ನುವುದು ಜನರ ಅಭಿಲಾಷೆ. ಸಮಸ್ಯೆಗಳಲ್ಲದ ಸಂಗತಿಗಳನ್ನು ಸಮಸ್ಯೆಗಳನ್ನಾಗಿ ಮಾಡುವ ಬಿಜೆಪಿಯನ್ನು ಅದರ ಆಟದಲ್ಲಿಯೇ ಸೋಲಿಸಿ ಕಾಂಗ್ರೆಸ್–ಜೆಡಿಎಸ್ ಸಮ್ಮಿಶ್ರ ಸರ್ಕಾರವನ್ನು ಕರ್ನಾಟಕದಲ್ಲಿ ರಚಿಸಿವೆ. ನಮಗೆ ಬೇಕಾಗಿರುವುದು ಕೋಮುವಾದಿ–ಫ್ಯಾಸಿಸ್ಟ್ ಸರ್ಕಾರವೂ ಅಲ್ಲ; ಕುಟುಂಬ ರಾಜಕಾರಣವೂ ಅಲ್ಲ. ಕರ್ನಾಟಕವನ್ನು ಬಡತನ ಮುಕ್ತ, ಹಸಿವು ಮುಕ್ತ, ಕೋಮುವಾದಿ ಮುಕ್ತ, ಭ್ರಷ್ಟಾಚಾರ ಮುಕ್ತ ಆಡಳಿತದ ರಾಜ್ಯವನ್ನಾಗಿ ಮಾಡ ಬೇಕಾಗಿದೆ. ಖಾಸಗಿ ರಂಗವು ಸಮಾಜದ ಎಲ್ಲ ವಲಯಗಳನ್ನು ಪ್ರವೇಶಿಸಿ ಬಿಟ್ಟಿದೆ. ಅವುಗಳ ಮೇಲೆ ಸಾರ್ವಜನಿಕ ನಿಯಂತ್ರಣ ಇರಬೇಕು. ಆರೋಗ್ಯ ಸೇವೆಯನ್ನು ಖಾಸಗೀಕರಣಗೊಳಿಸಬಾರದು. ಪ್ರಾಥಮಿಕ ಶಿಕ್ಷಣದಲ್ಲಿ ಖಾಸಗಿ ರಂಗದ ವ್ಯಾಪ್ತಿ ವೇಗವಾಗಿ ಬೆಳೆಯುತ್ತಿದೆ. ಇದನ್ನು ತಡೆಯಬೇಕು. ನೀರಾವರಿ ಮತ್ತು ಇಂಧನಗಳ ಮೇಲೆ ಹೂಡುತ್ತಿರುವ ಬಂಡವಾಳವನ್ನು ಕಡಿಮೆ ಮಾಡಬೇಕು. ನೀರು ಮತ್ತು ಇಂಧನಗಳಲ್ಲಿ ಮಿತವ್ಯಯ ಸಾಧಿಸಿಕೊಳ್ಳಬೇಕು. ಉತ್ಪಾದನೆಗಿಂತ ಅನವಶ್ಯಕವಾಗಿ ನಷ್ಟವಾಗುವ ನೀರು ಮತ್ತು ವಿದ್ಯುತ್ತನ್ನು ಉಳಿಸುವ ಕ್ರಮಗಳ ಬಗ್ಗೆ ಸರ್ಕಾರ ಗಮನ ನೀಡಬೇಕು. ಪ್ರಾಥಮಿಕ ಶಿಕ್ಷಣದ ಗುಣಮಟ್ಟವನ್ನು ಉತ್ತಮಪಡಿಸಬೇಕು. ಕೊನೆಯದಾಗಿ, ತಳಮಟ್ಟದಲ್ಲಿ ಬಜೆಟ್ಟಿನಲ್ಲಿ ಕೊಡ ಮಾಡಿರುವ ಹಣವನ್ನು ನಿಗದಿತ ಅವಧಿಯಲ್ಲಿ ವೆಚ್ಚ ಮಾಡುವುದರಲ್ಲಿ ಇಲಾಖೆಗಳು ವಿಫಲವಾಗುತ್ತಿವೆ. ಉದಾಹರಣೆಗೆ, ೨೦೧೭–೧೮ರಲ್ಲಿ ಪ.ಜಾ. ಉಪಯೋಜನೆಗೆ ಒದಗಿಸಿದ ರೂ. ೧೫೩೬೬ ಕೋಟಿಯಲ್ಲಿ ೨೦೧೭ ಡಿಸೆಂಬರ್‌ವರೆಗೆ ವೆಚ್ಚ ವಾದುದು ರೂ. ೯೦೫೪ ಕೋಟಿ (ಶೇ. ೫೮.೯೨). ಇದೇ ರೀತಿಯಲ್ಲಿ ಹೈದರಾಬಾದ್ ಕರ್ನಾಟಕ ಪ್ರಾದೇಶಿಕ ಅಭಿವೃದ್ಧಿ ಮಂಡಳಿಗೆ ಬಜೆಟ್ಟಿನಲ್ಲಿ ಒದಗಿಸಿದ ರೂ. ೧೦೦೦ ಕೋಟಿಯಲ್ಲಿ ೨೦೧೭ರ ಡಿಸೆಂಬರ್‌ವರೆಗೆ ವೆಚ್ಚವಾದುದು ರೂ. ೧೭೪.೨೯ ಕೋಟಿ. ಇದಕ್ಕೆ ಮುಖ್ಯ ಕಾರಣ ರಾಜಕಾರಣಿಗಳು ಆಡಳಿತದಲ್ಲಿ ಹಸ್ತಕ್ಷೇಪ ಮಾಡುವುದು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಜನರ ಸಹಭಾಗಿತ್ವದ ಕೊರತೆ. ಸಮ್ಮಿಶ್ರ ಸರ್ಕಾರವೊಂದೇ ನಮಗೆ ಇಂದು ಕೋಮುವಾದಿ ಪಕ್ಷವನ್ನು ಸೋಲಿಸಲು ಇರುವ ಅಸ್ತ್ರ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಪ್ರಯೋಗವನ್ನು ದೇಶ ಎದುರುನೋಡುತ್ತಿದೆ.




**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ೯.೯/೧, ೨ನೇ ಮುಖ್ಯ ರಸ್ತೆ
೪ನೇ ಅಡ್ಡ ರಸ್ತೆ, ಬೇಗೂರು ಮುಖ್ಯ ರಸ್ತೆ, ಹೊಂಗಸಂದ್ರ
ಬೆಂಗಳೂರು – ೫೬೦ ೦೬೮

## ಓದುಗರಲ್ಲಿ ಮನವಿ

ಓದುಗರ ಮತ್ತು ಜಾಹೀರಾತುದಾರರ ಪ್ರೋತ್ಸಾಹದಿಂದಾಗಿ ಕಳೆದ ಹತ್ತೊಂಬತ್ತು ವರ್ಷಗಳಿಂದ 'ಹೊಸತು' ಪತ್ರಿಕೆ ನಿರಂತರವಾಗಿ ಪ್ರಕಟವಾಗುತ್ತಿದೆ. ಆದರೆ, ಇತ್ತೀಚಿನ ದಿನಗಳಲ್ಲಿ ಕಾಗದ, ಮುದ್ರಣ, ಕಛೇರಿ ನಿರ್ವಹಣೆ ಮುಂತಾದ ಖರ್ಚುಗಳು ವಿಪರೀತ ಹೆಚ್ಚಾಗಿರುವುದರಿಂದ 'ಹೊಸತು' ಬಿಡಿ ಪ್ರತಿಗಳ ಮತ್ತು ಚಂದಾ ದರಗಳನ್ನು ಹೆಚ್ಚಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಉಂಟಾಗಿದೆ.

**೨೦೧೮ ಸೆಪ್ಟೆಂಬರ್ ೧ರಿಂದ ಅನ್ವಯಿಸುವಂತೆ ದರಗಳು ಈ ರೀತಿ ಹೆಚ್ಚಾಗಲಿವೆ:**

| | | |
|---|---|---|
| ಬಿಡಿ ಪ್ರತಿ (ವಾರ್ಷಿಕ ವಿಶೇಷಾಂಕ ಹೊರತುಪಡಿಸಿ) | ... | ರೂ. ೨೫/– |
| ಒಂದು ವರ್ಷದ ಚಂದಾ | ... | ರೂ. ೩೦೦/– |
| ಮೂರು ವರ್ಷಗಳ ಚಂದಾ | ... | ರೂ. ೬೦೦/– |

೨೦೧೮ ಆಗಸ್ಟ್ ೩೧ರೊಳಗಾಗಿ ಚಂದಾ ಪಾವತಿಸಿದಲ್ಲಿ / ನವೀಕರಿಸಿದಲ್ಲಿ ಹಳೆಯ ದರಗಳೇ ಅನ್ವಯಿಸುವುದು. ನಂತರವಷ್ಟೇ ಹೊಸ ದರಗಳು ಜಾರಿಯಾಗಲಿವೆ.

ಓದುಗರು ಸಹಕರಿಸಬೇಕಾಗಿ ವಿನಂತಿ.

– ಪ್ರಕಾಶಕ



# ಮಾದಾಲ ರಂಗಾರಾವು ಎಂಬ 'ಕೆಂಪು ನಕ್ಷತ್ರ'

**ಭಾ**ರತದ ಚಲನಚಿತ್ರ ರಂಗದಲ್ಲಿಯೇ ವಿಭಿನ್ನ ಮಾರ್ಗ ತುಳಿದು, ಹೊಸ ಮಾರ್ಗ ನಿರ್ಮಿಸಿದ ಮಾದಾಲ ರಂಗಾರಾವು ಎಂಬ ತೆಲುಗು ಚಿತ್ರನಟ, ನಿರ್ದೇಶಕ, ನಿರ್ಮಾಪಕ, 'ಕೆಂಪು ನಕ್ಷತ್ರ' (ರೆಡ್ ಸ್ಟಾರ್) ಎಂದೇ ಮಾಧ್ಯಮಗಳಿಂದ, ಅಭಿಮಾನಿಗಳಿಂದ ಗುರ್ತಿಸಲ್ಪಟ್ಟವರು. ಈಗಲೂ ಜಾಲತಾಣಗಳಲ್ಲಿ 'ಮಾದಾಲ ರಂಗಾರಾವು' ಎಂಬ ಹೆಸರಿಗೆ ಹುಡುಕಾಟ ನಡೆಸಿದರೆ 'ರೆಡ್ ಸ್ಟಾರ್' ಎಂದೇ ಬರುವುದು. ಅವರು ನಟಿಸಿ, ನಿರ್ದೇಶಿಸಿದ ಸಿನಿಮಾಗಳೆಲ್ಲ ಕ್ರಾಂತಿಕಾರಿ ಕಥಾ ವಸ್ತುವನ್ನೇ ಹೊಂದಿದ್ದವು. ತೆಲುಗು ಚಿತ್ರರಂಗ ಪೌರಾಣಿಕ, ಐತಿಹಾಸಿಕ, ಕೌಟುಂಬಿಕ, ಪ್ರೇಮ ಕಥೆಗಳ ಸುತ್ತ ಸುತ್ತುತ್ತಿರುವಾಗ ಜಮೀನ್ದಾರಿ, ಬಂಡವಾಳಶಾಹಿ, ಅಧಿಕಾರಶಾಹಿ ವ್ಯವಸ್ಥೆಯ ದೌರ್ಜನ್ಯ, ಕ್ರೌರ್ಯದ ವಿರುದ್ಧ ಸಿಡಿದೇಳುವ, ಪ್ರತಿಭಟಿಸುವ ಜನತೆಯನ್ನು ಕೇಂದ್ರವಾಗಿಟ್ಟು ಕೊಂಡು ಸಿನಿಮಾ ಮಾಡಿದವರು ಮಾದಾಲ ರಂಗಾರಾವು. ದುಡಿವ ಜನರ ಸಂಕೇತವಾದ ಕುಡುಗೋಲು ಸುತ್ತಿಗೆಯ ಚಿತ್ರವಿರುವ ಕೆಂಬಾವುಟ ಅವರ ಪ್ರತಿ ಸಿನಿಮಾದಲ್ಲೂ ಹಾರಾಡುತ್ತಿತ್ತು.

ದೈತ್ಯಾಕಾರದ ಈ ಗ್ರಾಮೀಣ ಪ್ರತಿಭೆ ಸಮಾಜವಾದಿ ಚಿಂತನೆಗಳನ್ನು ತಲೆತುಂಬ ತುಂಬಿಕೊಂಡು ಸಿನಿಮಾ ಕ್ಷೇತ್ರ ಪ್ರವೇಶಿಸಿದಾಗ ಇವರೊಂದು ಹೊಸ ಮಾರ್ಗ ನಿರ್ಮಿಸುತ್ತಾರೆ ಎಂದು ಚಿತ್ರರಂಗ ಅಂದುಕೊಂಡಿರಲಿಲ್ಲ. ಇವರ ಮೊದಮೊದಲ ಚಿತ್ರಗಳಲ್ಲೊಂದಾದ 'ಯುವತರಂ ಕಾದಿಲಿಂದಿ' ಸಿನಿಮಾಕ್ಕೆ ಆಂಧ್ರ ಸರಕಾರದ ನಂದಿ ಅವಾರ್ಡ್ ದೊರಕಿತು. ತಮ್ಮ ಕನಸಿನ ಕಥೆಗಳನ್ನು ತೆಲುಗು ಚಿತ್ರರಂಗದ ನಿರ್ಮಾಪಕರು ಒಪ್ಪುವುದಿಲ್ಲ ಎಂದು ಗೊತ್ತಿದ್ದೇ ಮಾದಾಲು ತಾವೇ ೧೯೭೪ರಲ್ಲಿ ನವರತ್ನಂ ಪಿಕ್ಚರ್ಸ್ ಎಂಬ ಸ್ವಂತ ಬ್ಯಾನರ್ ಆರಂಭಿಸುತ್ತಾರೆ. ೧೯೮೦ರ ದಶಕ ಅದು ಮಾದಾಲ ರಂಗಾರಾವು ದಶಕ ಎಂದೇ ಹೇಳಬಹುದು. ಮರೋ ಕುರುಕ್ಷೇತ್ರಂ, ಮಹಾಪ್ರಸ್ಥಾನಂ, ನವೋದಯಂ, ವಿಪ್ಲವ ಶಂಖಂ, ಬಲಿಪೀಠಂ, ಎರ್ರಪಾಪವುರಾಲು, ಜನಮ್–ಮನಮ್, ಪ್ರಜಾಶಕ್ತಿ, ಎರ್ರೆ ಮಲ್ಲೆಲು, ಎರ್ರ ಸೂರ್ಯುಡು ಈ ಸಿನಿಮಾಗಳ ಹೆಸರು ಕೇಳಿಯೇ ತೆಲಗು ಚಿತ್ರರಂಗ ಬೆಚ್ಚಿಬಿದ್ದಿತು. ನಟ, ನಿರ್ದೇಶಕ, ನಿರ್ಮಾಪಕನಾಗಿ ಬೆಳೆದ ಮಾದಾಲು ಅವಕಾಶವಂಚಿತ ಪ್ರತಿಭಾವಂತರ ಪಡೆಯನ್ನೇ ಮುಂದೆ ತಂದರು. ಅವರು ಬೆಳೆಸಿದ ಕಲಾವಿದರು, ತಂತ್ರಜ್ಞರು, ಸಂಗೀತಗಾರರು ಇಂದು ಬೆಳೆದುನಿಂತಿದ್ದಾರೆ. ಮಾದಾಲು ತಾವು ಮಾತ್ರ ಬೆಳೆಯಲಿಲ್ಲ, ಜನಪರ ಧ್ವನಿಯನ್ನು, ದುಡಿವ ವರ್ಗದ ಹಿತಾಸಕ್ತಿಯನ್ನು ತೆಲಗು ಚಿತ್ರರಂಗದ ಮುಖ್ಯವಾಹಿನಿಯ ವಿಷಯವನ್ನಾಗಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಮಾದಾಲು ಅವರ ಶೈಲಿ, ಸಂವಹನ ಸೂಕ್ಷ್ಮತೆಗಳ ಕುರಿತು ಹಲವಾರು ಜನ ಟೀಕೆ ಮಾಡಿದರು. ಅದೇನೇ ಇದ್ದರೂ ಸಿನಿಮಾದಂಥ ಮಾಧ್ಯಮದಲ್ಲಿ ವರ್ಗದೃಷ್ಟಿಕೋನವನ್ನು ಬೆಳೆಸಿದ್ದು ಮಾದಾಲ ರಂಗಾರಾವು. ಮುಂದೆ ವಿಭಿನ್ನ ಮಾದರಿಯಲ್ಲಿ ಭೂಮಾಲಿಕ – ಬಂಡವಾಳಶಾಹಿ – ಅಧಿಕಾರಶಾಹಿ ಹಾಗೂ ಈ ಶಕ್ತಿಗಳಿಗೆಲ್ಲ ಅಡಿಯಾಳಾಗಿರುವ ರಾಜಕೀಯ ಕ್ಷೇತ್ರಗಳ ಕುರಿತು, ಅದರ ವಿರುದ್ಧ ಪ್ರತಿಭಟನೆಯ ಕುರಿತು ಸಾಲು ಸಾಲು ಸಿನಿಮಾಗಳು ಬಂದವು. ಆದರೆ ಇಂಥ ಸಿನಿಮಾಗಳು ಜನಪ್ರಿಯವಾಗಿದ್ದು ಸರಳ ಮಾರ್ಗದಲ್ಲಲ್ಲ. ಮಾದಾಲ ರಂಗಾರಾವು ಸಿನಿಮಾಗಳು ಬಂದಾಗ ಕೇವಲ ಚಿತ್ರರಂಗದ ಹಿತಾಸಕ್ತ ಗುಂಪು ಮಾತ್ರವಲ್ಲ ಆಡಳಿತಶಾಹಿ, ಅಧಿಕಾರಶಾಹಿ, ಭೂಮಾಲಿಕ, ಬಂಡವಾಳಗಾರ ಹಿತಾಸಕ್ತಿಗಳು ಒಂದಾದವು. ಮಾದಾಲ ರಂಗಾರಾವು ಸಿನಿಮಾಗಳ ಬಿಡುಗಡೆಗೇ ಅಡ್ಡಿಪಡಿಸಿದವು. ಅವರ ವಿಪ್ಲವ ಶಂಖಂ ಸಿನಿಮಾ ಬಿಡುಗಡೆಗೆ ಸೆನ್ಸಾರ್ ಬೋರ್ಡ್ ನಿರಾಕರಿಸಿದಾಗ ಮಾದಾಲು ಮದ್ರಾಸ್‌ನ ಶಾಸ್ತ್ರಿ ಭವನದ ಸೆನ್ಸಾರ್ ಆಫೀಸಿನ ಎದುರಿಗೆ ಧರಣಿ ಕುಳಿತರು. ಇತಿಹಾಸದಲ್ಲಿ ಸಿನಿಮಾ ಬಿಡುಗಡೆಗಾಗಿ ಧರಣಿ ಸತ್ಯಾಗ್ರಹ ಮಾಡಿದ ಮೊದಲ ನಿರ್ಮಾಪಕ ಮಾದಾಲ ರಂಗಾರಾವು. ಈ ಹೋರಾಟಕ್ಕೆ ಖ್ಯಾತ ನಟರಾದ ಎಂ. ಜಿ. ರಾಮಚಂದ್ರನ್, ಶಿವಾಜಿಗಣೇಶನ್ ಬೆಂಬಲ ಕೊಟ್ಟಿದ್ದರು. ಮಾದಾಲು ಅಭಿಮಾನಿಗಳು, ಎಡ ಪಕ್ಷಗಳ ಕಾರ್ಯಕರ್ತರು ಬೆಂಬಲಿಸಿದರು. ಸಿನಿಮಾ ಬಿಡುಗಡೆಯ ಹಕ್ಕಿಗಾಗಿ ನಡೆದ ಹೋರಾಟ ಎಷ್ಟು ತೀವ್ರವಾಗಿತ್ತೆಂದರೆ ಅಂದಿನ ಪ್ರಧಾನಿ ಇಂದಿರಾಗಾಂಧಿಯವರು ಮಧ್ಯ ಪ್ರವೇಶ ಮಾಡಿ ಎನ್.ಎಫ್.ಡಿ.ಸಿ. ಚೇರ್‌ಮನ್ ಅವರ ಮುಖಾಂತರ ಸಮಸ್ಯೆ ಇತ್ಯರ್ಥಪಡಿಸಿದರು. ಮಾದಾಲ ಆಂಧ್ರದ ನೆಲದಲ್ಲಿ 'ವಿಪ್ಲವ ಶಂಖಂ' ಊದಿದರು. ಇದೇ ರೀತಿ ಪ್ರಜಾಶಕ್ತಿ, ಜನಮ್–ಮನಮ್ ಸಿನಿಮಾಗಳ ಬಿಡುಗಡೆಗೂ ಸೆನ್ಸಾರ್ ಕಮಿಟಿ ತಕರಾರು ತೆಗೆದಾಗ ಬೀದಿ ಹೋರಾಟ, ನ್ಯಾಯಾಲಯ ಹೋರಾಟ ಮಾಡಿ ಗೆಲವು ಪಡೆದರು.

ಪ್ರಜಾನಾಟ್ಯ ಮಂಡಳಿಯ (ಇಪ್ಟಾ) ನಾಯಕತ್ವ ವಹಿಸಿದ ಮಾದಾಲು ದೇಶದಲ್ಲಿ ಎಲ್ಲಿಯೇ ಜನಪರ, ಎಡ ಚಳುವಳಿಗಳು ನಡೆದಾಗ ಸ್ವಂತ ಖರ್ಚಿನಲ್ಲಿ ಹೋಗುತ್ತಿದ್ದರು. ಕರ್ನಾಟಕದ ಹಲವಾರು ಜನಪರ ಚಳುವಳಿಗಳಲ್ಲಿ ಭಾಗವಹಿಸಿದ್ದರು. ಕರ್ನಾಟಕದ ಗಡಿಯ ತೆಲುಗು ಭಾಷಿಕ ಪ್ರದೇಶಗಳಲ್ಲಿ ಮಾದಾಲ ರಂಗಾರಾವು ದೊಡ್ಡ ಅಭಿಮಾನಿಗಳ ಪಡೆಯನ್ನೇ ಹೊಂದಿದ್ದಾರೆ. ಅಷ್ಟು ದೊಡ್ಡ ನಟ, ನಿರ್ಮಾಪಕನಾದರೂ ಯಾವತ್ತೂ 'ಅಹಂ' ಅವರ ಹತ್ತಿರ ಸುಳಿಯಲಿಲ್ಲ. ಚಳುವಳಿಗಳಲ್ಲಿ ಕೆಂಪಂಗಿ ತೊಟ್ಟು ಕಾರ್ಯಕರ್ತರಂತೆ ಬೀದಿಗಿಳಿಯುತ್ತಿದ್ದ ಮಾದಾಲ ರಂಗಾರಾವು ಎಲ್ಲಿಯೇ ಮೇ ದಿನಾಚರಣೆ ನಡೆದರೆ ಅಲ್ಲಿ ಹಾಜರು. ಅಂಥ ಮಾದಾಲು ಮೇ ೨೭, ೨೦೧೮ರಂದು ನಿಧನರಾದರು. ಅವರು ಹುಟ್ಟಿದ್ದು ಮೇ ೨೫, ೧೯೪೮. ಮೇ ತಿಂಗಳು ದುಡಿವ ವರ್ಗದ ಹೋರಾಟದ ನೆನಪಿನ ತಿಂಗಳು. ಅದೇ ತಿಂಗಳಲ್ಲಿ ಜನಿಸಿ, ಅದೇ ತಿಂಗಳಲ್ಲಿ ನಿರ್ಗಮಿಸಿದ ಮಾದಾಲು ಬದುಕಿನುದ್ದಕ್ಕೂ ಹೇಳಿದ್ದು ಲಾಲ್ ಸಲಾಮ್, ಹೇಳಿಸಿಕೊಂಡಿದ್ದು ಕೆಂಪು ತಾರೆ (ರೆಡ್ ಸ್ಟಾರ್). ಮಾದಾಲ ರಂಗಾರಾವು ಒಂದು ಮಾರ್ಗ ರೂಪಿಸಿದ್ದರು. ಅದು ಹೆದ್ದಾರಿಯಾಗಿ ಬೆಳೆದಿತ್ತು.

**ಶ್ರೀಸುಮಿತ್ರಾಸುತ ಅಗಸಬಾಳ**



# ಕೃಷಿ ಸಾಲದ ವಿಪಥನ... ಪೊಳ್ಳು ಭರವಸೆಗಳ ಆಮಿಷ... ಸಾಲಗಾರನ ಸಂದಿಗ್ಧತೆ

**ರಾಜೀವ್ ಎನ್. ಮಾಗಲ್**

**ಕೃ**ಷಿ ಎಂಬ ಪುರಾತನ ಕಸುಬು ನಿರಂತರ ಶ್ರಮವನ್ನು ಅಪೇಕ್ಷಿಸುವ ವೃತ್ತಿಯಾಗಿರುವ ಹಿನ್ನೆಲೆಯಲ್ಲಿ ಯಾವುದೇ ಕೈಗಾರಿಕೆಗೆ, ಸೇವಾ ಕ್ಷೇತ್ರಕ್ಕೆ ಅಥವಾ ವಾಣಿಜ್ಯ-ವ್ಯವಹಾರಕ್ಕೆ ಹೋಲಿಸಲಾಗದು ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ, ಕೃಷಿಯಲ್ಲಿ ಕೂಡ ಆರ್ಥಿಕ ಸುಗಮತೆ ಕಾಣಬೇಕಾದರೆ ನಿರಂತರವಾಗಿ ಬದಲಾವಣೆಗಳನ್ನು, ತಾಂತ್ರಿಕತೆಯನ್ನು, ಆಧುನಿಕತೆಯನ್ನು ಅಳವಡಿಸುವ ಅವಶ್ಯಕತೆ ಇದ್ದೇ ಇರುತ್ತೆ. ಈ ಅಳವಡಿಕೆಗೆ ಹಣಕಾಸಿನ ಅವಶ್ಯಕತೆ ಅನಿವಾರ್ಯ. ಕೃಷಿಯಲ್ಲಿನ ಹಲವು ಕಾಯಕಗಳಿಗೆ ಸ್ವಂತ ಬಂಡವಾಳ ಸಾಲದೇ ಹೋಗಬಹುದಾದ ಕಾರಣಕ್ಕೆ ಎರವಲು ಪದ್ಧತಿ ಜಾರಿಯಲ್ಲಿದ್ದು, ಕೆಲವು ದಶಕಗಳಿಂದ 'ಸಾಲ' ಎಂಬ ಕಿವಿಗಳಿಗೆ ಇಂಪು ನೀಡದ, ಅನಿವಾರ್ಯವಾದ 'ಪದ' ಕೇಳಿ ಬರುತ್ತಿದೆ. "ಆಳಾಗಿ ದುಡಿ, ಅರಸನಾಗಿ ಬಾಳು" ಎಂಬ ಹಿರಿಯರ ನಾಣ್ಣುಡಿ ಪ್ರಸ್ತುತ ಸಂದರ್ಭದಲ್ಲಿ ವಿಮರ್ಶೆಗೆ ಒಳಪಡಿಸಬೇಕಿದೆ ! ಇದೇ ಆಧುನಿಕತೆಯ ಪ್ರಭಾವ !

ನಮ್ಮ ಬಹುತೇಕ ಪೂರ್ವಜರು ಮೂಲವಾಗಿ ಕೃಷಿಯಲ್ಲಿ 'ಆದಾಯಕ್ಕಿಂತ ಆನಂದ'ಕ್ಕೆ ಮಹತ್ವ ಎಂಬ ವಿವೇಚನೆಯಿಂದ ತೊಡಗಿಸಿಕೊಂಡಿದ್ದರಾದರೂ ಇಂದಿನ ಯುವಪೀಳಿಗೆ ಈ ತಾತ್ಪರ್ಯವನ್ನು ಒಪ್ಪುವವರಲ್ಲ, ಒಪ್ಪಲು ಸಾಧ್ಯವೂ ಇಲ್ಲ. ಕಾರಣ ಕೃಷಿಯೂ ಒಂದು ವ್ಯವಹಾರವಾಗಿದೆ. ಉತ್ಪಾದಕತೆಗೆ, ಆರ್ಥಿಕ ಲಾಭಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಲೇಬೇಕಿದೆ. ಈ ಬದಲಾವಣೆ, ಆಲೋಚನೆ ಖಂಡಿತ ಸ್ವಾಗತಾರ್ಹವೇ. ಇಂದು ತಂತ್ರಜ್ಞಾನದ ಬದಲಾವಣೆಗಳಿಂದ, ಕೃಷಿಯಲ್ಲಿ ಕೂಡ ಕೆಲವು ದೇಶೀಯ ಪದ್ಧತಿಗಳು ಮಾಯವಾಗಿ ಆಧುನಿಕತೆಯ ಕಡೆಗೆ ಮುಖ ಮಾಡುವುದು ಸ್ವಾಭಾವಿಕವೇ. ಈ ಅನಿವಾರ್ಯತೆಯನ್ನು ಅರಿತ ಹಣಕಾಸು ಸಂಸ್ಥೆಗಳು ರೈತಾಪಿ ವರ್ಗದ ಅಮಾಯಕತೆಯನ್ನು, ಅಸಹಾಯಕತೆಯನ್ನು ಸಮಯೋಚಿತವಾಗಿ ಬಳಸುವಲ್ಲಿ (ಶೋಷಣೆಯೆಂದು ಹೇಳಲಾಗದಿದ್ದರೂ) ಯಶಸ್ವಿಯಾಗಿದ್ದು ಸಾಲ ಸೌಲಭ್ಯದ ವಿವಿಧ ಯೋಜನೆಗಳ ಬಗ್ಗೆ ಆಮಿಷಗಳ, ಅತ್ಯಂತ ಆಕರ್ಷಕವಾದ ರೂಪದಲ್ಲಿ ಸವಲತ್ತುಗಳನ್ನು ನೀಡುತ್ತಿರುವುದು ಸತ್ಯಕ್ಕೆ ದೂರವಾದ ಸಂಗತಿಯಲ್ಲ... 'ಬಡ್ಡಿಗಾಗಿ ಸಾಲ' ನೀಡುವುದು ಸಂಸ್ಥೆಗಳಿಗೆ ಕೇವಲ ವ್ಯವಹಾರ ಮಾತ್ರ . ಒಕ್ಕಲುತನಕ್ಕೆ ಸಲ್ಲಿಸುವ ಸೇವೆ ಅಲ್ಲ !

ಪಡೆದ ಸಾಲವನ್ನು ನಿಗದಿತ ಉದ್ದೇಶಕ್ಕೆ ಮೀಸಲಿಟ್ಟು ಕಟ್ಟುನಿಟ್ಟಾಗಿ ಬಳಸಿದರೆ ಹೆಚ್ಚಿನ ಸಮಸ್ಯೆಗಳ ಉಲ್ಬಣಕ್ಕೆ ನಾಂದಿಯಾಗುತ್ತಿರಲಿಲ್ಲ ಎಂಬುದು ಸಹಜವಾದ ಚಿಂತನೆ. ಆದರೆ, ರೈತಾಪಿ ಮಂದಿಯ ಬೇಕು-ಬೇಡಗಳು, ಆಸೆ-ಆಕಾಂಕ್ಷೆಗಳನ್ನು, ಕೌಟುಂಬಿಕ ಖರ್ಚು-ವೆಚ್ಚಗಳಿಗೆ ಹಣದ ಅವಶ್ಯಕತೆ ಪೂರೈಸಲು ಸಾಧ್ಯವಾಗುವುದು ವೃತ್ತಿಯಲ್ಲಿ ಅಪಾರ ಲಾಭ ಗಳಿಸಿದಾಗ ಇಲ್ಲವೆ ಪಡೆದ ಸಾಲದ ಹಣದಲ್ಲಿನ

ಇತ್ತೀಚಿನ ದಿನಗಳಲ್ಲಿ ಆಡಳಿತದಲ್ಲಿರುವ ಹಾಗೂ ವಿರೋಧ ಪಕ್ಷದ ರಾಜಕೀಯ ಪಕ್ಷಗಳಿಗೆ ಚುನಾವಣಾ ಪ್ರಣಾಳಿಕೆಯಲ್ಲಿ ಕೆಂಪು ಅಕ್ಷರಗಳಲ್ಲಿ ಕಾಣುವಂತೆ ಮುದ್ರಿಸುವ ಮೂಲ ಸವಲತ್ತು, ಭರವಸೆ ಗ್ರಾಮೀಣ ಅಭಿವೃದ್ಧಿಗಿಂತ, ಸವಲತ್ತುಗಳಿಗಿಂತ 'ಸಾಲ ಮನ್ನಾ' ಇಲ್ಲವೆ ಕನಿಷ್ಠ ಪಕ್ಷ 'ಬಡ್ಡಿ ಮನ್ನಾ'. ಒಂದಲ್ಲ ಒಂದು ದಿನ ಆಡಳಿತದ ಚುಕ್ಕಾಣಿ ಹಿಡಿಯಲಿರುವ, ರಾಜ್ಯಗಳನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ಜವಾಬ್ದಾರಿ ಹೊಂದಿರುವ ರಾಜಕೀಯ ಪಕ್ಷಗಳೇ ಈ ರೀತಿಯಲ್ಲಿ ಗ್ರಾಮೀಣ ಭಾಗದವರನ್ನು ದಾರಿ ತಪ್ಪಿಸುವಲ್ಲಿ ನಿರತರಾದರೆ ಅಶಿಕ್ಷಿತರಾದ "ಮಣ್ಣಿನ ಮಕ್ಕಳು" "ದಾರಿ ತಪ್ಪಿದ ಮಕ್ಕಳಾ"ಗುವುದರಲ್ಲಿ ತಪ್ಪೇನಿದೆ ?

ಕೊಂಚ ಮಟ್ಟಿಗಿನ ವಿಪಥನದಿಂದ ಮಾತ್ರ. ಆದರೆ, ಬರುಬರುತ್ತ ಸಾಲದ ಸದ್ಬಳಕೆಯಲ್ಲಿ ಸಾಕಷ್ಟು ಏರು–ಪೇರುಗಳಾಗತೊಡಗಿರುವ ಬಗ್ಗೆ ಆಲೋಚಿಸದೆ ಇರುವುದು ಸಮಸ್ಯೆಗೆ ಗಂಭೀರ ಕಾರಣವಾಗಿದೆ. ಸಾಲ ನೀಡುವ ಹಣಕಾಸು ಸಂಸ್ಥೆಗಳೂ ಸಹ ಒಮ್ಮೆ ಸಾಲ ನೀಡಿದರೆ ಮತ್ತೆ ಸಾಲಗಾರನನ್ನು ಭೇಟಿಯಾಗುವುದು ಮರುಪಾವತಿಯ ದಿನಾಂಕ ಹತ್ತಿರ ಬಂದಾಗಲೇ ಅಥವಾ ಸಾಲದ ಕಂತು ಮರುಪಾವತಿಯಾಗದೇ ಹೋದ ಸಮಯದಲ್ಲಿ! ಪಡೆದ ಸಾಲದ ಮೊತ್ತವನ್ನು ಸಂಬಂಧರಹಿತ ಕಾರಣಗಳಿಗೆ ಬಳಕೆಮಾಡಿದ ಪರಿಣಾಮ, ನಿಗದಿತ ಲಾಭದಾಯಕತ್ವ ಇರದ ಕೃಷಿಯಲ್ಲಿ, ಬಹುಬೇಗನೆ ಮುಗ್ಗಟ್ಟು ಎದುರಿಸುವುದು ಅತೀ ಸುಲಭ. ಇನ್ನು ಖಾಸಗಿ ವಲಯದಿಂದ ಪಡೆದ ಸಾಲ (ಮೀಟರ್ ಸಾಲ) ಶೂಲಕ್ಕಿಂತಲೂ ಮೊನಚಾಗಿರುವ ಬಗ್ಗೆ ಹೆಚ್ಚಿನ ವಿಶ್ಲೇಷಣೆ ಅಗತ್ಯವಿಲ್ಲ.

ಮಿಕ್ಕೆಲ್ಲ ಕಸುಬುಗಳಲ್ಲಿ, ಕೈಗಾರಿಕೆ, ಸೇವಾ ವಲಯ, ವಾಣಿಜ್ಯ–ವ್ಯವಹಾರ, ಆಮದು–ರಫ್ತು ಇತ್ಯಾದಿಗಳಲ್ಲಿ... ಪದಾರ್ಥದ 'ಉತ್ಪತ್ತಿ'ಗೂ ಮುಂಚಿತವಾಗಿ 'ಉತ್ಪನ್ನ'ದ ಬೆಲೆ ನಿಗದಿಯಾಗಿರುತ್ತೆ. ಉತ್ಪಾದನಾ (ಮಾರಾಟ) ವೆಚ್ಚಕ್ಕೆ ಈ ನಿಗದಿಯಾದ ಬೆಲೆಯೇ ನೆಲೆಗಟ್ಟಾಗಿರುತ್ತೆ; ಆದರೆ, ಕೃಷಿಯಲ್ಲಿ ಮಾತ್ರ ರೈತ ತಾನು ಶ್ರಮಿಸಿ ಉತ್ಪಾದಿಸಿದ ಬೆಳೆಗೆ ಬೆಲೆ ನಿಗದಿಯಾಗುವುದು ಮೂರನೆಯವರಿಂದ... ಬೆಳೆಗಾರನಿಗೆ ತನ್ನದೇ ಪದಾರ್ಥದ ಬೆಲೆ ನಿಗದಿಯಲ್ಲಿ (input ಬೆಲೆ ಮಾತ್ರ ಮುಂಗಡವಾಗಿ ನಿಗದಿಯಾಗಿರುತ್ತೆ) ಕೊಂಚವೂ ಹಿಡಿತವಿರದು. ಇವೆಲ್ಲ ವಿಲಕ್ಷಣ ಸನ್ನಿವೇಶಗಳ ನಡುವೆ ಪಡೆದ ಸಾಲಕ್ಕೆ ವಿಧಿಸುವ ಬಡ್ಡಿಯಲ್ಲಿ, ಮರುಪಾವತಿಯಲ್ಲಿನ ಸಮಯಕ್ಕೆ ಕಟ್ಟುಪಾಡುಗಳು ಮಾತ್ರ ಕಾನೂನುಬದ್ಧವಾಗಿರುವುದು ಗಮನಾರ್ಹ. ಇದು ಒಂದು ರೀತಿಯಲ್ಲಿ ವಿಚಿತ್ರವೆಂದೇ ಹೇಳಬಹುದು.

ಒಂದು ವೇಳೆ, ಕೃಷಿಕ ತನ್ನ ಪೂರ್ವನಿಯೋಜಿತ ಕೃಷಿ ಚಟುವಟಿಕೆಗೆ ಪಡೆದ ಸಾಲವನ್ನೇನಾದರೂ ಅನ್ಯ, ಕೃಷಿಯೇತರ ಕಾರಣಕ್ಕೆ ಬಳಸಿದ್ದೇ ಆದರೆ ಅದರ ಅಡ್ಡ ಪರಿಣಾಮ ಮಾತ್ರ ಘೋರವಾಗಿರುವುದರಲ್ಲಿ ಸಂದೇಹವೇ ಇರದು. ಇಂತಹ ಸಂದರ್ಭಕ್ಕೆ ಪೂರಕವೆನ್ನುವಂತೆ ರಾಜಕೀಯ ಪಕ್ಷಗಳು ತಮ್ಮ ಬೇಳೆ ಬೇಯಿಸಿಕೊಳ್ಳುವ ಹುನ್ನಾರದಿಂದ ಮತಗಳಿಗೆ ಪ್ರತಿಫಲವಾಗಿ ಸಾಲ ಮನ್ನಾ ಎಂಬ ಆಮಿಷವನ್ನು ಒಡ್ಡುವುದರಿಂದ ಗ್ರಾಮೀಣ ರೈತರು ಪಡೆದ ಸಾಲದ ಹೊರೆಯನ್ನು ಹಾಗೂ ಮರುಪಾವತಿಯನ್ನು ಗಂಭೀರವಾಗಿ ತೆಗೆದುಕೊಳ್ಳುವ ಸಾಧ್ಯತೆಗಳು ಕಡಿಮೆಯಾಗುತ್ತಿವೆ. ಇತ್ತೀಚಿನ ದಿನಗಳಲ್ಲಿ ಆಡಳಿತದಲ್ಲಿರುವ ಹಾಗೂ ವಿರೋಧ ಪಕ್ಷದ ರಾಜಕೀಯ ಪಕ್ಷಗಳಿಗೆ ಚುನಾವಣಾ ಪ್ರಣಾಳಿಕೆಯಲ್ಲಿ ಕೆಂಪು ಅಕ್ಷರಗಳಲ್ಲಿ ಕಾಣುವಂತೆ ಮುದ್ರಿಸುವ ಮೂಲ ಸವಲತ್ತು, ಭರವಸೆ ಗ್ರಾಮೀಣ ಅಭಿವೃದ್ಧಿಗಿಂತ, ಸವಲತ್ತುಗಳಿಗಿಂತ 'ಸಾಲ ಮನ್ನಾ' ಇಲ್ಲವೆ ಕನಿಷ್ಠ ಪಕ್ಷ 'ಬಡ್ಡಿ ಮನ್ನಾ'. ಒಂದಲ್ಲ ಒಂದು ದಿನ ಆಡಳಿತದ ಚುಕ್ಕಾಣಿ ಹಿಡಿಯಲಿರುವ, ರಾಜ್ಯಗಳನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ಜವಾಬ್ದಾರಿ ಹೊಂದಿರುವ ರಾಜಕೀಯ ಪಕ್ಷಗಳೇ ಈ ರೀತಿಯಲ್ಲಿ ಗ್ರಾಮೀಣ ಭಾಗದವರನ್ನು ದಾರಿ ತಪ್ಪಿಸುವಲ್ಲಿ ನಿರತರಾದರೆ ಅಶಿಕ್ಷಿತರಾದ "ಮಣ್ಣಿನ ಮಕ್ಕಳು" "ದಾರಿ ತಪ್ಪಿದ ಮಕ್ಕಳಾ"ಗುವುದರಲ್ಲಿ ತಪ್ಪೇನಿದೆ? ಪಡೆದ ಸಾಲವನ್ನು ಮರುಪಾವತಿಸುವ ಜವಾಬ್ದಾರಿ ನಿಗದಿಪಡಿಸದ ಮೇಲೆ, ಈ ನಿಟ್ಟಿನಲ್ಲಿ ಸೂಕ್ತ ಮಾರ್ಗದರ್ಶನ ನೀಡದ ಮೇಲೆ, ಸಾಲದ ಹಣವನ್ನು ಕೃಷಿಯೇತರ ಕಾರಣಕ್ಕೆ ಬಳಸಿದರೆ ತಪ್ಪೇನಿದೆ? ಈ ರೀತಿಯ ಮನೋಭಾವನೆಯನ್ನು, ಆಮಿಷಗಳ ಹಿನ್ನೆಲೆಯಲ್ಲಿ, ರೂಢಿಸಿಕೊಂಡ ಸಾಲಗಾರ ಖಾಸಗಿ ವಲಯದಿಂದ, ಬಡ್ಡಿಯ ದರವನ್ನು ಲೆಕ್ಕಿಸದೆ, ಪಡೆದ ಸಾಲಕ್ಕೆ ಬಡ್ಡಿಯನ್ನೂ ಸಹ ತೀರಿಸಲಾಗದ ಹಂತ ತಲುಪಿದಾಗ, ಒತ್ತಡಗಳು ಹೆಚ್ಚಾಗುವುದು ಅನಿವಾರ್ಯ... ಆಗ ಸ್ವಾಭಿಮಾನಿ ಅಮಾಯಕ ರೈತಾಪಿ ಮಂದಿಗೆ ಉಳಿಯುವುದೊಂದೆ ನತದೃಷ್ಟದ ನಿರ್ಧಾರ "ಆತ್ಮಹತ್ಯೆ..." ಇಷ್ಟೆಲ್ಲ ಒತ್ತಡಗಳ, ಗೊಂದಲಗಳ ನಡುವೆ, ತನ್ನ ಪರಿಶ್ರಮಕ್ಕೆ ಬೆಲೆ ಸಿಗದಿದ್ದರೂ ಸಹ ಜಗತ್ತಿಗೆ ಅನ್ನವನ್ನು ಉಣಬಡಿಸುವ ರೈತಾಪಿ ಮಂದಿಯನ್ನು ಕಾಡುವ, ಸುಲಭದಲ್ಲಿ ಉತ್ತರಿಸಲಾಗದ ಪ್ರಶ್ನೆ ಎಂದರೆ "ನಾವೂ ಸಹ ಇತರರಿಗಿಂತ ಕಡಿಮೆ ಸೌಕರ್ಯಗಳಿರುವ ಪರಿಸ್ಥಿತಿಯಲ್ಲಿ ಜೀವಿಸುತ್ತಿರುವ ಮನುಷ್ಯರಲ್ಲವೇ? ನಮಗೂ, ನಮ್ಮ ಕುಟುಂಬ ವರ್ಗಕ್ಕೂ ಆಸೆ–ಆಕಾಂಕ್ಷೆಗಳಿರುವುದು ಸಹಜವಲ್ಲವೇ? ಹೀಗಿರುವಾಗ ನಮ್ಮ ವೈಯಕ್ತಿಕ ಬೇಕು–ಬೇಡಗಳಿಗೆ ಹಣಕಾಸು ಹೊಂದಿಸುವುದು ಹೇಗೆ? ಬ್ಯಾಂಕುಗಳಿಂದ ಪಡೆದ ಅಲ್ಪ ಸಾಲದಿಂದಲೇ ಅಲ್ಲವೇ?" ಎಂಬುದು!

ಪ್ರಸ್ತುತ ಪರಿಸ್ಥಿತಿಯಲ್ಲಿ, ರಾಜಕೀಯ ಪಕ್ಷಗಳು (ಯೋಜನೆಗಳನ್ನು, ಕಾನೂನನ್ನು ರೂಪಿಸುವವರು) ಶ್ರಮವಹಿಸಿ ದುಡಿಯುವ ಕೃಷಿಕರಿಗೆ ಇಲ್ಲಸಲ್ಲದ, ಈಡೇರಿಸಲು ಸಾಧ್ಯವಾಗದ ಭರವಸೆಗಳನ್ನು ನೀಡಿ ಅಡ್ಡದಾರಿ ಹಿಡಿಯುವುದನ್ನು ತಪ್ಪಿಸಿ, ಬದಲಿಗೆ ವೈಜ್ಞಾನಿಕವಾದ, ಹವಾಮಾನಕ್ಕೆ ಅನುಗುಣವಾದ, ಮಾರಾಟಕ್ಕೆ ಯೋಗ್ಯವಾದ ಬೆಳೆ ಆಯ್ಕೆಯ ಬಗ್ಗೆ ಮಾಹಿತಿ ನೀಡಿದರೆ, ಬೆಳೆದ ಫಸಲಿಗೆ ಪ್ರಾಯೋಗಿಕವಾಗಿ ಕನಿಷ್ಠ ಬೆಂಬಲ ಬೆಲೆ (ಎಂ.ಎಸ್.ಪಿ.) ಮುಂಗಡವಾಗಿ ಘೋಷಣೆ ಮಾಡಿದರೆ, ನೀಡಿದ ಸಾಲದ ಸದ್ಬಳಕೆಯ ಬಗ್ಗೆ ಹಣಕಾಸು ಸಂಸ್ಥೆಗಳು ತಿಳುವಳಿಕೆ ನೀಡುವಲ್ಲಿ ಜಾಗರೂಕರಾದರೆ, ಬೆಳೆಗೆ, ಹಿಡುವಳಿಗೆ ತಕ್ಕ ಪ್ರಮಾಣದಲ್ಲಿ ದೃಢೀಕರಿಸಿದ, ಪ್ರಮಾಣೀಕರಿಸಿದ ಕೃಷಿ ಪರಿಕರಗಳನ್ನು ಕಾಲೋಚಿತವಾಗಿ ವಿತರಿಸಿದರೆ, ನುರಿತ, ಅನುಭವೀ ತಜ್ಞರು, ತಮ್ಮ ಕಚೇರಿಯಿಂದ ಹೊರನಡೆದು, ಕೃಷಿಕರ ಜಮೀನಿಗೆ ಖುದ್ದಾಗಿ ಭೇಟಿ ನೀಡಿ ಸೂಕ್ತ ಭೌಗೋಳಿಕ ಆಧಾರದ ಅನ್ವಯ ತಾಂತ್ರಿಕ ಮಾರ್ಗದರ್ಶನ ನೀಡಿದರೆ, ಫಸಲು ಕೈಗೆ ಬಂದ ಕೂಡಲೆ, ವಿಳಂಬ ಮಾಡದೆ, ಮಧ್ಯವರ್ತಿಗಳ ಹಾವಳಿಯನ್ನು ತಡೆಗಟ್ಟಿ ಶಾಶ್ವತ ಖರೀದಿ ಕೇಂದ್ರಗಳ ಮುಖೇನ ನೇರವಾಗಿ ರೈತಾಪಿ ಮಂದಿಯಿಂದ ಫಸಲನ್ನು ಖರೀದಿಸಿ ಸಾಲ ಪಡೆದ ಹಣಕಾಸು ಸಂಸ್ಥೆಯ ಮುಖಾಂತರವೇ ಸಂಪೂರ್ಣ ಹಣ ಸಂದಾಯ ಮಾಡಿದರೆ (ನೀಡಿದ ಸಾಲದ ಚುಕ್ತಾ ಮಾಡಿ) ಯಾವೊಬ್ಬ ರೈತನೂ ಸಾಲ ಮನ್ನಾ ಇಲ್ಲವೆ ಬಡ್ಡಿ ಮನ್ನಾ ಕೇಳಿ ರಾಜಕೀಯ ಪಕ್ಷಗಳ ಬಳಿ ಇಲ್ಲವೆ ಸರ್ಕಾರಗಳ ಬಳಿ ಭಿಕ್ಷೆ ಬೇಡುವ, ಕೈ ಒಡ್ಡುವ ಮನಸ್ಸು ಖಂಡಿತ ಮಾಡುವುದಿಲ್ಲ. ಕಾರಣ ರೈತನಿಗಿರುವ ಸ್ವಾಭಿಮಾನ. ರೈತ ತೀರಿಸಬೇಕಿರುವುದು ಭೂಮಿ ತಾಯಿಯ ಋಣವೊಂದೇ. ಹೊರತು ರಾಜಕೀಯ ಮುಖಂಡರ, ರಾಜಕೀಯ ಪಕ್ಷಗಳ ಹುಸಿ ಭರವಸೆಗಳ ಋಣವನ್ನಲ್ಲ!





**ರಾಜೀವ್ ಎನ್. ಮಾಗಲ್**
ಶ್ರೀ ಸಾಯಿ ಸಿರಿ ಎಸ್ಟೇಟ್, ಅಂಚೆ ಪೆಟ್ಟಿಗೆ
ಸಂಖ್ಯೆ ೬೩, ಸಕಲೇಶಪುರ ತಾಲ್ಲೂಕು
ಹಾಸನ ಜಿಲ್ಲೆ – ೫೭೩೧೩೪


## ಅಭಿನಂದನೆಗಳು...

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಕೇಂದ್ರ ಕನ್ನಡ ಕ್ರಿಯಾ ಸಮಿತಿ ನೀಡುವ ೨೦೧೮–೧೯ನೇ ಸಾಲಿನ 'ಕರ್ನಾಟಕ ಚೂಡಾಮಣಿ' ಪ್ರಶಸ್ತಿ ಕನ್ನಡಪರ ಹೋರಾಟಗಾರರಾದ ಶ್ರೀ ರಾ. ನಂ. ಚಂದ್ರಶೇಖರ್ ಅವರಿಗೆ ಹಾಗೂ ಚಿದಾನಂದ ಪ್ರಶಸ್ತಿ ಪ್ರದಾನ ಸಮಿತಿಯು ೨೦೧೮ನೇ ಸಾಲಿನ 'ಚಿದಾನಂದ ಪ್ರಶಸ್ತಿ' ಡಾ॥ ಜ್ಯೋತ್ಸ್ನಾ ಕಾಮತ್ ಅವರಿಗೆ ಲಭಿಸಿವೆ.

ಅವರುಗಳಿಗೆ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

**ಸಿ. ಆರ್. ಕೃಷ್ಣರಾವ್**

# ಕರ್ನಾಟಕದ ರಾಜಕಾರಣ – ಒಂದು ಅನಿಸಿಕೆ

ಕರ್ನಾಟಕ ರಾಜ್ಯ ವಿಧಾನ ಸಭೆಗೆ ೨೦೧೮ರ ಮೇ ತಿಂಗಳಲ್ಲಿ ನಡೆದ ಚುನಾವಣೆಗಳು, ಫಲಿತಾಂಶ ಬಂದ ನಂತರದ ಬೆಳವಣಿಗೆಗಳು ರಾಜ್ಯದ ರಾಜಕಾರಣದಲ್ಲಿ ಅತ್ಯಂತ ಕೆಳಮಟ್ಟದ್ದಾಗಿದ್ದವು. ರಾಜ್ಯದ ಮೂರು ಪ್ರಮುಖ ರಾಜಕೀಯ ಪಕ್ಷಗಳು – ಭಾಜಪ, ಕಾಂಗ್ರೆಸ್, ಜೆಡಿಎಸ್ – ನಡೆದುಕೊಂಡ ರೀತಿ, ಚುನಾವಣಾ ಪ್ರಚಾರದ ಕಾಲದಲ್ಲಿ ಹದ್ದುಮೀರಿದ ಮಾತುಗಳು, ಪ್ರಣಾಳಿಕೆಗಳಲ್ಲಿ ಮತದಾರರ ಮುಂದೆ ಇರಿಸಿದ ಪೊಳ್ಳು ಆಶ್ವಾಸನೆಗಳು, ಅಧಿಕಾರದ ಗದ್ದುಗೆ ಹಿಡಿಯಲು ಅನುಸರಿಸಿದ ತಂತ್ರಗಾರಿಕೆ, ಜಾತಿ ರಾಜಕಾರಣ, ಮತದಾರರನ್ನು ಓಲೈಸಲು ಒಡ್ಡಿದ ಆಮಿಷಗಳು, ಹಣ ಸರಕುಗಳ ಹಂಚಿಕೆ ಎಲ್ಲ ಗೌರವ ತರುವಂಥದ್ದಲ್ಲ. ಪ್ರಧಾನಿ ಮೋದಿ, ಭಾಜಪ ಅಧ್ಯಕ್ಷ ಅಮಿತ್ ಷಾ, ಕಾಂಗ್ರೆಸ್ ಅಧ್ಯಕ್ಷ ರಾಹುಲ್ ಗಾಂಧಿ, ಯುಪಿಎ ಅಧ್ಯಕ್ಷೆ ಸೋನಿಯ ಗಾಂಧಿ, ಮತ್ತಿತರ ನಾಯಕರುಗಳು ಪ್ರಚಾರದಲ್ಲಿ ತೊಡಗಿಕೊಂಡಿದ್ದುದು ಅಚ್ಚರಿಯ ಸಂಗತಿ ಏನಲ್ಲ. ಭಾಜಪ ಅಂತೂ 'ಕಾಂಗ್ರೆಸ್ ಮುಕ್ತ ಭಾರತ' ಗುರಿ ತಲಪಲು ಹೊರಟು, ದಕ್ಷಿಣ ಭಾರತದಲ್ಲಿ ಅಧಿಕಾರವನ್ನು ಸ್ಥಾಪಿಸಲು ಕರ್ನಾಟಕವನ್ನು ಮೆಟ್ಟಿಲಾಗಿ ಬಳಸಿಕೊಳ್ಳಲು ಮುಂದಾಗಿತ್ತು. ಅಧಿಕಾರ ಗ್ರಹಣಕ್ಕೆ ಮೂರೇ ಮೆಟ್ಟಿಲು ಎಂದೆಣಿಸಿತ್ತು. ಆದರೆ ಆದದ್ದೇ ಬೇರೆ.

ಆಯ್ಕೆಯಾಗಿರುವ ಎಮ್ಮೆಲ್ಲೆಗಳಲ್ಲಿ ಒಂದು ಅಂದಾಜಿನ ಪ್ರಕಾರ ಕೋಟ್ಯಾಧೀಶರುಗಳೇ ಅಧಿಕ, ಮತ್ತೆ ಕ್ರಿಮಿನಲ್ ಮೊಕದ್ದಮೆಗಳನ್ನು ಎದುರಿಸುತ್ತಿರುವವರು ಸಾಕಷ್ಟು ದೊಡ್ಡ ಸಂಖ್ಯೆಯಲ್ಲೇ ಇದ್ದಾರೆ. ಅಂದ ಮೇಲೆ ನಮ್ಮ ಶಾಸಕರು ಯಾವ ಮಟ್ಟದವರು ಎಂಬುದು ಗೊತ್ತಾಗುತ್ತದೆ. ಹಾಗಾಗಿಯೇ ಅವರು ಒಂದು ರೀತಿಯಲ್ಲಿ ನಿಷ್ಠೆಯೇ ಇಲ್ಲದ ಮಾರಾಟದ ಸರಕುಗಳು, ಇನ್ನೊಂದು ಬಗೆಯಲ್ಲಿ ಅಧಿಕಾರದಾಹಿಗಳು ಹಾಗೂ ಭ್ರಷ್ಟಾಚಾರಿಗಳು ಆಗಿರುವುದರಲ್ಲಿ ವಿಸ್ಮಯವೇನಿಲ್ಲ. ಚುನಾವಣೆಗಳ ನಂತರದ ವಿದ್ಯಮಾನಗಳು ಅದನ್ನು ಎತ್ತಿತೋರಿಸುತ್ತವೆ. ಚುನಾವಣೆಗೆ ಮುನ್ನವೇ ಈ ಸಲ ಕರ್ನಾಟಕದಲ್ಲಿ ಅತಂತ್ರ ಸ್ಥಿತಿ ಉಂಟಾಗುವುದು ಖಚಿತ, ಯಾವ ಪಕ್ಷಕ್ಕೂ ಬಹುಮತ ದೊರಕದೇ ಹೋಗುವುದು ಎನ್ನುವುದು ತಿಳಿದಿತ್ತು. ಜಾತ್ಯತೀತ ಜನತಾದಳ ಯಾವ ಕಡೆ ವಾಲುತ್ತದೋ ಅದೇ ಅಧಿಕಾರಕ್ಕೆ ಎನ್ನುವುದೂ ಗೊತ್ತಾಗಿತ್ತು. ಆದದ್ದೂ ಹಾಗೆಯೆ.

ಚುನಾವಣೆಗೆ ಮುಂಚೆಯೇ ಕಾಂಗ್ರೆಸ್ – ಜೆಡಿಎಸ್ ಹೊಂದಾಣಿಕೆಯಾಗಿದ್ದಲ್ಲಿ ಭಾಜಪಗೆ ಈಗ ಪಡೆದುಕೊಂಡಿರುವುದರಲ್ಲಿ ಅರ್ಧದಷ್ಟು ಸ್ಥಾನಗಳು ಲಭಿಸುತ್ತಿದ್ದವು. ಫಲಿತಾಂಶಗಳು ಹೊರಬಿದ್ದಾಗ ಬಿದ್ದ ಮತಗಳನ್ನು ಪರಿಶೀಲಿಸಿದರೆ ಅದು ವೇದ್ಯವಾಗುತ್ತದೆ. ಕೆಟ್ಟ ಮೇಲೆ ಬುದ್ಧಿ ಬಂತು ಅನ್ನುವ ಹಾಗೆ ಈಗ ಹೊಂದಾಣಿಕೆಯಾಗಿ ಭಾಜಪವನ್ನು ದೂರ ಇರಿಸಿದ್ದು ಕರ್ನಾಟಕದ ಜನತೆಗೆ ಒಳ್ಳೆಯದೇ ಆಯಿತು. ಮುಂಬರುವ ಲೋಕಸಭೆ ಚುನಾವಣೆಯಲ್ಲೂ ಸೀಟುಗಳ ಹಂಚಿಕೆ ಒಪ್ಪಂದವಾಗುತ್ತಿರುವುದು ಸ್ವಾಗತಾರ್ಹ. ಯಡಿಯೂರಪ್ಪನವರ ಎಲ್ಲ ೨೮ ಸ್ಥಾನಗಳ ಕನಸು ಇನ್ನೊಮ್ಮೆ ಭಗ್ನವಾಗುವುದರಲ್ಲಿ ಸಂಶಯವಿಲ್ಲ. ಉಳಿದ ರಾಜಕೀಯ ಬೆಳವಣಿಗೆಗಳೆಲ್ಲ ಸುದ್ದಿಗೆ ಗ್ರಾಸವಾದವು, ಮಾಧ್ಯಮಗಳಲ್ಲಿ ಒಣ ಚರ್ಚೆಗೆ ಆಹಾರವಾದವು, ಅಷ್ಟೆ. ಅವೆಲ್ಲ ರಾಜ್ಯದ ರಾಜಕೀಯ ಎಷ್ಟು ಕನಿಷ್ಠ ಮಟ್ಟಕ್ಕೆ ಇಳಿಯಬಹುದು ಎಂಬುದನ್ನು ವ್ಯಕ್ತಪಡಿಸುತ್ತವೆ.

ಇನ್ನು ರಾಜ್ಯಪಾಲ ವಜುಭಾಯಿ ವಾಲ ಅವರ ನಡವಳಿಕೆಯ ಕುರಿತು ಸಾಕಷ್ಟು ಚರ್ಚೆಯಾಗಿದೆ. ಆತ ಕಾಂಗ್ರೆಸ್ಸಿನವರು ಮಾಡದೇ ಇರುವ ಪಾಪವನ್ನೇನೂ ಮಾಡಿಲ್ಲ. ಹಿಂದಿನ ರಾಜ್ಯಪಾಲರುಗಳು ಕಾಂಗ್ರೆಸ್‌ನ ಏಜೆಂಟರಾಗಿದ್ದರೆ, ಈಗಿನ ರಾಜ್ಯಪಾಲರು ಭಾಜಪ ತಾಳಕ್ಕೆ ಹೆಜ್ಜೆ ಹಾಕುವವರು, ಕಾಂಗ್ರೆಸ್ಸಿನವರು ಅನುಸರಿಸಿದ ಮಾರ್ಗವನ್ನೇ ಮೋದಿ – ಷಾ ಪಾಲಿಸಿದ್ದಾರೆ. ಇದರಲ್ಲಿ ಹೊಸದೇನಿಲ್ಲ. ೧೯೫೨ರಲ್ಲಿ ಚುನಾವಣೆ ಆದ ಮೇಲೆ ಮದರಾಸು ಪ್ರಾಂತದಲ್ಲಿ ಸಂಭವಿಸಿದ ಬೆಳವಣಿಗೆಗಳನ್ನು ನೆನಪು



ಮಾಡಿಕೊಂಡರೆ ಸಾಕು. ಆಗಿನಿಂದಲೂ ಕಾಂಗ್ರೆಸ್‌ನವರು ರಾಜ್ಯಪಾಲರ ಹುದ್ದೆಯನ್ನು ದುರುಪಯೋಗಪಡಿಸಿಕೊಂಡಿದ್ದಾರೆ. ಈಗ ಭಾಜಪ ಅದೇ ತಿರುಮಂತ್ರ ಬಳಸಿದಾಗ ಬೊಬ್ಬೆ. ಗೋವಾ, ಮಣಿಪುರ, ಮೇಘಾಲಯದ ಘಟನೆಗಳಿಂದ ಕಾಂಗ್ರೆಸ್ ಏನೂ ಪಾಠ ಕಲಿತ ಹಾಗಿಲ್ಲ. ಎರಡೂವರೆ ದಿನ ಮುಖ್ಯಮಂತ್ರಿಯಾಗಿ ಮಾಜಿಯಾದದ್ದೇ ಯಡಿಯೂರಪ್ಪನವರ ಪುಣ್ಯ. ಸೋಲಿನ ಮುಖಭಂಗ ತಪ್ಪಿಸಿಕೊಳ್ಳಲು ರಾಜೀನಾಮೆ ನೀಡಿದ ಭಾಜಪ ನಾಯಕ. ಸ್ಪೀಕರ್ ಚುನಾವಣೆ ಸಮಯದಲ್ಲೂ ಕೊನೇಘಳಿಗೆಯಲ್ಲಿ ಸ್ಪರ್ಧೆಯನ್ನು ಹಿಂತೆಗೆದುಕೊಂಡರು.

ರೈತರು, ದೇವರ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸುವ ಎಮ್ಮೆಲ್ಲೆಗಳು ಯಾವ ಸಿದ್ಧಾಂತಕ್ಕೂ ಬದ್ಧರಾಗದೇ ಇರುವುದನ್ನು ನೋಡಿದ್ದೇವೆ. ಅದಕ್ಕಾಗಿ ಹುಟ್ಟಿಕೊಂಡದ್ದೇ 'ರಿಸಾರ್ಟ್ ರಾಜಕಾರಣ'. ಇದಕ್ಕೂ ಮೇಲ್ಪಂಕ್ತಿ ಕಾಂಗ್ರೆಸ್ಸಿನದೆ. ಹತ್ತು ಹದಿನೈದು ದಿನಗಳ ಕಾಲ ಕೋಟಿಗಟ್ಟಲೆ ಖರ್ಚು ಮಾಡಿ ಶಾಸಕರನ್ನು ಕಾಪಾಡಿಕೊಳ್ಳುವುದು ಇದೇ ಮೊದಲ ಸಲವೇನಲ್ಲ. ಹಿಂದೆಯೂ ಇಂಥ ಪ್ರಕರಣಗಳು ಜರುಗಿವೆ. ಇದರಿಂದ ಶಾಸಕರ ಪಕ್ಷ ನಿಷ್ಠೆ ಏನು ಎಂಬುದು ಗೊತ್ತಾಗುತ್ತದೆ. ಎಲ್ಲ ಬೂರ್ಷ್ವಾ ಪಾರ್ಟಿಗಳ ಹಣೆಬರಹವೂ ಇಷ್ಟೆ. ಪಕ್ಷಾಂತರ ಕಾಯಿದೆ ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ. ಅಧಿಕಾರ, ಹಣಗಳಿಕೆಯೇ ಪ್ರಧಾನವಾದಾಗ ಇಂಥವೆಲ್ಲ ನಿರೀಕ್ಷಿತವೆ. ಎಡಪಕ್ಷಗಳಲ್ಲಿ ಇನ್ನೂ ಸೈದ್ಧಾಂತಿಕ ಮೌಲ್ಯಗಳು ಬತ್ತಿಲ್ಲವಾದ್ದರಿಂದ ಖರೀದಿಗೆ ಲಭ್ಯವಿಲ್ಲ. ಎಮ್ಮೆಲ್ಲೆಗಳನ್ನು ಖರೀದಿಸಲು ನೂರಾರು ಕೋಟಿ ರೂಗಳ ಆಮಿಷ, ಎಲ್ಲಿಗೆ ಬಂತು ರಾಜಕೀಯ?

ಭಾರತೀಯ ಜನತಾಪಕ್ಷದ 'ಹಿಂದುತ್ವ' ಪ್ರತಿಪಾದನೆಯನ್ನು ಈಗ ಮುಖ್ಯಮಂತ್ರಿ ಸ್ಥಾನದಲ್ಲಿರುವ ಕುಮಾರಸ್ವಾಮಿ ಎಂದೂ ತಳ್ಳಿಹಾಕಿದವರಲ್ಲ. ಭಾಜಪದೊಂದಿಗೆ ಕೈ ಜೋಡಿಸಿ ಮುಖ್ಯಮಂತ್ರಿ ಸ್ಥಾನ ಮೊದಲ ಸಲ ಅನುಭವಿಸಿದವರೂ ಅವರೆ. ಮಾತು ಉಳಿಸಿಕೊಳ್ಳದೆ, ಭಾಜಪ ಅಧಿಕಾರ ಗ್ರಹಣಕ್ಕೆ ಅನುವು ಮಾಡಿಕೊಟ್ಟವರೂ ಅವರೆ. 'ಸೆಕ್ಯುಲರ್' ಎಂದು ಕರೆದುಕೊಳ್ಳುತ್ತಿರುವ ಅಪ್ಪ-ಮಗನ ಪಕ್ಷದ ಗುರಿ ಯಾವತ್ತೂ ಅಧಿಕಾರದತ್ತ, ಲಾಭದಾಯಕವಾದ ರಾಜಕಾರಣದತ್ತ. ಈಗ ಕುಮಾರಸ್ವಾಮಿ ಪಾಪಪರಿಹಾರಕ್ಕಾಗಿ, ಪಿತೃವಾಕ್ಯ ಪರಿಪಾಲನೆಗಾಗಿ ಕಾಂಗ್ರೆಸ್ಸಿನೊಂದಿಗೆ ಕೈ ಜೋಡಿಸಿದ್ದಾರೆ. ಇದನ್ನು ಅವರೇನೂ ಮುಚ್ಚುಮರೆಯಾಗಿಟ್ಟಿಲ್ಲ, ಬಹಿರಂಗವಾಗಿಯೇ ಹೇಳಿಕೊಂಡಿದ್ದಾರೆ. ಕಡಿಮೆ ಸ್ಥಾನ ಪಡೆದಿದ್ದರೂ ಮುಖ್ಯಮಂತ್ರಿ ಪಟ್ಟ ಗಿಟ್ಟಿಸಿಕೊಂಡಿದ್ದಾರೆ. ಕಾಂಗ್ರೆಸ್ಸಿನದು ಯಾವತ್ತೂ ಸಂದರ್ಭಸಾಧಕತನದ ನೀತಿ. ಜೆಡಿಎಸ್‌ಗಿಂತ ಎರಡು ಪಟ್ಟಿಗೂ ಹೆಚ್ಚು ಸ್ಥಾನಗಳನ್ನು ಪಡೆದುಕೊಂಡಿದ್ದರೂ ಮುಖ್ಯಮಂತ್ರಿ ಪಟ್ಟ ಕಾಂಗ್ರೆಸ್ ಬಿಟ್ಟುಕೊಟ್ಟಿತು, ಉಪಮುಖ್ಯಮಂತ್ರಿ ಸ್ಥಾನಕ್ಕೆ ಪರಮೇಶ್ವರ ತೃಪ್ತಿಪಟ್ಟುಕೊಳ್ಳಬೇಕಾಯಿತು.

ಒಂದು ಮುಖ್ಯವಾದ ಬೆಳವಣಿಗೆ ಎಂದರೆ ಕರ್ನಾಟಕ ಪ್ರತಿ ಪಕ್ಷಗಳ ಸಂಭವನೀಯ ಐಕ್ಯತೆಗೆ ವೇದಿಕೆಯಾದ್ದು. ಕುಮಾರಸ್ವಾಮಿ ಮತ್ತು ಪರಮೇಶ್ವರ ಇವರ ಪ್ರಮಾಣವಚನ ಸಮಾರಂಭದಲ್ಲಿ ಪ್ರತಿಪಕ್ಷಗಳ ನಾಯಕರುಗಳೆಲ್ಲ ವೇದಿಕೆ ಹಂಚಿಕೊಂಡು ಐಕ್ಯತೆ ಪ್ರದರ್ಶಿಸಿದ್ದು. ಈ ಸಮಾಗಮ ಮೋದಿ ಸರಕಾರಕ್ಕೆ ಅಗತ್ಯವಾದ ಸಂದೇಶವನ್ನು ರವಾನಿಸಿದೆ. ಭಾಜಪ ನಾಯಕರುಗಳು ಕೂಡ ಈ ಬೆಳವಣಿಗೆಯನ್ನು ಗಂಭೀರವಾಗಿ ಪರಿಗಣಿಸಿದ್ದಾರೆ. ೨೦೧೯ರ ಲೋಕಸಭಾ ಚುನಾವಣೆಗಳಿಗೆ ಇನ್ನೂ ಸಮಯವಿದೆ. ನಾಲ್ಕು ವರ್ಷಗಳಲ್ಲಿ ಮೋದಿ ಸರಕಾರದ ಸಾಧನೆಗಳು ಅಷ್ಟಕ್ಕಷ್ಟೆ. ಪ್ರತಿ ಪಕ್ಷಗಳ ಮಧ್ಯೆ ಸೀಟುಗಳ ಹಂಚಿಕೆ, ಹೊಂದಾಣಿಕೆ ಬಹುಮುಖ್ಯವಾದ ಪ್ರಶ್ನೆ. ಅದು ಬಗೆಹರಿದರೆ ಭಾಜಪಗೆ ಸವಾಲು. ದೇವೇಗೌಡರು ಮತ್ತೊಮ್ಮೆ ಪ್ರಧಾನಿಯಾಗುವ ಕನಸು ಕಾಣತೊಡಗಿದ್ದಾರೆ. ಇನ್ನೂ ಯಾರ್‍ಯಾರು ಪ್ರಧಾನಿಯಾಗಲು ಬಯಸುತ್ತಿದ್ದಾರೋ? ಎಡಪಕ್ಷಗಳೂ ಸೇರಿ ಎಲ್ಲ ಪ್ರತಿ ಪಕ್ಷಗಳೂ ಒಂದಾದರೆ ಒಳ್ಳೆಯದೇ. ಕನಿಷ್ಠ ಕಾರ್ಯಕ್ರಮವೊಂದರ ಆಧಾರ ಮುಖ್ಯವಾಗುತ್ತದೆ. ಮುಂದಿನ ದಾರಿ ಯಾವುದು, ಬೆಳವಣಿಗೆ ಏನು ಎಂಬುದನ್ನು ಈಗಲೇ ಹೇಳುವ ಹಾಗೆ ಇಲ್ಲ. ಅಧಿಕಾರ ಉಳಿಸಿಕೊಳ್ಳಲು ಭಾಜಪ ಏನು ಬೇಕಾದರೂ ಮಾಡಲು ಸಿದ್ಧ.

ಕರ್ನಾಟಕ ರಾಜ್ಯದ ಮಟ್ಟಿಗೆ ಈಗ ಸಮ್ಮಿಶ್ರ ಸರಕಾರ. ಮಂತ್ರಿಗಿರಿಗಾಗಿ ಕಚ್ಚಾಟ ನಡೆದಿದೆ, ಅತೃಪ್ತಿಯೂ ಹೊಗೆಯಾಡುತ್ತಿದೆ. ತೇಪೆ ಹಾಕಿ ಸಮಜಾಯಿಷಿ ಮಾಡುವುದಕ್ಕೆ ಪ್ರಯತ್ನ ನಡೆದಿದೆ. ಪ್ರತಿಸಲ ಸಂಪುಟ ರಚನೆಯಾದಾಗ ಇದೆಲ್ಲ ಇದ್ದದ್ದೆ. ಈ ಸರಕಾರ ಶೀಘ್ರವಾಗಿ ಬಿದ್ದುಹೋಗುತ್ತದೆ ಎನ್ನುವುದು ಯಡಿಯೂರಪ್ಪನವರ ಲೆಕ್ಕಾಚಾರ. ಲೋಕಸಭಾ ಚುನಾವಣೆಯವರೆಗೆ ಮೈತ್ರಿ ಸರಕಾರ ಅಸ್ತಿತ್ವದಲ್ಲಿರುವುದು ಖಚಿತ. ಅನಂತರವೂ ಅನಿವಾರ್ಯ.

ಸಿ. ಆರ್. ಕೃಷ್ಣರಾವ್
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೮೫

# ಒಡೆದು ಮೊಸರಾದ ದೇಶದಲ್ಲಿ



(೧)
ಆಜಾನ್ ಕಂಪನದಲಿ
ಚೂರಾದ ಕನ್ನಡಿ ಚಂದಿರನು;
ಸುಪ್ರಭಾತದ ಸ್ಖಲಿತ ಸೂರ್ಯ ಸ್ವಪ್ನದಲಿ !

ಹದ್ದಿನ ಮೈಗೆ ಹಾವಿನ ಮುಖ
ಇದ್ದಿಲಿಗೆ ಪೌಡರು ಬಳಿವ ಕರ್ಮ
ಸಾವು ಇಲ್ಲಿ ಸದಾ ಜೀವಂತ
ಮತ ಪೆಟ್ಟಿಗೆಯಲಿ...

(೨)
ಬೊಜ್ಜಿನ ನೊರೆಗಡಲಲಿ
ತೇಲುವ ತೊಟ್ಟಿಲು ದೇವರ ಹೆಣ !
ಮಾರು ಕರಕಟ್ಟೆಗೆ ಸ್ಥಳಾಂತರಗೊಂಡ
ಚರ್ಚು, ಮಸೀದಿ, ಮಂದಿರಗಳು

ಕರಡಿ ಕುಣಿತ, ಗೂಳಿಯಬ್ಬರಕೆ
ಕಾಮಗಣ್ಣಿನ ಕ್ಯಾಮರಾ ಕಾವಲು
ಕ್ಷಣದ ಪೈರನು ಸೂರೆಗೈವ ತೇವಲು

(೩)
ಒಡೆದ ಬಣ್ಣಗಳಲ್ಲಿ
ಕುಸುರಿಗೊಂಡ ಮುಖವಾಡದವರು
ಇಲ್ಲಿ ಸತ್ಯದ ನೇತಾರರು

ಸಾವಿನ ಸಿಂಹಾಸನದಲಿ ಬಂಜೆಭೂಮಿ
'ಈ ಸಂಜೆ ಲೋಕವನು ಬೆಳಗಲು
ಬೆಳ್ಳಕ್ಕಿಗಳ ಸಾಲು' – ಸಾಕೆಂದು
ಕಾಗೆಗಳು ಸತ್ಯಾಗ್ರಹ ಕೂತಿವೆ !

ಇರುಳುಗುರುಡರ ಹಗಲುಗನಸಿಗೆ !
ಅಚ್ಚೇದಿನ್ ಆಯೇಂಗೆ

**ಮಹಾಂತೇಶ ಪಾಟೀಲ**
ಜ್ಞಾನಕಾವೇರಿ ಸ್ನಾತಕೋತ್ತರ ಕೇಂದ್ರ, ಚಿಕ್ಕಅಳುವಾರ
ಕುಶಾಲನಗರ ಹೋಬಳಿ, ಸೋಮವಾರಪೇಟೆ ತಾ., ಕೊಡಗು ಜಿ. – ೫೭೧ ೨೩೨

ಜಿ. ಎನ್. ಮೋಹನ್

# ಚಾನಲ್‌ಗಳಿಗೆ ಈಗ ಅಗಾಧ ಹಸಿವು

**ಮೊ**ನ್ನೆ ಒಂದು ಮಾಧ್ಯಮ ಸಂಕಿರಣಕ್ಕೆ ಹೋಗಬೇಕಾಗಿತ್ತು. ಪತ್ರಿಕೆಗಳ ಪ್ರಸಾರ ಸಂಖ್ಯೆಯ ಸ್ಪರ್ಧೆ, ಚಾನಲ್‌ಗಳ ಟಿ. ಆರ್. ಪಿ. ಅಟಾಟೋಪ, ರೇಡಿಯೋ ಚಾನಲ್‌ಗಳ ಪಟ್ ಪಟಾಕಿ ಮಾತಿನ ನಡುವೆ 'ಅಭಿವೃದ್ಧಿ ಪತ್ರಿಕೋದ್ಯಮ'ಕ್ಕೆ ಏನಾದರೂ ಜಾಗ ಉಂಟೇ ಎಂದು ಹುಡುಕಿ ನೋಡುವ ಪ್ರಯತ್ನ ಅದು.

ನನ್ನದು ಹೇಳಿ ಕೇಳಿ ಎಲೆಕ್ಟ್ರಾನಿಕ್ ಮಾಧ್ಯಮದ ಪ್ರಪಂಚ. ಇವತ್ತು ನಾಲ್ಕು ಜನ ಸೇರಿದರೆ ಚಾನಲ್‌ಗಳು, ಅದು ಕೊಡುತ್ತಿರುವ ಕಾರ್ಯಕ್ರಮಗಳು ಪ್ರಸ್ತಾಪವಾಗದೆ ಮಾತು ಮುಗಿಯುವುದಿಲ್ಲ. ಚಾನಲ್‌ಗಳಲ್ಲಿನ ಭಯ ಬಿತ್ತುವ, ಇನ್ನಷ್ಟು ಮೂಢರನ್ನಾಗಿಸುವ, ಅತಿ ರಂಜಿಸುವ ಗುಣವೇ ಈ ಚರ್ಚೆಗೆ ಕಾರಣವಾಗಿದೆ. ಯಾಕೆ ಹೀಗಾಯ್ತು ? ಸುದ್ದಿಗಾಗಿಯೇ ಮೀಸಲಾದ ಚಾನಲ್‌ಗಳು ಬರುವವರೆಗೆ ಇಲ್ಲದ ಒಂದು ಅಸಹನೆ ಆನಂತರ ಕಟ್ಟೆಯೊಡೆಯಲು ಏನು ಕಾರಣ ? ನ್ಯೂಸ್ ಚಾನಲ್‌ಗಳಲ್ಲಿ ಹಾಗಾದರೆ ಸಮಾಜಮುಖಿಯಾದದ್ದು ಏನೂ ಬರುತ್ತಿಲ್ಲವೇ ? ಸಮಾಜದ ಒಳಿತು ಚಾನಲ್‌ಗಳಿಗೆ ಕಾಣುತ್ತಲೇ ಇಲ್ಲವೇ ಎಂಬ ಪ್ರಶ್ನೆ ಹರಡಿಕೊಂಡು ಕುಳಿತೆ.

ಆಗ ಯಾಕೋ ಈ ಹಿಂದೆ ಹೀಗೇ ನೆಟ್ ಲೋಕದಲ್ಲಿ ವಿಹರಿಸುತ್ತಿದ್ದಾಗ ಗಮನಕ್ಕೆ ಬಂದ ಎರಡು ಕಾಯಿಲೆಗಳ ನೆನಪಾಯಿತು. ಆ ಕಾಯಿಲೆಗಳಿಗೂ ಚಾನಲ್‌ನ ಇಂದಿನ ಸ್ಥಿತಿಗೂ ಏನಾದರೂ ಸಂಬಂಧವಿದೆಯಾ ಎಂದು ನಾನು ಹುಡುಕುತ್ತಾ ಹೋದೆ. ಆ ಕಾಯಿಲೆಯಲ್ಲಿ ಒಂದು Anosmia. ಇದು ವಾಸನೆಯೇ ಗೊತ್ತಾಗದ ಕಾಯಿಲೆ. ಅದು ಪರಿಮಳವಿರಲಿ, ದುರ್ನಾತವಿರಲಿ ಏನೇನೂ ಗೊತ್ತಾಗದ ಕಾಯಿಲೆ. ಇಂತಹ ಕಾಯಿಲೆಯೇನಾದರೂ ನಮ್ಮ ಚಾನಲ್‌ಗಳಿಗೆ




ಹರಡಿಕೊಂಡಿದೆಯೇ? ಪತ್ರಿಕೋದ್ಯಮದ ತರಗತಿಗಳಲ್ಲಿ ಮೊದಲು ಕಲಿಸುವ ಪಾಠವೇ ಸುದ್ದಿ ನಾಸಿಕದ ಬಗ್ಗೆ. Nose for the New. ಸುದ್ದಿ ಎಲ್ಲಿದ್ದರೂ ಅದರ ವಾಸನೆ ಹಿಡಿಯುವ ಶಕ್ತಿ ಪತ್ರಕರ್ತನ ಮೂಗಿಗಿರಬೇಕು. ಆದರೆ ಮೂಗಿಗೆ ಏನಾದರೂ ಈ ವಾಸನೆ ಹಿಡಿಯ ಲಾಗದ ರೋಗ ಹತ್ತಿದೆಯೇ ?

ನಾನು ಗುಲ್ಬರ್ಗದಲ್ಲಿದ್ದಾಗ ಒಂದು ದುರಂತವನ್ನು ಗಮನಿಸಿದೆ. ಯುಗಾದಿ ಎಂಬುದು ಅಲ್ಲಿ ಸಂಭ್ರಮವಲ್ಲ, ಸಾವಿನ ಕುಣಿಕೆಯಾಗಿತ್ತು. ಯುಗಾದಿ ಹತ್ತಿರ ಬರುತ್ತಿದ್ದಂತೆ ಗುಲ್ಬರ್ಗದ ಹಳ್ಳಿಗಳಲ್ಲಿ ಸಾಲು ಸಾಲು ಆತ್ಮಹತ್ಯೆಗಳಾಗುತ್ತಿದ್ದವು. ಏಕೆ ಹೀಗೆ ? ಎಂದು ನಾನು ಬೆಂಬತ್ತಿದಾಗ ಅನಾವರಣಗೊಂಡದ್ದು ಕೃಷಿಕ ಜಗತ್ತಿನ ದಾರುಣ ಕಥೆ. ಒಳ್ಳೆಯ ಫಸಲು, ನೆಮ್ಮದಿಯ ಜೀವನ ಬಯಸುವ ರೈತ ಆ ಕಾರಣಕ್ಕಾಗಿ ಪಡೆದ ಸಾಲವನ್ನು ಬಡ್ಡಿ ಸಮೇತ ತುಂಬಿಸಿಕೊಡಬೇಕಾಗಿತ್ತು. ಇದಕ್ಕೆ ಗಡುವು ಯುಗಾದಿ. ಇಲ್ಲದ ಮಳೆ, ಕಳಪೆ ಕ್ರಿಮಿನಾಶಕ, ಜೀವ ಕಳೆದುಕೊಂಡ ಬೀಜ ರೈತನ ನೆಮ್ಮದಿ ಯನ್ನು ಹೊಸಕಿಹಾಕಿಬಿಡುತ್ತಿತ್ತು. ಯುಗಾದಿ ಇನ್ನೇನು ಹತ್ತಿರ ಬಂತು ಎನ್ನುವಾಗ ಸಾಲ ತೀರಿಸಲಾಗದ ಭಯದಲ್ಲಿ ಆತ ಅದೇ ಕ್ರಿಮಿನಾಶಕಕ್ಕೆ ಶರಣಾಗಿಬಿಡುತ್ತಿದ್ದ. ಇಂತಹ ಹತ್ತು ಹಲವಾರು ಕಥೆಗಳು ಗ್ರಾಮೀಣ ಕರ್ನಾಟಕದಲ್ಲಿ ಹರಡಿ ಕೂತಿವೆ. ಗ್ರಾಮೀಣ ಭಾಗದ ಮಾತು ಇರಲಿ ನಗರಗಳಲ್ಲೇನಾದರೂ ಸಾವಿನ ಕಥೆಗಳಿಗೆ ಕಡಿಮೆ ಇವೆಯೇ ?

ಇದನ್ನೇ ಸಾಯಿನಾಥ್ Sunshine ಮತ್ತು Sobbing stories ಅಂತ ಕರೆದರು. ಅರ್ಥಾತ್ ಜಗ ಮಗ ಹೊಳೆಯುವ ಮತ್ತು ಅಳುಬುರುಕ ಸುದ್ದಿಗಳು ಅಂತ. ಇಂದು ಮಾಧ್ಯಮಕ್ಕೆ ಬೇಕಿರುವುದು ಜಗಮಗ ಹೊಳೆಯುವ ಸುದ್ದಿಗಳು ಮಾತ್ರ. ಯುಗಾದಿ ಸಾವಿನಂತಹ ಅಳುಬುರುಕ ಸುದ್ದಿಗಳಿಂದ ಟಿ. ಆರ್. ಪಿ. ಬರುತ್ತದೆಯೇ ಎನ್ನುವ ಪ್ರಶ್ನೆ ತಕ್ಷಣವೇ ಎದ್ದು ನಿಲ್ಲುತ್ತದೆ. ಆಗಲೇ ನನಗೆ ಇನ್ನೊಂದು ಕಾಯಿಲೆಯ ನೆನಪಾದದ್ದು. Gluttomy Gene ಅಂತ

# ಇದು ‘ಮಂಗಳೂರು ಸಮಾಚಾರ’

ಮಂಗಳೂರು ಸಮಾಚಾರ ಕನ್ನಡದ ಮೊದಲ ಪತ್ರಿಕೆ ೧೮೪೩ ಜುಲೈ ೧ರಂದು ಇದರ ಮೊದಲ ಸಂಚಿಕೆ ಪ್ರಾರಂಭವಾಯಿತು. ಇದಕ್ಕಾಗಿಯೇ ಕರ್ನಾಟಕದಲ್ಲಿ ಪತ್ರಿಕಾ ದಿನವನ್ನು ಜುಲೈ ಒಂದರಂದು ಆಚರಿಸುತ್ತಾರೆ. ಈ ಪತ್ರಿಕೆಯು ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಲ್ಲಿ ಕಲ್ಲಚ್ಚು ಮುದ್ರಣದಲ್ಲಿ ಆಯಿತು. ಕೆಲವು ತಿಂಗಳುಗಳ ಕಾಲ ಇಲ್ಲಿಯೇ ಮುದ್ರಣಗೊಳ್ಳುತ್ತಿದ್ದ ಈ ಪತ್ರಿಕೆಗೆ ಹೆಚ್ಚಿನ ಬೇಡಿಕೆ ಬಂದದ್ದರಿಂದ ಬಳ್ಳಾರಿಗೆ ಸ್ಥಳಾಂತರಿಸಲ್ಪಟ್ಟು ‘ಕಂನಡ ಸಮಾಚಾರ’ವೆಂಬ ಹೆಸರಿನಿಂದ ಲಂಡನ್ ಮಿಶನ್ ಪ್ರೆಸ್ನಲ್ಲಿ ಮುದ್ರಣಗೊಳ್ಳುತ್ತಿತ್ತು. ಆಗ ಮಂಗಳೂರಿನಲ್ಲಿ ಕಲ್ಲಚ್ಚು ಮುದ್ರಣದ ವ್ಯವಸ್ಥೆ ಮಾತ್ರ ಇತ್ತು. ೧೮೧೭ರ ಸುಮಾರಿಗೆ ಕನ್ನಡಕ್ಕೆ ಮತ್ತು ತೆಲುಗು ಭಾಷೆಯ ಮುದ್ರಣಕ್ಕೆ ಒಂದೇ ಅಚ್ಚುಮೊಳೆಗಳನ್ನು ಬಳಸುತ್ತಿದ್ದರು. ಬಳ್ಳಾರಿ ಲಂಡನ್ ಮಿಶನ್ ಪ್ರೆಸ್‌ನಲ್ಲಿ ಈ ಮುದ್ರಣ ನಡೆಯುತ್ತಿತ್ತು.

೧೮೪೩ ಜುಲೈ ೧ರಂದು ಕಲ್ಲಚ್ಚಿನಲ್ಲಿ ಮುದ್ರಣಗೊಂಡ ‘ಮಂಗಳೂರು ಸಮಾಚಾರ’ ಪತ್ರಿಕೆಗೆ ಇಂದಿಗೆ ೧೭೫ ವರ್ಷ ಸಂದವು. ಮದ್ರಾಸ್ ಆಧಿಪತ್ಯಕ್ಕೆ ಸೇರಿದ ತುಳುನಾಡು ಆಂಗ್ಲರ ಆಳ್ವಿಕೆಯ ಕಾಲದಲ್ಲಿ ವಿದ್ಯೆ, ಕೈಗಾರಿಕೆ, ವ್ಯಾಪಾರ, ಬೇಸಾಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದರೂ ೧೮೯೬ರ ತನಕವೂ ಪತ್ರಿಕೋದ್ಯಮಕ್ಕೆ ಹೆಜ್ಜೆ ಇಟ್ಟಿರುವುದು ಕಂಡುಬರುವುದಿಲ್ಲ. ೧೮೩೪ರಲ್ಲಿ ಭಾರತಕ್ಕೆ ಬಂದ ಬಾಸೆಲ್ ಮಿಶನರಿಗಳು ೧೮೪೧ರಲ್ಲಿ ಸ್ಥಾಪಿಸಿದ ತುಳುನಾಡಿನ ಮೊದಲ ಮುದ್ರಣಾಲಯವಾದ ಬಾಸೆಲ್ ಮಿಶನ್ ಪ್ರೆಸ್‌ನಲ್ಲಿ ೧೮೪೩ರಲ್ಲಿ ಮೊದಲ ಕನ್ನಡ ಪತ್ರಿಕೆ ‘ಮಂಗಳೂರು ಸಮಾಚಾರ’ ಮುದ್ರಣಗೊಂಡಿತು.

ಮಿಶನರಿಗಳು ಈ ಪತ್ರಿಕೆಯನ್ನು ತಮ್ಮ ಮತ ಪ್ರಚಾರಕ್ಕಾಗಿ ಬಳಸಿಕೊಳ್ಳಬಹುದಾಗಿತ್ತು. ಹಾಗೆ ಮಾಡದೇ ಇದ್ದುದರಿಂದ ಈ ಪತ್ರಿಕೆಯು ಜಾತ್ಯತೀತ ಪತ್ರಿಕೆಯಾಗಿ ನಿಂತಿತು. ಕ್ರೈಸ್ತ ಮತದ ವಿಚಾರಗಳು ಆ ಪತ್ರಿಕೆಯಲ್ಲಿ ಬಳಕೆಯಾದ ಸಂದರ್ಭಗಳೆಂದರೆ ದಾಸರ ಪದಗಳ ವಿವರಗಳನ್ನು ಕೊಡುತ್ತಾ ಅದಕ್ಕೆ ಸಮನಾದ ಬೈಬಲ್ ಉಕ್ತಿಗಳನ್ನು ನೀಡಿರುವುದು. ೧೮೫೦ರಲ್ಲಿ ಹೆರ್ಮನ್ ಮ್ಯೋಗ್ಲಿಂಗ್ ಸಂಪಾದಿಸಿದ ದಾಸರ ಪದಗಳು ಪುಸ್ತಕ ರೂಪದಲ್ಲಿ ಕಲ್ಲಚ್ಚು ಮುದ್ರಣದಲ್ಲಿ ಪ್ರಕಟಗೊಂಡರೂ ಪುರಂದರದಾಸರ

ಒಂದಿದೆ. ಇದು ಆಸೆಬುರುಕ ಜೀನ್. ಸಿಕ್ಕಷ್ಟೂ ಮುಕ್ಕಬೇಕು, ಅದು ಏನಾದರೂ ಸರಿ ಎನ್ನುವ ಚಪಲ. ಈ ಜೀನ್ ಮೆದುಳು ಮತ್ತು ದೇಹದ ನಡುವೆ ಇರುವ ಸಂಪರ್ಕವನ್ನೇ ಕಿತ್ತುಹಾಕಿಬಿಡುತ್ತದೆ. ಆಗ ಮೊದಲು ಪೆಟ್ಟು ಬೀಳುವುದೇ ವಿವೇಚನೆಗೆ, ಎಷ್ಟು ತಿನ್ನಬೇಕು, ಏನು ತಿನ್ನಬೇಕು ಎನ್ನುವ ವಿವೇಚನೆಯೇ ಮರೆಗೆ ಸರಿಯುತ್ತದೆ. ಇವತ್ತಿನ ಸುದ್ದಿ ವಾಹಿನಿಗಳಿಗೆ ಸದಾ ಏನನ್ನಾದರೂ ಉಣಬಡಿಸುತ್ತಲೇ ಇರಬೇಕು. ಹೇಳಿ ಕೇಳಿ ನ್ಯೂಸ್ ಚಾನಲ್‌ಗಳು ಕೆಲಸ ಮಾಡುವುದು ಸೆಕೆಂಡ್‌ಗಳ ಲೆಕ್ಕದಲ್ಲಿ. ಅಂದರೆ ಒಂದು ದಿನ ಎನ್ನುವುದು ಚಾನಲ್‌ಗಳಿಗೆ ೮೬,೪೦೦ ಸೆಕೆಂಡ್‌ಗಳು. ಈ ೮೬ ಸಾವಿರ ಸೆಕೆಂಡ್‌ಗಳ ಕಾಲ ಏನನ್ನಾದರೂ ತಿನ್ನುತ್ತಲೇ ಇರಬೇಕು. ಈ ಧಾವಂತದಲ್ಲಿ ಸರಿ / ತಪ್ಪು, ಅಗತ್ಯ /ಅನಗತ್ಯ ಎನ್ನುವುದನ್ನು ಯೋಚಿಸುವ ಬಗೆ ಹೇಗೆ? ನ್ಯೂಸ್ ಚಾನಲ್‌ಗಳ ಧಾವಂತಕ್ಕೆ ಮೊದಲು ಬಲಿಯಾಗುವುದೆ ತರ್ಕ.

ಸರಿ ಬಿಡಿ. ಈ ಎರಡೂ ಕಾಯಿಲೆಗಳು ನ್ಯೂಸ್ ಚಾನಲ್‌ಗಳಿಗೆ ಇದೆ ಎಂದೇ ಇಟ್ಟುಕೊಳ್ಳೋಣ. ಹಾಗಾದರೆ ಇದಕ್ಕೆ ಪರಿಹಾರವೇ ಇಲ್ಲವೇ? ಹೌದು ಇಲ್ಲವೇ ಎಂದು ನಾನೂ ಯೋಚಿಸಿದ್ದೇನೆ, ಇದಕ್ಕೊಂದು ಪುಟ್ಟ ಉತ್ತರವೂ ಇದೆ. ಪತ್ರಿಕೆಗಳ ಪ್ರಸಾರ, ಓದುಗರ ಸಂಖ್ಯೆಯ ವಿವರ ಪ್ರಕಟವಾಗುವುದು ವರ್ಷಕ್ಕೆ ಒಂದು ಬಾರಿ. ಟ್ರೆಂಡ್ ಗೊತ್ತಾಗುವುದು ತ್ರೈಮಾಸಿಕದಲ್ಲಿ. ಆದರೆ ನ್ಯೂಸ್ ಚಾನಲ್‌ಗಳಿಗೆ




ಕೆಲವು ಹಾಡುಗಳು ಪ್ರಥಮತಹ ಮುದ್ರಣ ರೂಪದಲ್ಲಿ ಬಂದುದು ಮಂಗಳೂರು ಸಮಾಚಾರದಲ್ಲಿಯೇ.

೧೮೪೩ರಲ್ಲಿ ವಾರ ಪತ್ರಿಕೆಯೊಂದನ್ನು ಸ್ಥಾಪಿಸಿ ಇಲ್ಲಿನ ಜನರಿಗೆ ವಾಚನಾಭಿರುಚಿ ಉಂಟುಮಾಡಿದರೂ ಸುಮಾರು ೫೦ ವರ್ಷಗಳವರೆಗೆ ಪತ್ರಿಕೋದ್ಯಮ ಅಭಿವೃದ್ಧಿಗೊಂಡದ್ದು ಕಂಡುಬರುವುದಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಇವುಗಳಲ್ಲಿ ಮುಖ್ಯವಾದುದೆಂದರೆ ವಿದೇಶಿ ಸರಕಾರದವರು ದೇಶಭಾಷೆಗಳಿಗೆ ಶಿಕ್ಷಣ ವಿಚಾರದಲ್ಲಿ ಕಲ್ಪಿಸಿಕೊಡಬೇಕಾದಷ್ಟು ಪ್ರಶಸ್ತ ಸ್ಥಾನವನ್ನು ಕಲ್ಪಿಸಿಕೊಡದಿದ್ದುದೂ, ಆಂಗ್ಲಭಾಷೆಗೆ ಅಗ್ರಸ್ಥಾನವನ್ನು ಉದ್ದೇಶಪೂರ್ವಕವಾಗಿ ಕಲ್ಪಿಸಿಕೊಟ್ಟದ್ದೂ, ಜಿಲ್ಲೆಯ ಜನತೆ ಆಂಗ್ಲ ಭಾಷೆಯ ವ್ಯಾಮೋಹಕ್ಕೆ ಒಳಗಾಗಿ ದೇಶ ಭಾಷಾ ಅಭಿಮಾನವನ್ನು ತೊರೆದುಬಿಟ್ಟದ್ದು. ಓದುಬರಹ ಬಲ್ಲವರ ಸಂಖ್ಯೆ ಕಡಿಮೆ ಇದ್ದದ್ದು, ಇತರ ಭಾಷೆಗಳಲ್ಲಿರುವಷ್ಟು ಮಂದಿ ಸಮರ್ಥ ಪತ್ರಿಕಾ ಲೇಖಕರು ಮುಂದೆ ಬಾರದಿದ್ದುದು, ಇವೆಲ್ಲವುಗಳು ಕಾರಣವಾಯಿತೆಂದರೆ ತಪ್ಪಾಗಲಾರದು.

೧೯೪೩ ಜುಲೈ ೧ರ ಮೊದಲ ಪತ್ರಿಕೆಯ ಕ್ರಯ ಒಂದು ದುಡ್ಡು. ೧೮೪೪ ಫೆಬ್ರವರಿ ತನಕ ಮಾತ್ರ ಮುನ್ನಡೆದ ಈ ಪತ್ರಿಕೆಯನ್ನು ಮೊದಲಿಗೆ ಕಾಗದ ಎನ್ನುತ್ತಿದ್ದರು. ತಿಂಗಳಿಗೆ ಎರಡಾವರ್ತಿ ಪ್ರಕಟವಾಗುತ್ತಿತ್ತು. ಪತ್ರಿಕೆಯ ಓದುಗರು ಹೆಚ್ಚಾದಂತೆ ಹಾಗೂ ಮಂಗಳೂರಿನಲ್ಲಿ ಕಲ್ಲಚ್ಚು ಮುದ್ರಣದ ವ್ಯವಸ್ಥೆ ಮಾತ್ರ ಇದ್ದು ಹೆಚ್ಚಿನ ಪ್ರತಿಗಳ ಮುದ್ರಣಕ್ಕಾಗಿ ಬಳ್ಳಾರಿಗೆ ಸ್ಥಳಾಂತರವಾಯಿತು. ೧೮೨೧ರಲ್ಲಿ ಬಳ್ಳಾರಿಯಲ್ಲಿ ಸ್ಥಾಪನೆಯಾದ ಲಂಡನ್ ಮಿಶನ್ ಪ್ರೆಸ್‌ನಲ್ಲಿ ಅಚ್ಚು ಮೊಳೆಗಳನ್ನು ಬಳಸಿಕೊಂಡು ಮುದ್ರಣ ಮಾಡುತ್ತಿದ್ದರು. ಆ ಸಮಯದಲ್ಲಿ ಕನ್ನಡ ಮತ್ತು ತೆಲುಗು ಮುದ್ರಣಕ್ಕೆ ಒಂದೇ ಅಕ್ಷರ ಮೊಳೆಗಳನ್ನು ಬಳಸುತ್ತಿದ್ದರು.

ಇದೇ ಮುದ್ರಣಾಲಯದಲ್ಲಿ ಜೂನ್ ೧೮೪೪ರಿಂದ ನವೆಂಬರ್ ತನಕ ಹೆರ್ಮನ್ ಮ್ಯೋಗ್ಲಿಂಗ್‌ರವರ ಸಂಪಾದಕತ್ವದಲ್ಲಿಯೇ 'ಕನ್ನಡ ಸಮಾಚಾರ' ಎಂಬ ಹೆಸರಿನೊಂದಿಗೆ ಪ್ರಕಟಗೊಳ್ಳುತ್ತಿತ್ತು. 'ಮಂಗಳೂರು ಸಮಾಚಾರ' ಪತ್ರಿಕೆಯ ಸಂಪಾದಕರಾದ ಹೆರ್ಮನ್ ಪ್ರೆಡ್ರಿಕ್ ಮ್ಯೋಗ್ಲಿಂಗ್‌ರವರು ಹುಟ್ಟಿದ್ದು ೧೮೧೧ ಮೇ ತಿಂಗಳ ೨೯ನೇ ತಾರೀಖಿನಂದು ವ್ಯುಟೆಂಬರ್ಗ್‌ನ ಪ್ರಕ್ಕನ್‌ಹೈಮ್ ಎಂಬ ಊರಲ್ಲಿ. ಲ್ಯಾಟಿನ್ ಭಾಷೆಯಲ್ಲಿ ಅಸಾಧಾರಣವಾದ ಸಾಮರ್ಥ್ಯ ಹೊಂದಿದ ಈತ ೧೨ ವರ್ಷ ಬಾಲಕನಿರುವಾಗ ಒಂದು ಪರೀಕ್ಷೆಗೆ ಹೋದಾಗ ಅಧ್ಯಾಪಕರೊಬ್ಬರು ಜರ್ಮನ್ ಭಾಷೆಯಲ್ಲಿ ಕಠಿಣವಾದ ಒಂದು ಪರಿಚ್ಛೇದವನ್ನು ಬರೆಸಿದರು. ಕ್ಷಣಮಾತ್ರದಲ್ಲಿ ಅದನ್ನು ಭಾಷಾಂತರಿಸಿ ಉಪಾಧ್ಯಾಯರ ಕೈಯಲ್ಲಿ ಕೊಟ್ಟನು. ಇತರ ಹುಡುಗರು ಅದೇ ಪರಿಚ್ಛೇದವನ್ನು ಜರ್ಮನ್ ಭಾಷೆಯಲ್ಲಿ ಬರಿಯು ವಷ್ಟರೊಳಗೆ ಮ್ಯೋಗ್ಲಿಂಗನು ಅದನ್ನು ಲ್ಯಾಟಿನ್ ಭಾಷೆಗೆ ತರ್ಜುಮೆ ಮಾಡಿದ್ದನ್ನು ನೋಡಿ ಉಪಾಧ್ಯಾಯರು ಬೆರಗಾಗಿ ಭೇಷ್ ಅನಿಸಿಕೊಂಡನು.

ಭಾಷಾಭ್ಯಾಸಕ್ಕೆ ಹೆಚ್ಚು ಗಮನ ಕೊಡುತ್ತಿದ್ದ ಈತ ತಂದೆಗೆ ಲ್ಯಾಟಿನ್ ಭಾಷೆಯಲ್ಲಿಯೂ, ತಾಯಿಗೆ ಜರ್ಮನ್ ಭಾಷೆಯಲ್ಲಿಯೂ ಪತ್ರ ಬರೆಯುತ್ತಿದ್ದನಂತೆ. ಮಿಶನರಿಯಾಗಬೇಕೆಂಬ ಮನದಾಶೆಯಿಂದ ಬಾಸೆಲ್‌ನಲ್ಲಿ ದೈವಜ್ಞಾನ ತರಬೇತಿಗೆ ಸೇರಿದ ಮ್ಯೋಗ್ಲಿಂಗ್ ತನ್ನ ವಿದ್ಯಾಭ್ಯಾಸದೊಂದಿಗೆ ಅರಬಿ, ಸಂಸ್ಕೃತ, ಇಂಗ್ಲಿಷ್ ಭಾಷೆಯನ್ನೂ ಕಲಿಯಲಾರಂಭಿಸಿದ.

೧೮೩೬ರಲ್ಲಿ ಭಾರತಕ್ಕೆ ಬಂದು ಬಾಸೆಲ್ ಮಿಶನ್ ಕೇಂದ್ರವಾಗಿರುವ ಧಾರವಾಡದಲ್ಲಿದ್ದು ೧೮೪೧ರಿಂದ ೧೮೫೩ತನಕ ಮಂಗಳೂರಿನಲ್ಲಿ ೧೮೫೫ರಿಂದ ೧೮೬೦ ಕೊಡಗು, ಆಲ್ಮಂಡದಲ್ಲಿದ್ದು ಮಿಶನರಿಯಾಗಿದ್ದುದು ಮಾತ್ರವಲ್ಲದೆ ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆ ನೀಡಿದ್ದಾರೆ.

೧೦-೫-೧೮೮೧ರಲ್ಲಿ ನಿಧನರಾದ ಇವರು ಕರ್ನಾಟಕದಲ್ಲಿ ವಾಸ ಮಾಡಿದ್ದು ೨೪ ವರ್ಷ. ಈ ಅವಧಿಯಲ್ಲಿ ಅವರು ಮಾಡಿದ ಕನ್ನಡ ಸೇವೆ ಅಪಾರ. ಅವರ ಸಂಪಾದಕತ್ವದ ಬರವಣಿಗೆಯಲ್ಲಿ ಮಂಗಳೂರು ಸಮಾಚಾರ (೧೮೪೩), ಕನ್ನಡ ಸಮಾಚಾರ (೧೮೪೪), ಈರಾರು ಪತ್ರಿಕೆ (೧೮೫೭), ಚನ್ನಬಸವ ಪುರಾಣ (೧೮೫೧), ಜೈಮಿನಿ ಭಾರತ (೧೮೪೮), ದಾಸರ ಪದಗಳು (೧೮೫೦), ಬಸವ ಪುರಾಣ (೧೮೫೦), ಕನಕದಾಸರ ಭಕ್ತಿಸಾರ (೧೮೫೦), ರಾವಣ ದಿಗ್ವಿಜಯ (೧೮೪೮), ಕನ್ನಡ ಗಾದೆಗಳು (೧೮೪೭) ದೇಶಾಂತ್ರಿಯ ಪ್ರಯಾಣ (೧೮೪೯) ರಾಜೇಂದ್ರನಾಮೆ (೧೮೫೭) ಹೃದಯ ದರ್ಪಣ(೧೮೫೦) ಮುಂತಾದ ಕೃತಿಗಳು ಇಂದಿಗೂ ಚರಿತ್ರೆ ಹೇಳುತ್ತವೆ. ಮ್ಯೋಗ್ಲಿಂಗ್‌ರವರ ಸಾಹಿತ್ಯಗಳಿಂದ ಭಾಷೆ, ಬರಹ, ಮುದ್ರಣ, ದಾಖಲೀಕರಣ ಮುಂತಾದ ಹಲವಾರು ಸಂಶೋಧನೆಗಳು ನಡೆಸಬಹುದಾಗಿದೆ.

ಹಾಗಲ್ಲ. ಟಿ.ಆರ್.ಪಿ. ಪ್ರತೀ ವಾರ ಪ್ರಕಟವಾಗುತ್ತದೆ. ಟ್ರೆಂಡ್ ವಾರ ಮಧ್ಯೆಯೇ ಸಿಕ್ಕುಬಿಡುತ್ತದೆ. ಹಾಗಾಗಿಯೇ ಪ್ರತೀ ವಾರ ಟಿ.ಆರ್.ಪಿ. ಯುದ್ಧದಲ್ಲಿ ಗೆಲ್ಲಲೇಬೇಕಾದ ಅನಿವಾರ್ಯತೆ. ಇದ್ದ ಒಂದೇ ಕೇಕ್‌ಗೆ ಹಲವರು ಕೈ ಹಾಕಬೇಕಾದ ಒತ್ತಡ.

ಆಗ ಹೊಳೆಯುವುದೇ ಸುಲಭ ದಾರಿಗಳು. ಅಥವಾ ರಾತ್ರಿ ಕಳೆದು ಬೆಳಗಾಗುವುದರೊಳಗೆ ಯಶಸ್ವಿಯಾಗಲು ಇರುವ ಶಾರ್ಟ್‌ಕಟ್‌ಗಳು. ಜನರನ್ನು ಭ್ರಮೆಗೆ ತಳ್ಳುವ, ಕತ್ತಲನ್ನು ಇನ್ನಷ್ಟು ಹೆಚ್ಚಿಸುವ, ಮೂಢನಂಬಿಕೆಗೆ ಇನ್ನಷ್ಟು ತುಪ್ಪ ಸುರಿಯುವ, ಅತಿ ರಂಜಿಸುವ ಶಾರ್ಟ್‌ಕಟ್‌ಗಳು ಎಲ್ಲರಿಗೂ ಆಸೆ ಹುಟ್ಟಿಸುವುದು ಆಗಲೇ.

ಟೆಲಿವಿಷನ್ ರೇಟ್ ಪಾಯಿಂಟ್ಸ್ (ಟಿ.ಆರ್.ಪಿ.) ಎನ್ನುವ ವ್ಯವಸ್ಥೆ ನಿಜಕ್ಕೂ ವೈಜ್ಞಾನಿಕವಾಗಿದೆಯೇ ಎನ್ನುವುದು ಇನ್ನೊಂದು ಪ್ರಶ್ನೆ. ಕೆಲವೇ ನೂರು ಮೀಟರ್‌ಗಳು ಆರು ಕೋಟಿ ಜನರ ಬೇಕುಬೇಡಗಳನ್ನು ನಿರ್ಧರಿಸುತ್ತವೆ. ಈ ಮಧ್ಯೆಯೇ ಸಂಸತ್ತು ಈಗ ವರ್ಷಕ್ಕೊಮ್ಮೆ ಟಿ. ಆರ್. ಪಿ. ಪ್ರಕಟಿಸುವ ಬಗ್ಗೆ ಗಂಭೀರ ಚಿಂತನೆಯಲ್ಲಿ ತೊಡಗಿದೆ. ಹಾಗಾದಲ್ಲಿ ಸಿಕ್ಕಂತೆ ಓಡುತ್ತಿರುವ ಕುದುರೆಗೆ ಒಂದಿಷ್ಟಾದರೂ ವಿವೇಚನೆಯ ಲಗಾಮು ಬೀಳಬಹುದು ಎನ್ನುವ ಆಸೆ ನನ್ನದು.

ಜಿ. ಎನ್. ಮೋಹನ್
ನಂ. ೧೪೨, ೯ನೇ ಅಡ್ಡ ರಸ್ತೆ, ೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦



ಹೊಸ ಓದು

## ರೈತನ ಬಾರುಕೋಲು



ಮೂಲ : ಜ್ಯೋತಿಬಾ ಫುಲೆ
ಕನ್ನಡಕ್ಕೆ : ನಂಜುಂಡಾಚಾರಿ

**ಪುಟ: xii+೯೮ ಬೆಲೆ: ರೂ. ೮೦**

**ಲಡಾಯಿ,** ನಂ. ೨೧, ಪ್ರಸಾದ್ ಹಾಸ್ಟಲ್, ಗದಗ

*ಶಿಕ್ಷಣ ಹಾಗೂ ಆರ್ಥಿಕ ಸುಭದ್ರತೆ ಇಲ್ಲದಿರುವುದೇ ಅಜ್ಞಾನ ಮತ್ತು ಬಡತನಕ್ಕೆ ಕಾರಣವಾಗುವುದೆಂದು ಸರಿಯಾಗಿ ಗುರುತಿಸಿದವರೇ ಜ್ಯೋತಿ ಬಾ ಫುಲೆಯವರು. ಶೂದ್ರಾತಿಶೂದ್ರರೆಂಬ ಜಾತಿ ಸಮಸ್ಯೆಯಿಂದ ಬಳಲಿ, ರೈತರಿಗೆ ಜಮೀನ್ದಾರರ ಭೂಮಿಯಲ್ಲಿ ಕೂಲಿಕಾರರಾಗಿ ಕೆಲಸ ಮಾಡುವುದಷ್ಟೇ ಎರಡು ಶತಮಾನಗಳಷ್ಟು ಹಿಂದಿನ ಕಾಲದ ಪದ್ಧತಿಯಾಗಿತ್ತು. ಜ್ಯೋತಿ ಬಾ ಫುಲೆ ಎಂಬ ಜ್ಯೋತಿಯೊಂದು ಉದಯಿಸಿ ಬಂದು ಸಾರ್ವತ್ರಿಕ ಶಿಕ್ಷಣಕ್ಕಾಗಿ ಪ್ರಾಮಾಣಿಕವಾಗಿ ಹೋರಾಡಿದರು. ಮುಖ್ಯವಾಗಿ ರೈತರನ್ನು ಶೋಷಣೆ ಮಾಡುವ ಅಂದಿನ ಕಾಲದ ಜಮೀನ್ದಾರಿ ಪದ್ಧತಿ, ಜೊತೆಗೆ ಪ್ರತಿಕೂಲವಾದ ಆಂಗ್ಲ ಸರಕಾರದ ಅಧಿಕಾರಿಗಳು ಬಡರೈತರ ಬವಣೆ – ಇವನ್ನೆಲ್ಲ ಕಂಡು ಅವರ ಏಳಿಗೆಗಾಗಿ ಶ್ರಮಿಸಿದ ಕಥೆಯನ್ನು ಈ ಕೃತಿ ತಿಳಿಸುತ್ತದೆ. ಸರಕಾರದ ಆಡಳಿತದ ಆಯಕಟ್ಟಿನ ಸ್ಥಾನಗಳಲ್ಲಿ ಮೇಲ್ವರ್ಗದವರೇ ಹೆಚ್ಚಾಗಿ ತುಂಬಿಕೊಂಡಿದ್ದು, ಅದರಲ್ಲೂ ಬ್ರಾಹ್ಮಣ ವರ್ಗವೇ ಮೇಲುಗೈ ಸಾಧಿಸಿದ್ದು ಇವರ ಕ್ರಾಂತಿಕಾರಿ ಕೆಲಸಗಳಿಗೆ ಅಡಚಣೆ ಉಂಟುಮಾಡಿತ್ತು. ಎಲ್ಲ ಇಲಾಖೆಗಳಲ್ಲೂ ಭಟ್–ಬ್ರಾಹ್ಮಣ ತಂಡವೇ ತುಳುಕಾಡುತ್ತಿತ್ತು. ಇವರ ಮಧ್ಯೆ ರೈತರ ಪಾಡು ಏನಾಗಿತ್ತೆಂದು ಇಲ್ಲಿ ವರ್ಣಿಸಿದ್ದು, ಆ ಕಾಲದ ಚಿತ್ರಣವೊಂದು ಇಲ್ಲಿ ಸಿಗುತ್ತದೆ. ಸ್ವತಃ ಜ್ಯೋತಿ ಬಾ ಫುಲೆ ಬರೆದ ಕೃತಿ ತೆಲುಗಿಗೆ ಅನುವಾದಗೊಂಡು ಅಲ್ಲಿಂದ ಕನ್ನಡಕ್ಕೆ ಬಂದಿದ್ದು ಮಹಾರಾಷ್ಟ್ರ ರೈತರ ಬವಣೆಯನ್ನು ತಿಳಿಸುತ್ತದೆ.*

## ಗಿರಿಶಿಖರಗಳ ಉತ್ತುಂಗ ಶೃಂಗದಲ್ಲಿ (ಶಿಮ್ಲಾ: ಕುಲು–ಮನಾಲಿ ಪ್ರವಾಸಕಥನ)

*ಡಾ॥ ಅಶೋಕ ನರೋಡೆ*

**ಪುಟ: xiv+೨೪+೧೬೮=೨೦೮** **ಬೆಲೆ : ರೂ. ೨೦೦**

**ನಿವೇದಿತ ಪ್ರಕಾಶನ,** ನಂ. ೩೪೩೭, ೪ನೇ ಮುಖ್ಯ ರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೨೮

*ಈ ಕೃತಿಯು ಭಾರತದ ಉತ್ತುಂಗ ಶಿಖರಗಳಾದ ಕುಲು – ಮನಾಲಿ – ಸಿಮ್ಲಾಗಳನ್ನು ಇತ್ತೀಚೆಗೆ ಸಂದರ್ಶಿಸಿ ಬಂದ ಡಾ॥ ಅಶೋಕ ನರೋಡೆ ಬರೆದ ಪ್ರವಾಸ ಕಥನ. ಹಿಮಾಚ್ಛಾದಿತ ಗಿರಿಶಿಖರಗಳ ನೋಟವೇ ಕಣ್ಣನ ಸೆಳೆಯುವಂಥದು. ಅಲ್ಲಿನ ಅತ್ಯುನ್ನತ ಪರ್ವತಸಾಲು – ಅದರೊಂದಿಗಿನ ಆಳವಾದ ಕಣಿವೆಯ ಸಾಲು ರುದ್ರ ರಮಣೀಯ ನೋಟವನ್ನೊದಗಿಸುತ್ತವೆ. ಪ್ರಕೃತಿಯು ಅಲ್ಲಿ ತನ್ನ ಸೌಂದರ್ಯವನ್ನು ಮರೆಮಾಚಲಾಗದೆ ಕಣ್ತುಂಬ ನೋಡಿ ಹೋಗಲು ಆಹ್ವಾನ ನೀಡುತ್ತದೆ. ಕುಲು – ಮನಾಲಿ ಎಂದೊಡನೆ "ಬಾ ನಲ್ಲೆ ಮಧುಚಂದ್ರಕೆ" ಎಂಬ ಚಲನಚಿತ್ರವೊಂದು ಜ್ಞಾಪಕಕ್ಕೆ ಬರುತ್ತದೆ. ಅಲ್ಲಿನ ರೊಥಾಂಗ್ ಪಾಸ್ ಬೆಟ್ಟವು ಮಾತಾಡಿದಂತೆ ಅನಿಸುತ್ತದೆ. ಇರಲಿ, ಕಡಿದಾದ ಬೆಟ್ಟಗಳನ್ನು ಹತ್ತಿ, ಕಣಿವೆಗೆ ಇಳಿದು, ಹಿಮರಾಶಿಯೊಂದಿಗೆ ಆಟವಾಡಿ ಮುಖ್ಯವಾಗಿ ಧೈರ್ಯ ಸಾಹಸಗಳಿಂದ ಮುಂದಿಟ್ಟ ಹೆಜ್ಜೆ ಹಿಂದಿಡದೆ ನೋಡಿ ಬರುವುದು ಸಾಮಾನ್ಯದ ಮಾತಲ್ಲ – ಅದೂ ಮಕ್ಕಳು ಮಡದಿಯೊಂದಿಗೆ. ಅಪಾಯಗಳು ಎಡ ಬಲದಲ್ಲಿ ಕಾದು ಕುಳಿತಿರುತ್ತವೆ. ಎಷ್ಟೇ ವಾಹನ ಸೌಕರ್ಯಗಳಿದ್ದರೂ ಕೆಲವು ಸ್ಥಳಗಳಲ್ಲಿ ಕಾಲ್ನಡಿಗೆ ಕಡ್ಡಾಯವಾಗುತ್ತದೆ. ಅಂತೂ ಯಶಸ್ವಿಯಾಗಿ ಪೂರೈಸಿದ ಒಂದು ಪ್ರವಾಸ ಕಥನ ಓದಿದಾಗ ಕುಲು – ಮನಾಲಿ ನೋಡುವ ಆಸೆ ಅಂಕುರಿಸುತ್ತದೆ. ಅಪೂರ್ವ ಫೋಟೋಗಳು ಅಲ್ಲಿನ ತಾಣಗಳನ್ನು ಕಣ್ಮುಂದೆ ಕಟ್ಟಿದಂತೆ ಕಂಗೊಳಿಸುತ್ತವೆ.*



## ಅಣ್ಣಯ್ಯನ ಮಾತು

*ಭಾರತೀ ಕಾಸರಗೋಡು*

**ಪುಟ : iv+೮೮** **ಬೆಲೆ : ರೂ. ೫೦**

**ಅಂಜನಾ ಪ್ರಕಾಶನ,** *ಜಿ–೫, ಶ್ರೀನಿಧಿ ಶೆಲ್ಟರ್ಸ್, ನಂ.೧, ರವಿಗುಡ್ಡ ಇಟ್ಟಮಡು ಬಿ.ಎಸ್.ಕೆ. ೩ನೇ ಹಂತ, ಬೆಂಗಳೂರು – ೫೬೦ ೦೮೫*

*ಇಲ್ಲಿನ ಅಣ್ಣಯ್ಯ ಎಂದರೆ ಸಮೇತನಹಳ್ಳಿ ರಾಮರಾವ್ ಎಂಬ ಲೇಖಕ. ಅವರ ಜೀವಿತಕಾಲದಲ್ಲಿನ ಅಪೂರ್ವ ನೆನಪುಗಳನ್ನು ಅವರ ಮಗಳು ಲೇಖಕಿ ಭಾರತೀ ಕಾಸರಗೋಡು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಬರಹಗಾರರಾಗಿ ಅವರ ನಡೆನುಡಿ, ಸಜ್ಜನಿಕೆ, ಶಿಸ್ತು, ಅಂತಃಕರಣ ಇವೆಲ್ಲವೂ ವ್ಯಕ್ತಿಚಿತ್ರಗಳಾಗಿ ಮೂಡಿ ಬಂದಿವೆ. ಕುಟುಂಬ ವತ್ಸಲರಾಗಿ, ಸತ್ಯನಿಷ್ಠರಾಗಿ, ಸ್ನೇಹಮಯಿಯಾಗಿದ್ದರೂ 'ವಜ್ರಾದಪಿ ಕಠೋರಾಣಿ ಮೃದೂನಾಂ ಕುಸುಮಾದಪಿ' ಎಂಬಂತೆ ಎಲ್ಲಿಯೇ ಅನ್ಯಾಯ ನಡೆದರೂ ಕೆಂಡದುಂಡೆಯಂತೆ ಕಠಿಣರಾಗುತ್ತಿದ್ದರು. ಯಾರೇ ಆಗಲಿ ಹೃದಯಕ್ಕೆ ಹತ್ತಿರವಾದ ವ್ಯಕ್ತಿಗಳು ಗತಿಸಿದಾಗ ಅವರ ನೆನಪು ಧುಮ್ಮಿಕ್ಕಿ ಬರುತ್ತದೆ. ಅಂತರಾಳದಲ್ಲಿ ಭೋರ್ಗರೆದು ಕ್ಷಣಕ್ಷಣಕ್ಕೂ ವಿಚಲಿತರನ್ನಾಗಿಸುತ್ತದೆ. ಎಲ್ಲೆಲ್ಲೂ – ಕೊನೆಗೆ ಶೂನ್ಯದಲ್ಲೂ ಅವರೇ ಇಣುಕಿದಂತೆ ಭ್ರಮಾಲೋಕ ಸೃಷ್ಟಿಯಾಗಿ ಅವರಿಲ್ಲದೆಯೂ ಇರುವಂತೆ ಭಾಸವಾಗುತ್ತದೆ. ಇದು ನಾವು ಅವರನ್ನು ಎಷ್ಟು ಪ್ರೀತಿಸಿದ್ದೆವೊ ಅಷ್ಟು ಗಾಢವಾಗಿ ತಟ್ಟುತ್ತದೆ. ಇದು ಅನುಭವದಿಂದ ಮಾತ್ರ ವೇದ್ಯ. ಹೀಗೆ ಲೇಖಕಿಗೆ ಎಲ್ಲೆಲ್ಲೂ – ಬೆಳ್ಮುಗಿಲಲ್ಲೂ – ಮನದಲ್ಲೂ – ಅಂತರಾಳದಲ್ಲೂ ಶುಭ್ರ ಶ್ವೇತ ವಸನಧಾರಿ ಗತಿಸಿದ ಅಣ್ಣಯ್ಯನೇ ಕಾಣಿಸುತ್ತಿದ್ದಾರೆ. ಅಮರ ವ್ಯಕ್ತಿತ್ವ ಎಂದರೆ ಇದೇ ತಾನೇ!*

## ಆದಿವಾಸಿ ಹೋರಾಟಗಾರ – ಕೋಮುರಂ ಭೀಮು – ವರ್ತಮಾನದ ಮುಖಾಮುಖಿ



*ಮೂಲ : ವರವರರಾವು, ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*

**ಪುಟ: xii+೧೦೦** **ಬೆಲೆ : ರೂ. ೮೦**

**ಲಡಾಯಿ,** ನಂ. ೨೧, ಪ್ರಸಾದ್ ಹಾಸ್ಟಲ್, ಗದಗ

*ಹೋರಾಟಗಳನ್ನೇ ಬಿತ್ತಿ ಬೆಳೆಸಿ, ಅವನ್ನೇ ಹಾಸಿ ಹೊದ್ದು ಬದುಕಿದ ನಮ್ಮ ದೇಶಕ್ಕೆ ಹಲವು ಹೋರಾಟಗಳ ಚರಿತ್ರೆಯಿದೆ. ಬ್ರಿಟಿಷರೊಂದಿಗೆ, ಅರಸೊತ್ತಿಗೆಯ ಸಂಸ್ಥಾನ ಹಾಗೂ ನಿಜಾಮ್ ಸರಕಾರಗಳೊಂದಿಗೆ ಸಶಸ್ತ್ರ ಹೋರಾಟಗಳೇ ನಡೆದಿವೆ. ಈ ನೆಲಕ್ಕೆ ಇಂತಹ ಪರಂಪರೆ ಇಂದು ನಿನ್ನೆಯದಲ್ಲ. ಇಂದಿಗೂ ಹಲವಾರು ಹೋರಾಟಗಳು ನಡೆಯುತ್ತಿದ್ದರೂ ಅವು ಸುದ್ದಿಯೇ ಆಗದೆ ಮುಚ್ಚಿಹಾಕಲ್ಪಡುತ್ತವೆ. ಆದಿವಾಸಿ ಬುಡಕಟ್ಟು ಜನಾಂಗದ ಮೇಲಿನ ಅಧಿಕಾರಶಾಹಿಯ ಕಿರುಕುಳ – ದಬ್ಬಾಳಿಕೆಗೆ ರೋಸಿ ದಂಗೆ ಎದ್ದು ಉಗ್ರ ಹೋರಾಟ ಮಾಡಿದ ಕೋಮುರಂ ಭೀಮು ಅವರ ಪರಿಚಯಾತ್ಮಕ ಕಥನವಿದು. ದಬ್ಬಾಳಿಕೆ ಮೇರೆ ಮೀರಿದಾಗ ಶೋಷಿತರಿಂದ ಉಗ್ರ ಹೋರಾಟಗಳು, ಸಶಸ್ತ್ರ ದಂಗೆಗಳು ಜನ್ಮ ತಾಳುತ್ತವೆ. ಹೋರಾಟಗಳನ್ನು ಹತ್ತಿಕ್ಕಲು ಪ್ರಭುತ್ವಗಳು ಸದಾ ಸಿದ್ಧವಾಗಿರುತ್ತವೆ. ಇದು ಅನೂಚಾನವಾಗಿ ಚರಿತ್ರೆಯಲ್ಲಿ ನಾವು ಕಂಡ ಸತ್ಯ ಸಂಗತಿ. ಯಾವ ಕಾಲದಲ್ಲೇ ಇರಲಿ, ಎಲ್ಲೇ ಪ್ರಾರಂಭವಾಗಲಿ; ಅವು ಯಶಸ್ವಿಯಾಗಲಿ – ಹತ್ತಿಕ್ಕಲ್ಪಡಲಿ ಎಂದಿಗೂ ನಿರಂತರವಾಗಿ ಜೀವಂತವಾಗೇ ಇರುತ್ತವೆ. ಎಷ್ಟೇ ಅದುಮಲ್ಪಟ್ಟರೂ ಪುಟಿದೇಳುವ ಚೆಂಡಿನಂತೆ ಹೋರಾಟಗಳ ಕಥನ ಸಾಗುತ್ತದೆ. ಆದಿವಾಸಿಗಳ ನಾಯಕನಾಗಿ ತಮ್ಮ ಹಕ್ಕುಗಳಿಗಾಗಿ ಹೋರಾಡಿ ಹುತಾತ್ಮನಾದ ಕೋಮುರಂ ಭೀಮು ಅವರ ಒಂದು ಮಾತಿನ ತಾತ್ಪರ್ಯ: "ಬೆಳೆಗಳನ್ನು ರಕ್ಷಿಸಲು ಕಾಡುಹಂದಿ – ಹುಲಿಗಳೊಂದಿಗೆ ಹೊಡೆದಾಡುತ್ತೇವೆ. ಸಫಲರಾಗುತ್ತೇವೆ – ಆದರೆ ಮನುಷ್ಯರಿಗೆ ಭಯಪಡುತ್ತೇವೆ. ಏತಕ್ಕೋ."*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು–೫೬೦ ೦೨೨*

ಮೂಲ : **ಓ ಹೆನ್ರಿ** ಕನ್ನಡಾನುವಾದ : **ಜ಼ಾಹಿದಾ ಶಿರೀನ್**

# ಸಂಗೀತ ಮತ್ತು ಪೊಲೀಸ್

**ಸೋ**ಪಿ ಮ್ಯಾಡಿಸನ್ ಚೌಕದ ತನ್ನ ಸೀಟಿನಲ್ಲಿ ಚಡಪಡಿಸುತ್ತಿದ್ದ. ಚಳಿಗಾಲ ಸಮೀಪಿಸುತ್ತಿದೆ ಎಂದು ಸೂಚಿಸುವ ಕೆಲವು ಚಿಹ್ನೆಗಳು ಕಾಣಿಸುತ್ತಿದ್ದವು. ಪಕ್ಷಿಗಳು ದಕ್ಷಿಣದ ಕಡೆಗೆ ಹಾರುತ್ತಿವೆ. ಹೊಸ ಉಣ್ಣೆಯ ಬಟ್ಟೆಗಳನ್ನು ತೆಗೆದುಕೊಳ್ಳಬೇಕೆಂದಿದ್ದ ಹೆಂಡತಿಯರು ತಮ್ಮ ಗಂಡಂದಿರಿಗೆ ಒಳ್ಳೆಯವರಾಗಲು ಶುರುಮಾಡಿಕೊಂಡಿದ್ದರು. ಪಾರ್ಕಿನಲ್ಲಿ ಕುಳಿತಿದ್ದ ಸೋಪಿ ಮತ್ತೆ ಚಡಪಡಿಸತೊಡಗಿದ. ಇದನ್ನೆಲ್ಲಾ ನೋಡಿದರೆ ಚಳಿಗಾಲ ಸಮೀಪಿಸುತ್ತಿದೆ ಎಂಬುದು ನಿಮಗೆ ತಿಳಿಯುತ್ತದೆ.

ಒಂದು ಹಣ್ಣೆಲೆ ಸೋಪಿಯ ಕಾಲ ಬಳಿ ಉದುರಿತು. ಚಳಿಗಾಲ ಹತ್ತಿರವಾಯಿತು ಎಂದು ಅರಿಯಲು ಅವನಿಗೆ ಇದೂ ಒಂದು ವಿಶೇಷ ಸೂಚನೆಯಾಗಿತ್ತು. ಮ್ಯಾಡಿಸನ್ ಸ್ಕ್ವೇರ್‌ನಲ್ಲಿ ನೆಲೆಸಿರುವ ಮನೆಯಿಲ್ಲದವರು ಚಳಿಗಾಲಕ್ಕೆ ಸಿದ್ಧರಾಗುವ ಸಮಯ ಬಂದಿತ್ತು. ಚಳಿಯಿಂದ ರಕ್ಷಿಸಿಕೊಳ್ಳಲು ಯಾವುದಾದರೊಂದು ವಿಧಾನವನ್ನು ಕಂಡುಕೊಳ್ಳಬೇಕು ಎಂದು ಸೋಪಿಗೆ ಈಗ ಮನವರಿಕೆಯಾಯಿತು.

ಚಳಿಗಾಲಕ್ಕೆ ಸೋಪಿಯ ಆಕಾಂಕ್ಷೆಗಳು ತುಂಬಾ ದೊಡ್ಡದೇನೂ ಆಗಿರಲಿಲ್ಲ. ಹಡಗಿನಲ್ಲಿ ದೂರ ಪ್ರವಾಸದ ಯೋಚನೆಯನ್ನು ಅವನು ಖಂಡಿತ ಮಾಡಲಿಲ್ಲ. ದಕ್ಷಿಣದ ಆಕಾಶದ ಬಗ್ಗೆಯಾಗಲಿ, ಬೆಚ್ಚಗಿನ ನೇಪಲ್ಸ್‌ನ ಸಮುದ್ರ ತೀರದ ಬಗ್ಗೆಯಾಗಲಿ ಪಾಪ ಅವನು ಯೋಚಿಸಲಿಲ್ಲ. ಬ್ಲಾಕ್‌ವೇಲ್ಸ್ ದ್ವೀಪದ ಕಾರಾಗೃಹದಲ್ಲಿ ಮೂರು ತಿಂಗಳು ಬಂಧಿಯಾಗಿರುವ ಬಯಕೆ ಮಾತ್ರ ಅವನದ್ದಾಗಿತ್ತು. ಮೂರು ತಿಂಗಳು ಪ್ರತಿದಿನ ಊಟ ಹಾಗೂ ರಾತ್ರಿಯ ಹೊತ್ತಿಗೆ ಮಲಗಲು ಹಾಸಿಗೆ, ಮೂರು ತಿಂಗಳು ಉತ್ತರದಿಂದ ಬೀಸುವ ಚಳಿಗಾಳಿಯಿಂದ ರಕ್ಷಣೆ. ಇಷ್ಟು ಮಾತ್ರ ಸೋಪಿಗೆ ಪ್ರಪಂಚದಲ್ಲಿ ಅತ್ಯಂತ ಅಪೇಕ್ಷಣೀಯವಾಗಿ ಕಂಡಿತು.

ಹಲವಾರು ವರ್ಷಗಳಿಂದ ಬ್ಲಾಕ್‌ವೇಲ್ಸ್ ದ್ವೀಪವು ಆತನ ಚಳಿಗಾಲದ ವಾಸಸ್ಥಾನವಾಗಿಬಿಟ್ಟಿದೆ. ಪ್ರತಿ ಚಳಿಗಾಲದಲ್ಲೂ ನ್ಯೂಯಾರ್ಕಿನ ಶ್ರೀಮಂತರು ಫ್ಲೋರಿಡಾದ ಸಮುದ್ರತೀರಕ್ಕೆ ಅಥವಾ ಮೆಡಿಟರೇನಿಯನ್ ಸಮುದ್ರಕ್ಕೆ ಪ್ರವಾಸ ಹೋಗುವ ಯೋಜನೆಯನ್ನು ಮಾಡಿಕೊಳ್ಳುತ್ತಾರೆ. ಸೋಪಿ ಮಾತ್ರ ಬ್ಲಾಕ್‌ವೇಲ್ಸ್ ದ್ವೀಪಕ್ಕೆ ಹೋಗುವ ಸಣ್ಣ ಯೋಜನೆಯನ್ನು ಹಾಕಿಕೊಳ್ಳುತ್ತಾನೆ.

ಮತ್ತೆ ಈಗ ಅದೇ ಸಮಯ ಬಂದಿದೆ. ಮೂರು ದಿನಪತ್ರಿಕೆಗಳನ್ನು ಹೇಗೋ ಸಂಪಾದಿಸಿಕೊಂಡ. ಅದರಲ್ಲಿ ಕೆಲವನ್ನು ತನ್ನ ಕೋಟಿನ ಒಳಗೆ ತುರುಕಿಕೊಂಡ, ರಾತ್ರಿಯ ಹೊತ್ತು ಪಾರ್ಕಿನಲ್ಲಿ ಅವು ಅವನನ್ನು

ಆ ಕ್ಷಣದಲ್ಲಿ ಅವನ ಹೃದಯ, ಮನಸ್ಸು ಅವನ ಅಂತರಾತ್ಮದಲ್ಲಿ ಆದ ಬದಲಾವಣೆಗೆ ಸ್ಪಂದಿಸಿತು. ತನ್ನ ಜೀವನವನ್ನು ಬದಲಾಯಿಸಿಕೊಳ್ಳಲು, ಈ ಕೊಳಕಿನಿಂದ ತನ್ನನ್ನು ಮೇಲೆತ್ತಿಕೊಳ್ಳಲು ಹೋರಾಡಲೇಬೇಕು ಅನ್ನಿಸಿತು. ತನ್ನನ್ನು ತಾನೇ ನೈಜ ಮನುಷ್ಯನಾಗಿ ರೂಪಿಸಿಕೊಳ್ಳಬೇಕು ಎಂದುಕೊಂಡ.
ಅವನು ಇನ್ನೂ ಯುವಕನಾಗಿರುವುದರಿಂದ ಸಾಕಷ್ಟು ಸಮಯಾವಕಾಶವಿದೆ. ಅವನು ತನಗೆ ಹಿಂದಿದ್ದ ಜೀವನದ ಗುರಿಯನ್ನು ಮರಳಿ ಕಂಡುಕೊಂಡು ಅದನ್ನು ಅನುಸರಿಸಬೇಕು ಎಂದುಕೊಂಡ. ಆ ಇಂಪಾದ ಸಂಗೀತ ಅವನ ಲಹರಿಯನ್ನು, ಅವನನ್ನು ಬದಲಾಯಿಸಿಬಿಟ್ಟಿತ್ತು. ನಾಳೆ ಅವನು ಒಂದು ಕೆಲಸವನ್ನು ಹುಡುಕಿಕೊಳ್ಳಬೇಕು. ಒಮ್ಮೆ ಒಬ್ಬ ವ್ಯಕ್ತಿ ಅವನಿಗೆ ಕೆಲಸ ಕೊಡುವುದಾಗಿ ಹೇಳಿದ್ದ, ಅವನನ್ನು ನಾಳೆ ಹುಡುಕಬೇಕು. ಅವನು ಪ್ರಪಂಚದಲ್ಲಿ ಎಲ್ಲೇ ಇರಬಹುದು, ಯಾರೇ ಆಗಿರಬಹುದು.
ಆದರೆ ಅವನು ನಾಳೆ....



ಬೆಚ್ಚಗಿಡುತ್ತಿವೆ. ಇಷ್ಟಾದ ಮೇಲೆ ಸೋಪಿ ಈಗ ದ್ವೀಪದ ಬಗ್ಗೆ ಆಲೋಚಿಸತೊಡಗಿದ.

ಅವನಿದ್ದ ನಗರದಲ್ಲೇ ಕೆಲವೊಂದು ಆಶ್ರಯ ಸ್ಥಾನಗಳಿವೆ. ಅಲ್ಲಿಗೆ ಹೋಗಿ ಆತ ಊಟ ಹಾಗೂ ಹಾಸಿಗೆಯನ್ನು ಕೇಳಿದರೆ ಅದು ಅವನಿಗೆ ದೊರಕುತ್ತಿತ್ತು ಸಹ. ಬೇಜಾರಾದರೆ ಅವನು ಅಂಥ ಒಂದು ಆಶ್ರಯಧಾಮದಿಂದ ಇನ್ನೊಂದು ಕಡೆಗೆ ತನ್ನ ವಾಸವನ್ನು ಬದಲಾಯಿಸಿ ಕೊಳ್ಳಬಹುದಿತ್ತು. ಅವರು ಚಳಿಗಾಲದುದ್ದಕ್ಕೂ ಅವನ ಬಗ್ಗೆ ಕಾಳಜಿಯನ್ನು ವಹಿಸುತ್ತಿದ್ದರು ಕೂಡ. ಆದರೆ ಅವನಿಗೆ ಬ್ಲಾಕ್‌ವೆಲ್ಸ್ ದ್ವೀಪದ ಜೈಲೇ ಉತ್ತಮ ಎನಿಸಿತು.

ಇದಕ್ಕೆ ಕಾರಣವಿದೆ. ಸೋಪಿಯದು ಸ್ವಾಭಿಮಾನದ ವ್ಯಕ್ತಿತ್ವ. ಅವನು ಮೇಲೆ ಹೇಳಿದ ನೆಲೆಗಳಲ್ಲಿ ಆಶ್ರಯವನ್ನು ಪಡೆದುಕೊಂಡರೆ ಅಲ್ಲಿ ಒಂದಲ್ಲ ಒಂದು ರೀತಿಯ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಅವರು ಒದಗಿಸುವ ಅನುಕೂಲಗಳಿಗೆ ಒಂದಲ್ಲ ಒಂದು ರೀತಿಯಲ್ಲಿ ಬೆಲೆ ತೆರಬೇಕಾಗಿತ್ತು. ಅವರು ಸೋಪಿಯಿಂದ ಹಣ ಕೇಳುತ್ತಿರಲಿಲ್ಲ. ಆದರೆ ಅವರು ಅವನ ಇಡೀ ದೇಹವನ್ನು ಸ್ವಚ್ಛಗೊಳಿಸಿಕೊಳ್ಳುವಂತೆ ಒತ್ತಾಯಿಸುತ್ತಾರೆ, ಅವನ ಜೀವನದ ಬಗ್ಗೆ ಎಲ್ಲವನ್ನೂ ತಿಳಿದುಕೊಳ್ಳಲು ಹಲವಾರು ಪ್ರಶ್ನೆಗಳನ್ನು ಕೇಳುತ್ತಾರೆ.

ಇಲ್ಲ! ಜೈಲೇ ಇದಕ್ಕಿಂತ ಉತ್ತಮವಾದ ಸ್ಥಳ, ಜೈಲಿನಲ್ಲಿಯೂ ಹಲವಾರು ನಿಯಮಗಳನ್ನು ಅವನು ಅನುಸರಿಸಬೇಕಾಗುತ್ತದೆ. ಆದರೆ, ಒಬ್ಬ ಸಭ್ಯನ ವೈಯಕ್ತಿಕ ಜೀವನ ಮಾತ್ರ ಖಾಸಗಿಯಾಗಿಯೇ ಉಳಿದುಕೊಂಡಿರುತ್ತದೆ.

ಸೋಪಿ ದ್ವೀಪಕ್ಕೆ ಹೋಗುವುದೆಂದು ನಿರ್ಧರಿಸಿದ ಮೇಲೆ, ಆಕಾಂಕ್ಷೆಯನ್ನು ಪೂರೈಸಿಕೊಳ್ಳುವತ್ತ ಪ್ರಯತ್ನ ನಡೆಸಿದ. ಅದಕ್ಕೆ ಸುಲಭವಾದ ಹಲವಾರು ಮಾರ್ಗಗಳಿದ್ದವು. ಆದರೆ ತುಂಬ ಆರಾಮವಾದ ದಾರಿಯೆಂದರೆ, ಯಾವುದಾದರೂ ಒಂದು ಉತ್ತಮವಾದ ರೆಸ್ಟೋರೆಂಟಿಗೆ ಹೋಗಿ ಊಟ ಮುಗಿಸುವುದು, ನಂತರ ಬಿಲ್ ಪಾವತಿಸಲು ಹಣವಿಲ್ಲವೆಂದು ಹೇಳುವುದು. ಆಗ ಪೊಲೀಸರನ್ನು ಕರೆಯುತ್ತಾರೆ, ಎಲ್ಲವೂ ಸುಸೂತ್ರವಾಗಿಯೇ ನಡೆದುಹೋಗುತ್ತದೆ. ಆಮೇಲೆ ಇನ್ನೇನು, ಪೊಲೀಸನು ಅವನನ್ನು ಬಂಧಿಸಿ ನ್ಯಾಯಾಧೀಶರ ಮುಂದೆ ಹಾಜರುಪಡಿಸುತ್ತಾರೆ, ಉಳಿದೆಲ್ಲಾ ಕೆಲಸವನ್ನು ನ್ಯಾಯಾಧೀಶರು ಪೂರೈಸುತ್ತಾರೆ.

ಸೋಪಿ ತಾನು ಕುಳಿತಿದ್ದ ಮ್ಯಾಡಿಸನ್ ಸ್ಕ್ವೇರ್ ಜಾಗವನ್ನು ಬಿಟ್ಟು ಬ್ರಾಡ್‌ವೇ

### ಅಭಿನಂದನೆ...

ಕನ್ನಡದ ಖ್ಯಾತ ವಿದ್ವಾಂಸರಾದ ಹಂಪ ನಾಗರಾಜಯ್ಯ (ಹಂಪನಾ) ಅವರಿಗೆ ೨೦೧೮ನೇ ಸಾಲಿನ 'ಸೇಡಿಯಾಪು ಕೃಷ್ಣಭಟ್ಟ ಪ್ರಶಸ್ತಿ'ಯು ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

# ಹೆಣ್ಣುತನಕ್ಕೆ ಜಾತಿ ಇಲ್ಲ

ಕಾವ್ಯಲೋಕ



ಹೆಣ್ಣು ಹೆರುತ್ತಾಳೆ
ಜಾತಿ ಅಂಟಿಸುವುದಿಲ್ಲ,
ಹೆಣ್ಣು ಸಲಹುತ್ತಾಳೆ
ಕುಲ ಹೆಸರಿಸುವುದಿಲ್ಲ,

ಹೆಣ್ಣುತನಕ್ಕೆ ಜಾತಿ ಇಲ್ಲ,
ಹೆಣ್ಣುತನಕ್ಕೆ ಕುಲವೂ ಇಲ್ಲ
ಹೆಣ್ಣ್ತನ ಜಾತಿ ಕುಲದಲ್ಲಿ ಹುಟ್ಟುವುದಿಲ್ಲ
ಅದಕ್ಕೆ ವರ್ಣಭೇದಗಳು ಗೊತ್ತಿಲ್ಲ

ಪ್ರತಿ ತಿಂಗಳಿನ ಅಂಡದ ರಕ್ತ,
ದಿನಂಪ್ರತಿ ಸ್ಖಲಿಸಿದ ವೀರ್ಯ
ಬೆಳಗಾದರೆ ಸಾರಿಸುವ ಕೆಸರು,
ಬಳಿಯುವ ಮಲಗಳಿಗೆ ಹೆಣ್ಣ್ತನ ಹೇಸುವುದಿಲ್ಲ.

ಹೆಣ್ಣ್ತನಕ್ಕೆ ಸ್ಪೃಶ್ಯ ಅಸ್ಪೃಶ್ಯಗಳಿಲ್ಲ
ಸ್ಪರ್ಶಿಸಿದರೆ ದ್ರವಿಸುತ್ತಾಳೆ
ಸಂಗ ಸುಖಕ್ಕೆ ತೆರೆದುಕೊಳ್ಳುವ,
ಜಗಜ್ಜನನದ ಪಿಂಡಾಂಡ ನೋವಿನಲೂ
ಜಗದಗಲ ಹಿಗ್ಗುವ ಯೋನಿಗೆ
ಲಿಂಗ, ವೃತ್ತಿ, ತಲ ನೆಲ ಜಲಗಳ ಹಂಗಿಲ್ಲ.

ತುಳುಕುವಾಗ ನೋಡಿದ ಕದಿನೋಟ
ಉಬ್ಬಿದೆದೆಗೆ ಆತು ಚೀಪಿದ ಆಟ
ತುಂಬಿದ ಸುಧೆ ಹೀರಿದ ಗುಟುಕಿನ ಪಾಠ
ಇಳಿವಯದ ಜೋಲಾಟ
ವಯಸ್ಸಿನಂತರಕ್ಕೆ ಹೆಣ್ಣ್ತನ ತಳಕುಹಾಕುವುದಿಲ್ಲ.




ಯಾವ ತನ, ತನನ ತಾನಗಳಿಗೂ
ಸೊಪ್ಪು ಹಾಕದ ಆ 'ಹೆಣ್ಣ್ತನ'ದ
ಅತ್ಯಾಚಾರ ನಡೆಯುವಲ್ಲಿ
ಮಾನವೀಯತೆಗೆ ಮುಖವಿಲ್ಲ
ಮನುಷ್ಯತ್ವಕ್ಕೆ ಅಸ್ತಿತ್ವವಿಲ್ಲ.

ಜಾತಿ ಜನಾಂಗ, ಲಿಂಗ ಜಂಗಮ,
ರಾಜಾರೋಷಗಳೆಲ್ಲ ಯಾವ ಲೆಕ್ಕ?

**ವಿದ್ಯಾ ಕುಂದರಗಿ**
'ಮಡಿಲು', ಪ್ಲಾಟ್ ನಂ. ೧೪೪
ಹೊಯ್ಸಳನಗರ
ಧಾರವಾಡ – ೫೮೦ ೦೦೩

ಮತ್ತು ಫ್ಲಿಫ್ತ್ ಅವಿನ್ಯೂ ರಸ್ತೆಗಳು ಕೂಡುವ ಕಡೆಗೆ ನಡೆಯತೊಡಗಿದ. ವಿಶಾಲವಾದ ರಸ್ತೆಯಲ್ಲಿ ನಡೆಯುತ್ತಾ ಅವನು ಬ್ರಾಡ್‌ವೇನಲ್ಲಿ ಉತ್ತರದ ಕಡೆಗೆ ಸಾಗಿದ. ವಿಶಾಲವಾದ ಮತ್ತು ಪ್ರಜ್ವಲಿಸುವ ದೀಪಗಳಿಂದ ಅಲಂಕರಿಸಿದ್ದ ರೆಸ್ಟೋರೆಂಟಿನ ಮುಂದೆ ನಿಂತ. ಉತ್ತಮವಾದ ಆಹಾರ ಸಿಗುವುದರಿಂದ ಉತ್ತಮ ಜನರು, ಉತ್ತಮ ಪೋಷಾಕಿನಲ್ಲಿ ಪ್ರತಿದಿನ ಸಂಜೆ ಸೇರುವ ಜಾಗ ಅದು.

ತನ್ನ ಪ್ಯಾಂಟ್ಸ್ ಚೆನ್ನಾಗಿಲ್ಲದಿದ್ದರೂ, ಮೊಣಕಾಲಿನಿಂದ ಮೇಲಿನ ಭಾಗವು ನೋಡಲು ಸರಿಯಾಗಿಯೇ ಇದೆ ಎಂದು ಸೋಪಿ ನಂಬಿದ್ದ. ಅವನ ಮುಖವು ಶುಭ್ರವಾಗಿತ್ತು. ಅವನ ಕೋಟು ಚೆನ್ನಾಗಿಯೇ ಇತ್ತು. ಹೇಗೋ ಮಾಡಿ ಟೇಬಲ್ ಮುಂದೆ ಕುಳಿತುಕೊಳ್ಳಲು ಸಾಧ್ಯವಾದರೆ ಗೆಲುವು ಖಚಿತ ಎಂದೆನಿಸಿತು. ಏಕೆಂದರೆ ಟೇಬಲ್‌ನ ಮೇಲೆ ಕಾಣಿಸುವ ದೇಹದ ಭಾಗವು ತಕ್ಕಮಟ್ಟಿಗೆ ಪರವಾಗಿರಲಿಲ್ಲವಷ್ಟೆ. ಅವನು ಕೇಳಿದ ಆಹಾರವನ್ನು ಸಪ್ಲೈಯರ್ ತಂದುಕೊಟ್ಟೇ ಕೊಡುತ್ತಾನೆ.

ಏನನ್ನು ತಿನ್ನಬೇಕು ಎಂದು ಸೋಪಿ ಯೋಚಿಸತೊಡಗಿದ. ಅವನ ಮನಃಪಟಲದಲ್ಲಿ ಪೂರ್ತಿ ಊಟದ ತಟ್ಟೆ ಕಾಣಲಾರಂಭಿಸಿತು. ಅದರ ಬೆಲೆಯು ತುಂಬ ದುಬಾರಿ ಆಗಿರಲಾರದು. ರೆಸ್ಟೋರೆಂಟಿನವರಿಗೆ ನಿಜವಾಗಿಯೂ ತುಂಬಾ ಕೋಪ ಬರಿಸುವುದು ಒಳ್ಳೆಯದಲ್ಲ, ಆದರೆ ಊಟ ಚೆನ್ನಾಗಿ ಆಯಿತೆಂದರೆ ಚಳಿಗಾಲದ ಆಶ್ರಯಕ್ಕೆ ಅವನ ಪ್ರಯಾಣವು ಸುಖಕರವಾಗುವುದು ಖಂಡಿತ.

ಸೋಪಿ ರೆಸ್ಟೋರೆಂಟಿನ ಒಳಗೆ ಹೋಗಲು ಮುಂದಡಿ ಇಟ್ಟ, ಆದರೆ ಅಷ್ಟರಲ್ಲಿ ರೆಸ್ಟೋರೆಂಟಿನ ಮುಖ್ಯ ಸಪ್ಲೈಯರ್ ಇವನ ಹಳೆಯ ಶೂಗಳನ್ನು ಹಾಗೂ ಅವನ ಕಾಲುಗಳನ್ನು ಮುಚ್ಚಿದ್ದ ಹರಕಲು ಬಟ್ಟೆಗಳನ್ನು ನೋಡಿಬಿಟ್ಟ. ಪಳಗಿದ್ದ ಬಲಿಷ್ಠವಾದ ಕೈಗಳು ಸದ್ದಿಲ್ಲದೆ ಅವನನ್ನು ಹಿಡಿದು ತಿರುಗಿಸಿ ಮತ್ತೆ ಹೊರಗಡೆಗೆ ತಂದುಬಿಟ್ಟವು.

ಸೋಪಿ ಬ್ರಾಡ್‌ವೇಯಿಂದ ಹಿಂತಿರುಗಿದ. ದ್ವೀಪಕ್ಕೆ ಹೋಗಲು ಅವನು ಆಸೆಪಟ್ಟು ಆಯ್ಕೆಮಾಡಿಕೊಂಡಿದ್ದ ಸುಲಭವಾದ ಮಾರ್ಗ ಹೀಗೆ ಸಾಧ್ಯವಾಗಲಿಲ್ಲ. ಅಲ್ಲಿಗೆ ಹೋಗಿ ಸೇರಲು ಬೇರೆ ಇನ್ನಾವುದಾದರೂ ಮಾರ್ಗವನ್ನು ಹುಡುಕಬೇಕು.

ಆರನೇ ಅವೆನ್ಯೂ ರಸ್ತೆಯ ಮೂಲೆಯಲ್ಲಿ ವಿಶಾಲವಾದ ಗಾಜಿನ ಕಿಟಕಿಯಿರುವ, ವಿದ್ಯುತ್ ದೀಪಗಳಿಂದ ಬೆಳಗುತ್ತಿದ್ದ ಅಂಗಡಿಯೊಂದಿತ್ತು. ಸೋಪಿ ಒಂದು ದೊಡ್ಡ ಕಲ್ಲನ್ನೆತ್ತಿಕೊಂಡು ಗಾಜಿನ ಕಿಟಕಿಗೆ ಎಸೆದ. ಎಲ್ಲಾ ಕಡೆಯಿಂದಲೂ ಜನ ಓಡಿ ಬಂದರು. ಅವರಲ್ಲಿ ಪೊಲೀಸಿನವನೊಬ್ಬ ಮೊದಲಿಗನಾಗಿದ್ದ. ಸೋಪಿ ನಿಶ್ಚಲನಾಗಿ ನಿಂತ. ಪೊಲೀಸಿನವನನ್ನು ನೋಡಿದ ಕೂಡಲೇ ಅವನ ಮುಖದಲ್ಲಿ ಒಂದು ತೃಪ್ತಿಯ ನಗೆ ಮೂಡಿತು. "ಯಾರ್ರೀ ಇದನ್ನು ಮಾಡಿದ್ದು?" ಪೊಲೀಸ್ ಕೇಳಿದ. "ನಾನೇ ಮಾಡಿರಬಹುದು ಅಂತ ನಿಮಗೆ ಅನ್ನಿಸೋದಿಲ್ಲವೇ?" ಎಂದು ಸೋಪಿ ಸ್ನೇಹದಿಂದ, ಖುಷಿಯಾಗಿಯೇ ಕೇಳಿದ. ಅವನ ಆಸೆ ಈಡೇರುವ ಕಾಲ ಸನ್ನಿಹಿತವಾಗುತ್ತಿತ್ತು.

ಆದರೆ ಆ ಪೊಲೀಸ್ ಸೋಪಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಲೇ ಇಲ್ಲ. ಏಕೆಂದರೆ ಗಾಜನ್ನು ಒಡೆಯುವಂಥ ಜನ ಪೊಲೀಸರ ಹತ್ತಿರ ಮಾತನಾಡಲು ನಿಲ್ಲುವುದಿಲ್ಲ. ಅವರು ಎಷ್ಟು ಸಾಧ್ಯವೋ ಅಷ್ಟು ಬೇಗ ಓಡಿಹೋಗುತ್ತಾರೆ. ಅಷ್ಟರಲ್ಲಿಯೇ ಸ್ವಲ್ಪ ದೂರದಲ್ಲಿ ರಸ್ತೆಯಲ್ಲೊಬ್ಬ ವ್ಯಕ್ತಿ ಓಡಿಹೋಗುತ್ತಿರುವುದನ್ನು ಪೊಲೀಸ್ ಗಮನಿಸಿದ. ಅವನ ಮೇಲೆ ಸಹಜವಾಗಿ ಸಂಶಯ ಬಂದು ಹಿಂದೆ ಓಡತೊಡಗಿದ. ನಿರಾಶನಾದ ಸೋಪಿ ನಿಧಾನವಾಗಿ ನಡೆಯಲು ಪ್ರಾರಂಭಿಸಿದ. ಅವನು ಎರಡನೇ ಬಾರಿಯೂ ಸೋತುಹೋಗಿದ್ದ.




ರಸ್ತೆಯ ಮತ್ತೊಂದು ಕಡೆ ಬೇರೆ ಒಂದು ರೆಸ್ಟೋರೆಂಟ್ ಇತ್ತು. ಅದು ಬ್ರಾಡ್‌ವೇನಲ್ಲಿದ್ದ ರೆಸ್ಟೋರೆಂಟ್‌ನಷ್ಟು ಚೆಂದವಾಗಿರಲಿಲ್ಲ. ಅಲ್ಲಿಗೆ ಹೋಗುವ ಜನರೂ ಅಷ್ಟೇನೂ ದೊಡ್ಡಮನುಷ್ಯರಲ್ಲ. ಆದ್ದರಿಂದ ಯಾವ ಆತಂಕವೂ ಇಲ್ಲದೆ ಸೋಪಿ ತನ್ನ ಹಳೆಯ ಶೂ ಹಾಗೂ ಹರಿದ ಬಟ್ಟೆಯೊಂದಿಗೆ ಒಳಗಡೆಗೆ ಹೋದ. ಅಲ್ಲಿ ಯಾರೂ ಅವನನ್ನು ತಡೆಯಲಿಲ್ಲ. ಅವನು ಊಟದ ಮೇಜಿನ ಮುಂದೆ ಕುಳಿತು ಭರ್ಜರಿ ಊಟವನ್ನು ಮುಗಿಸಿದ. ಊಟವಾದ ನಂತರ "ನಾನು ದುಡ್ಡು ನೋಡಿ ಯಾವುದೋ ಕಾಲ ಆಯ್ತು" ಎಂದುಬಿಟ್ಟ. "ಬೇಗ ಪೊಲೀಸರನ್ನು ಕರೆಯಿರಿ, ಒಬ್ಬ ಸಜ್ಜನನನ್ನು ಕಾಯಿಸಬೇಡಿ" ಎಂದ ಸೋಪಿ.

"ನಿನ್ನಂಥೋರಿಗೆ ಯಾವ ಪೊಲೀಸೂ ಬೇಡ ತಾಳು" ಎಂದು ಅಲ್ಲಿನ ವೇಟರ್ ಮತ್ತೊಬ್ಬ ವೇಟರ್‌ನನ್ನು ಕರೆದ.

ಇಬ್ಬರು ವೇಟರ್‌ಗಳೂ ಸೇರಿಕೊಂಡು ಸೋಪಿಯನ್ನು ಹೊರಗಡೆ ರಸ್ತೆಯ ಮೇಲೆ ಎಸೆದರು. ಅವನು ನಿಧಾನವಾಗಿ ಎದ್ದು, ಬಟ್ಟೆಯ ಮೇಲಿನ ಧೂಳನ್ನು ಕೊಡವಿಕೊಂಡ. ಈಗ ಜೈಲು ಕೇವಲ ಸೊಗಸಾದ ಕನಸಾಗಿಬಿಟ್ಟಿತ್ತು. ದ್ವೀಪ ಬಹಳ ದೂರ ಎನಿಸಿತು. ಹತ್ತಿರದಲ್ಲಿ ನಿಂತಿದ್ದ ಪೊಲೀಸ್ ಇವನನ್ನು ನೋಡಿ ನಕ್ಕು ಮುಂದೆ ನಡೆದ.

ಇನ್ನೊಮ್ಮೆ ಪ್ರಯತ್ನ ಮಾಡುವುದಕ್ಕೆ ಮುಂಚೆ ಸೋಪಿ ಸುಮಾರು ಅರ್ಧ ಮೈಲಿ ದೂರ ನಡೆದ.

ಈ ಬಾರಿಯ ಪ್ರಯತ್ನದಲ್ಲಿ ಯಶಸ್ಸು ಖಂಡಿತವೆಂದು ಭಾವಿಸಿದ. ಒಂದು ಅಂಗಡಿಯ ಕಿಟಕಿಯ ಬಳಿ ಸುಂದರವಾದ ಯುವತಿಯೊಬ್ಬಳು ನಿಂತು ಒಳಗಿನ ವಸ್ತುಗಳನ್ನು ಗಮನಿಸುತ್ತಿದ್ದಳು. ಆಕೆಯ ಹತ್ತಿರದಲ್ಲಿಯೇ ಒಬ್ಬ ಬೃಹದಾಕಾರದ ಪೊಲೀಸ್ ಪೇದೆ ನಿಂತಿದ್ದ.

ಆ ಯುವತಿಯನ್ನು ಮಾತನಾಡಿಸುವುದು ಸೋಪಿಯ ಯೋಜನೆಯಾಗಿತ್ತು. ಅವಳನ್ನು ನೋಡಿದರೆ ಆಕೆ ಯಾವುದೇ ಒಬ್ಬ ಅಪರಿಚಿತ ವ್ಯಕ್ತಿ ತನ್ನನ್ನು ಮಾತನಾಡಿಸುವುದನ್ನು ಇಷ್ಟಪಡದ ತುಂಬ ಒಳ್ಳೆಯ ಯುವತಿ ಅನಿಸುತ್ತಿತ್ತು. ಸೋಪಿ ತೊಂದರೆ ಕೊಟ್ಟರೆ ಆಕೆ ಆ ಪೊಲೀಸ್ ಪೇದೆಯ ಸಹಾಯವನ್ನು ಖಂಡಿತ ಕೇಳುತ್ತಾಳೆ. ಆಗ ಆ ಪೇದೆಯ ಕೈಗಳು ತನ್ನ ಹೆಗಲ ಮೇಲೆ ಬೀಳುತ್ತವೆ ಎಂಬ ನಿರೀಕ್ಷೆಯಿಂದ ಸೋಪಿಗೆ ತುಂಬ ಸಂತೋಷವಾಯಿತು. ಆಮೇಲೆ ಇನ್ನೇನು, ಅವನು ದ್ವೀಪಕ್ಕೆ ಹೋಗುವ ದಾರಿ ಸುಲಭವಾಗುತ್ತದೆ.

ಸೋಪಿ ಆಕೆಯ ಬಳಿಗೆ ಹೋದ, ಅಷ್ಟು ಹೊತ್ತಿಗೆ ಪೇದೆ ತನ್ನನ್ನೇ ಗಮನಿಸುತ್ತಿರುವುದನ್ನು ಕಂಡ. ಯುವತಿ ಕೆಲವು ಹೆಜ್ಜೆ ಮುಂದೆ ಹೋದಳು, ಸೋಪಿ ಆಕೆಯನ್ನು ಹಿಂಬಾಲಿಸಿದ, ಆಕೆಯ ಬಳಿ ನಿಂತು ಮಾತನಾಡಿಸಲು ತೊಡಗಿದ.

"ಗುಡ್ ಈವ್‌ನಿಂಗ್, ಸುಂದರಿ ನನ್ನ ಜೊತೆ ಸುತ್ತಾಡಿಕೊಂಡು ಬರುವಿಯಂತೆ ಬಾ."

ಪೊಲೀಸಿನವನು ಗಮನಿಸುತ್ತಲೇ ಇದ್ದ. ಯುವತಿ ಪೊಲೀಸನಿಗೆ ಕೇವಲ ಕೈ ಸನ್ನೆ ಮಾಡಿದರಾಯಿತು ಸೋಪಿ ತಾನು ಸೇರಬೇಕೆಂದಿರುವ ಸ್ಥಳಕ್ಕೆ ಹೋಗಿ ಬಿಡಬಹುದು. ಅಲ್ಲಿ ತಾನು ಎಷ್ಟು ಬೆಚ್ಚಗೆ, ಎಷ್ಟು ಆರಾಮವಾಗಿ ಇರಬಹುದು ಎಂದು ಸೋಪಿ ಆಲೋಚಿಸತೊಡಗಿದ.

ಯುವತಿ ಅವನ ಕಡೆ ತಿರುಗಿ, ಅವನ ತೋಳಿನ ಮೇಲೆ ಕೈ ಹಾಕಿದಳು !

"ಖಂಡಿತಾ ರಾಜ, ಕುಡಿಯಲು ಒಂದೆರಡು ಪೆಗ್ ಕೊಡಿಸಬೇಕು, ಅಷ್ಟೆ" ಎಂದು ಖುಷಿಯಾಗಿ ನುಡಿದ ಅವಳು, "ನಾನು ಇನ್ನೂ ಬೇಗ ನಿನ್ನನ್ನು ಮಾತನಾಡಿಸುತ್ತಿದ್ದೆ, ಆದರೆ ಆ ಪೊಲೀಸಿನವನು ಕೆಕ್ಕರಿಸಿಕೊಂಡು ನೋಡ್ತಿದ್ದ" ಎಂದಳು.

ಯುವತಿ ಕೈ ಹಿಡಿದುಕೊಂಡಳು. ಸೋಪಿ ಪೊಲೀಸಿನ ಎದುರಿಗೆ ನಡೆದುಕೊಂಡು ಹೋದ. ಅವನಿಗೆ ತುಂಬ ನಿರಾಸೆಯಾಗಿತ್ತು. ಅಯ್ಯೋ, ಅವನು ಇನ್ನೂ ಸ್ವತಂತ್ರನಾಗಿಯೇ ಇದ್ದ! ಅವನು ಎಂದೆಂದಿಗೂ ಸ್ವತಂತ್ರನಾಗಿಯೇ ಉಳಿಯಬೇಕೇ ?

ಸ್ವಲ್ಪ ದೂರ ನಡೆದ ಮೇಲೆ ಯುವತಿಯಿಂದ ತನ್ನ ಕೈಯನ್ನು ಬಿಡಿಸಿಕೊಂಡು ಸೋಪಿ ದೂರ ಓಡಿದ.

ಹಲವಾರು ಚಿತ್ರಮಂದಿರಗಳು ಇರುವಂತಹ ಜಾಗದಲ್ಲಿ ನಿಂತುಕೊಂಡ. ಇಲ್ಲಿನ ರಸ್ತೆಗಳು ಹೆಚ್ಚು ಬೆಳಕಿನಿಂದ ಕಂಗೊಳಿಸುತ್ತಿದ್ದವು ಮತ್ತು ನಗರದ ಬೇರೆ ಭಾಗಗಳಿಗಿಂತ ಈ ಭಾಗದಲ್ಲಿ ಮನಸ್ಸಿಗೆ ಹೆಚ್ಚು ಸಂತೋಷ ಸಿಗುತ್ತಿತ್ತು. ಶ್ರೀಮಂತ ಗಂಡಸರು ಮತ್ತು

ಹೆಂಗಸರು ಬೆಚ್ಚಗಿನ ಕೋಟುಗಳನ್ನು ಧರಿಸಿಕೊಂಡು ಚಳಿಗಾಲದ ಗಾಳಿಯನ್ನು ಅನುಭವಿಸುತ್ತಾ, ಸಂತೋಷದಿಂದ ಓಡಾಡುತ್ತಿದ್ದರು. ಯಾವ ಪೊಲೀಸನೂ ತನ್ನನ್ನು ಬಂಧಿಸುವುದಿಲ್ಲ ಎಂಬ ಭಯ ಸೋಪಿಯನ್ನು ಕಾಡಿತು.

ದೊಡ್ಡದಾದ ಸಿನಿಮಾ ಥಿಯೇಟರಿನ ಬಳಿ ನಿಂತಿರುವ ಪೊಲೀಸನ ಮುಂದೆ ಬಂದು ನಿಂತ. ಬೇರೆ ಬೇರೆ ರೀತಿಯಲ್ಲಿ ಅವನು ತನ್ನನ್ನು ಹಿಡಿದುಕೊಂಡು ಹೋಗುವಂತೆ ಏನನ್ನಾದರೂ ಪ್ರಯತ್ನ ಮಾಡಬೇಕು ಎಂದುಕೊಂಡ.

ಇದ್ದಕ್ಕಿದ್ದ ಹಾಗೆ ತುಂಬ ಕುಡಿದಿರುವವನಂತೆ ಜೋರಾಗಿ, ಎಷ್ಟು ಜೋರಾಗಿ ಧ್ವನಿ ಏರಿಸಲು ಸಾಧ್ಯವೋ ಅಷ್ಟು ಜೋರಾಗಿ, ಕೂಗಲಾರಂಭಿಸಿದ, ಕುಣಿದು ಕುಪ್ಪಳಿಸಿದ.

ಪೊಲೀಸಿನವನು ಸೋಪಿಗೆ ಬೆನ್ನು ಹಾಕಿ, ಹತ್ತಿರದಲ್ಲೇ ನಿಂತಿದ್ದ ವ್ಯಕ್ತಿಗೆ ಹೇಳಿದ: "ಆ ಕಾಲೇಜು ಹುಡುಗರಿರ್ತಾರಲ್ಲ ಅವರಲ್ಲಿ ಇವನೂ ಒಬ್ಬ, ಯಾರಿಗೂ ತೊಂದರೆ ಮಾಡೋದಿಲ್ಲ, ಅವರನ್ನ ಕೂಗಿಕೊಳ್ಳಕ್ಕೆ ಬಿಡಿ ಅಂತ ನಮಗೆ ಮೇಲಿನಿಂದ ಆದೇಶವಿದೆ."

ಸೋಪಿ ತಣ್ಣಗಾದ, ಯಾವ ಪೊಲೀಸಿನವನೂ ಕೊನೆಗೂ ಅವನನ್ನು ಮುಟ್ಟುವುದಿಲ್ಲವೇ? ಅವನು ದ್ವೀಪದ ಬಗ್ಗೆ ಆಲೋಚಿಸತೊಡಗಿದ, ಅದು ಎಲ್ಲೋ ದೂರದ ಸ್ವರ್ಗ ಎಂಬಂತೆ. ತೆಳ್ಳನೆಯ ಕೋಟನ್ನು ತನ್ನ ಸುತ್ತಲೂ ಎಳೆದುಕೊಂಡ, ತಣ್ಣನೆಯ ಗಾಳಿ ಬೀಸುತ್ತಿತ್ತು.

ಆಗ ಒಂದು ಅಂಗಡಿಯಲ್ಲಿ ದಿನಪತ್ರಿಕೆಯನ್ನು ಖರೀದಿಸುತ್ತಿದ್ದ ವ್ಯಕ್ತಿಯನ್ನು ನೋಡಿದ. ಆ ವ್ಯಕ್ತಿಯು ತನ್ನ ಕೊಡೆಯನ್ನು ಬಾಗಿಲ ಬಳಿ ಇರಿಸಿದ್ದ. ಸೋಪಿ ಅಂಗಡಿಯ ಒಳಗೆ ನುಗ್ಗಿ ಕೊಡೆಯನ್ನು ಎತ್ತಿಕೊಂಡು ನಿಧಾನವಾಗಿ ನಡೆಯಲು ಪ್ರಾರಂಭಿಸಿದ. ತಕ್ಷಣವೇ ಆ ವ್ಯಕ್ತಿ ಸೋಪಿಯನ್ನು ಅಟ್ಟಿಸಿಕೊಂಡು ಬಂದ.

"ಅದು ನನ್ನ ಕೊಡೆ" ಎಂದ ಆತ.

"ಓ ಹೌದಾ"? ಹಾಗಾದರೆ ಸರಿ ನೀವು ಪೊಲೀಸಿನವನನ್ನ ಕರೆಯಿರಿ ? ನಿಮ್ಮ ಕೊಡೆ ತಾನೇ ? ನೀವು ಪೊಲೀಸರನ್ನು ಯಾಕೆ ಕರೀಬಾರದು ? ಅಲ್ಲಿ ಮೂಲೇನಲ್ಲೇ ಒಬ್ಬ ಪೊಲೀಸ್ ನಿಂತಿದಾನೆ ನೋಡಿ".

ಈಗ ಆ ವ್ಯಕ್ತಿಗೆ ಹಿಂಜರಿಕೆಯುಂಟಾಗಿ ಹಿಂಬಾಲಿಸುತ್ತಿದ್ದವನು ನಿಧಾನಿಸಲಾರಂಭಿಸಿದ. ಸೋಪಿ ಸಹ ಅವನು ಹತ್ತಿರವಾಗಲಿ ಎಂದು ನಡಿಗೆಯನ್ನು ನಿಧಾನ ಮಾಡಿದ. ಆದರೆ ಯಾಕೋ ಈ ಬಾರಿ ಕೂಡ ತಾನು ಸೋಲುತ್ತೇನೆಂದು ಅವನಿಗೆ ಅನಿಸಲಾರಂಭಿಸಿತು.

ಪೊಲೀಸ್ ಅವರಿಬ್ಬರನ್ನೂ ನೋಡುತ್ತಿದ್ದ.

"ನಾನು", ಕೊಡೆ ಮಾಲೀಕ ತಡವರಿಸ ಲಾರಂಭಿಸಿದ, "ಅದು ನಿಮ್ಮದಾಗಿದ್ದರೆ ಸರಿ ಬಿಡಿ. ತಪ್ಪು ನನ್ನದೇ, ಅದು, ಹೇಗಾಗುತ್ತದೆ ಅಂತ ನಿಮಗೆ ಗೊತ್ತಲ್ಲ! ಈ ಕೊಡೆ ಇವತ್ತು ಬೆಳಿಗ್ಗೆ ರೆಸ್ಟೋರೆಂಟ್‌ನಲ್ಲಿ ಸಿಕ್ಕಿತು. ಇದು ನಿಮ್ಮದೇ ಅಂತ ಹೇಳ್ತಿದೀರಲ್ಲ– ಸರಿ ಬಿಡಿ.."

"ಹೌದು ಇದು ನನ್ನದು" ಸಿಟ್ಟಿನಿಂದ ಸೋಪಿ ಕೂಗಿದ.

ಕೊಡೆ ಮಾಲೀಕ ತರಾತುರಿಯಲ್ಲಿ ಜಾಗ ಖಾಲಿ ಮಾಡಿದ. ಯುವತಿಯೊಬ್ಬಳು ರಸ್ತೆ ದಾಟಲು



**ನೀರು**

ಸಿರಿವಂತರು ನೀರಲಿ
ಹೊರಳಾಡುತ್ತಾರೆ
ಬಡವರು
ನೀರಿಗಾಗಿ
ಬಡಿದಾಡುತ್ತಾರೆ

**ಶ್ರೀಮತಿ ಪ್ರಭಾವತಿ ಎಸ್. ದೇಸಾಯಿ**
ವಿಜಯಪುರ

ಸಹಾಯಮಾಡಲಿಕ್ಕಿದ್ದ ಪೊಲೀಸ್ ಹೊರಟುಹೋದ. ಸೋಪಿ ಪೂರ್ವದಿಕ್ಕಿನೆಡೆಗೆ ಹೆಜ್ಜೆ ಹಾಕಿದ. ಆ ಕೊಡೆಯನ್ನು ಎಷ್ಟು ದೂರ ಸಾಧ್ಯವೊ ಅಷ್ಟು ದೂರಕ್ಕೆ ಎಸೆದ. ಪೊಲೀಸರ ಬಗ್ಗೆ ಚೆನ್ನಾಗಿ ಬೈದುಕೊಂಡ, ಶಪಿಸಿದ. ತನ್ನನ್ನು ಅವರು ಬಂಧಿಸಬೇಕು ಎಂಬುದು ಅವನ ಆಸೆಯಾಗಿರೋವಾಗ ಈ ಹಾಳು ಪೊಲೀಸರು ಇವನು ಯಾವ ತಪ್ಪನ್ನೂ ಮಾಡಲು ಸಾಧ್ಯವಿಲ್ಲದ ರಾಜ ಅಂತ ನಂಬಿದ ಹಾಗಿದೆ.

ಕೊನೆಗೆ ಪೂರ್ವ ದಿಕ್ಕಿನ ನಿರ್ಜನ ರಸ್ತೆಗೆ ಸೋಪಿ ಬಂದು ತಲುಪಿದ. ಮತ್ತೆ ಅಲ್ಲಿಂದ ಹಿಂದಿರುಗಿ ದಕ್ಷಿಣ ದಿಕ್ಕಿಗೆ ಮ್ಯಾಡಿಸನ್ ಸ್ಕ್ವೇರ್ ಕಡೆಗೆ ನಡೆದ. ಅವನು ಮನೆಗೆ ಹಿಂದಿರುಗುತ್ತಿದ್ದ, ಮನೆಯೆಂದರೆ ಏನು, ಪಾರ್ಕಿನಲ್ಲಿದ್ದ ಒಂದು ಕಲ್ಲುಬೆಂಚು ಅಷ್ಟೆ.

ಪ್ರಶಾಂತವಾದ ರಸ್ತೆಯ ಮೂಲೆಯಲ್ಲಿ ಸೋಪಿ ನಿಂತ. ಅಲ್ಲಿ ಒಂದು ಬಹಳ ಪುರಾತನವಾದ ಚರ್ಚು ಇತ್ತು. ಒಂದು ಬಣ್ಣದ ಗಾಜಿನ ಕಿಟಕಿಯಿಂದ ಬೆಳಕಿನ ಕಿರಣವೊಂದು ಹೊರಸೂಸುತ್ತಿತ್ತು. ಇಂಪಾದ ಸಂಗೀತ ಸೋಪಿಯ ಕಿವಿಗಳನ್ನು ಆಕರ್ಷಿಸಿ ಅವನನ್ನು ಅಲ್ಲೇ ತಡೆದು ನಿಲ್ಲಿಸಿತು.

ಪ್ರಶಾಂತವಾಗಿ ಬೆಳಗುತ್ತಿದ್ದ ಚಂದ್ರ ಆಕಾಶದಲ್ಲಿದ್ದ. ಕೆಲವೇ ಕೆಲವು ಜನ ಅಲ್ಲಿ ನಡೆದು ಹೋಗುತ್ತಿದ್ದರು. ಮೇಲಿನಿಂದ ಹಕ್ಕಿಗಳ ಕಲರವ ಅವನಿಗೆ ಕೇಳಿಸುತ್ತಿತ್ತು.

ಚರ್ಚಿನಿಂದ ತೇಲಿಬಂದ ಧಾರ್ಮಿಕ ಕೀರ್ತನೆ ಸೋಪಿಯನ್ನು ಅಲ್ಲೇ ನಿಲ್ಲಿಸಿತು. ಹಲವಾರು ವರ್ಷಗಳ ಹಿಂದೆ ಈ ಗೀತೆಯನ್ನು ಅವನು ಕೇಳಿದ್ದ. ಅಂದಿನ ದಿನಗಳಲ್ಲಿ ಅವನ ಬದುಕಿನಲ್ಲಿ ಅಮ್ಮ, ಹೂವುಗಳು, ಜೀವನದಲ್ಲಿ ಭರವಸೆ, ಸ್ನೇಹಿತರು, ಶುಭ್ರವಾದ ಚಿಂತನೆಗಳು ಹಾಗೂ ಶುಭ್ರವಾದ ಬಟ್ಟೆಗಳು ಎಲ್ಲವೂ ಇದ್ದವು.

ಸೋಪಿಯ ಮನಸ್ಸು ಈ ರೀತಿಯ ಲಹರಿಗೆ, ಬದಲಾವಣೆಗೆ ಆ ಕ್ಷಣದಲ್ಲಿ ಸಜ್ಜಾಗಿತ್ತು. ಪುರಾತನ ಚರ್ಚಿನ ಬಳಿಗೆ ಅವನು ಸರಿಯಾದ ಸಮಯದಲ್ಲೇ ಬಂದಿದ್ದ. ಅವನ ಹೃದಯ ಇದ್ದಕ್ಕಿದ್ದಂತೆ ಅದ್ಭುತವಾಗಿ ಬದಲಾಯಿತು. ತಾನು ಎಷ್ಟರಮಟ್ಟಿಗೆ ಕೆಳಗೆ ಬಿದ್ದು ಹೋಗಿದ್ದೇನೆ ಎಂಬುದನ್ನು ಅವನು ದುಃಖದಿಂದ ಭೀತಿಯಿಂದ ಕಂಡುಕೊಂಡ. ತನ್ನ ನಿಷ್ಪ್ರಯೋಜಕ ದಿನಗಳನ್ನು, ತಪ್ಪಾದ ಆಕಾಂಕ್ಷೆಗಳನ್ನು, ಸತ್ತಂತಹ ಭರವಸೆಗಳನ್ನು, ತಾನು ಕಳೆದುಕೊಂಡ ಮನಸ್ಸಿನ ಸಂಕಲ್ಪ ಶಕ್ತಿಯನ್ನು ಅವನು ಅರ್ಥಮಾಡಿಕೊಂಡ.

ಆ ಕ್ಷಣದಲ್ಲಿ ಅವನ ಹೃದಯ, ಮನಸ್ಸು ಅವನ ಅಂತರಾತ್ಮದಲ್ಲಿ ಆದ ಬದಲಾವಣೆಗೆ ಸ್ಪಂದಿಸಿತು. ತನ್ನ ಜೀವನವನ್ನು ಬದಲಾಯಿಸಿಕೊಳ್ಳಲು, ಈ ಕೊಳಕಿನಿಂದ ತನ್ನನ್ನು ಮೇಲೆತ್ತಿಕೊಳ್ಳಲು ಹೋರಾಡಲೇಬೇಕು ಅನ್ನಿಸಿತು. ತನ್ನನ್ನು ತಾನೇ ನೈಜ ಮನುಷ್ಯನಾಗಿ ರೂಪಿಸಿಕೊಳ್ಳಬೇಕು ಎಂದುಕೊಂಡ.

ಅವನು ಇನ್ನೂ ಯುವಕನಾಗಿರುವುದರಿಂದ ಸಾಕಷ್ಟು ಸಮಯಾವಕಾಶವಿದೆ. ಅವನು ತನಗೆ ಹಿಂದಿದ್ದ ಜೀವನದ ಗುರಿಯನ್ನು ಮರಳಿ ಕಂಡುಕೊಂಡು ಅದನ್ನು ಅನುಸರಿಸಬೇಕು ಎಂದುಕೊಂಡ. ಆ ಇಂಪಾದ ಸಂಗೀತ ಅವನ ಲಹರಿಯನ್ನು, ಅವನನ್ನು ಬದಲಾಯಿಸಿ ಬಿಟ್ಟಿತ್ತು. ನಾಳೆ ಅವನು ಒಂದು ಕೆಲಸವನ್ನು ಹುಡುಕಿ ಕೊಳ್ಳಬೇಕು. ಒಮ್ಮೆ ಒಬ್ಬ ವ್ಯಕ್ತಿ ಅವನಿಗೆ ಕೆಲಸ ಕೊಡುವುದಾಗಿ ಹೇಳಿದ್ದ, ಅವನನ್ನು ನಾಳೆ ಹುಡುಕಬೇಕು. ಅವನು ಪ್ರಪಂಚದಲ್ಲಿ ಎಲ್ಲೇ ಇರಬಹುದು, ಯಾರೇ ಆಗಿರಬಹುದು. ಆದರೆ ಅವನು ನಾಳೆ....

ಸೋಪಿಯ ಭುಜದ ಮೇಲೆ ಯಾರೋ ಕೈ ಹಾಕಿದಂತಾಯಿತು. ತಕ್ಷಣ ಅವನು ಹಿಂದಿರುಗಿ ನೋಡಿದರೆ ಎದುರಿಗೆ ಗಡವನಂಥ ಮುಖದ ಒಬ್ಬ ಪೊಲೀಸ್ ನಿಂತಿದ್ದ.

"ಇಲ್ಲಿ ಅಡ್ಡಾಡಿಕೊಂಡು ಏನು ಮಾಡ್ತಾ ಇದ್ದೀಯಾ?" ಪೊಲೀಸ್ ಘರ್ಜಿಸಿದ.

"ಏನೂ ಇಲ್ಲ", ಎಂದ ಸೋಪಿ.

"ನಾನು ಅದನ್ನು ನಂಬುತ್ತೀನಿ ಅಂದುಕೊಂಡೆಯಾ?" ಎಂದ ಪೊಲೀಸ್.

ಸೋಪಿ ತನ್ನ ಹೊಸದಾಗಿ ಉದ್ಭವಿಸಿದ್ದ ಎಲ್ಲ ಶಕ್ತಿಯನ್ನು ಉಪಯೋಗಿಸಿ ವಾದ ಮಾಡಲು ಯತ್ನಿಸಿದ. ಆದರೆ ನ್ಯೂಯಾರ್ಕಿನ ಪೊಲೀಸ ರೊಂದಿಗೆ ವಾದ ಮಾಡುವುದು ಬುದ್ಧಿವಂತಿಕೆಯಲ್ಲ.

"ನನ್ನ ಜೊತೆಗೆ ಬಾ" ಎಂದ ಪೊಲೀಸ್.

ಮಾರನೆಯ ದಿನ ನ್ಯಾಯಾಧೀಶರು "ಮುಂದಿನ ಮೂರು ತಿಂಗಳು ಆ ದ್ವೀಪದಲ್ಲಿ" ಎಂದು ಸೋಪಿಯತ್ತ ನೋಡಿ ಘೋಷಿಸಿದರು.

ಮೂಲ : **ಓ ಹೆನ್ರಿ**
ಕನ್ನಡಾನುವಾದ : **ಜ಼ಾಹಿದಾ ಶಿರೀನ್**
ನಂ. ೬೧, ೪ನೇ ಅಡ್ಡರಸ್ತೆ, ಅಶೋಕನಗರ
ಎನ್. ಆರ್. ಕಾಲೋನಿ ಹತ್ತಿರ, ಬಸವನಗುಡಿ
ಬೆಂಗಳೂರು – ೫೬೦ ೦೫೦



ಹಾರೋಹಳ್ಳಿ ರವೀಂದ್ರ




# ತೂತುಕುಡಿಯಲ್ಲಿ ತಾಮ್ರದ ಗಣಿಗಾರಿಕೆಯ ಸ್ಟೆರ್ಲೈಟ್ ಕಂಪನಿ ಮತ್ತು ಗೋಲಿಬಾರ್

**ತೂ**ತುಕುಡಿಯಲ್ಲಿ ಗೋಲಿಬಾರ್ ನಡೆದು ೧೩ ಮಂದಿ ಮೃತಪಟ್ಟಿದ್ದಾರೆ. ಈ ಕಾರಣಕ್ಕಾಗಿ ಇಡೀ ತಮಿಳುನಾಡಿನ ಜನ ಶಾಂತಿಯುತವಾಗಿಯೇ ಬಂದ್ ನಡೆಸುವುದರೊಂದಿಗೆ (ಎಐಎಡಿಎಂಕೆ) ಪಕ್ಷದಿಂದ ಮುಖ್ಯಮಂತ್ರಿಯಾಗಿರುವ ಈಡಪ್ಪಡಿ ಕೆ. ಪಳನಿಸ್ವಾಮಿ ಅವರು ತಮ್ಮ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಬೇಕೆಂದು ಡಿಎಂಕೆ ಪಕ್ಷದ ಕನಿಮೋಳಿ ನೇತೃತ್ವದಲ್ಲಿ ಇಡೀ ತಮಿಳುನಾಡಿನಲ್ಲಿ ಬೃಹತ್ ಬಂದ್ ನಡೆಯಿತು. ಈ ಬಂದ್‌ಗೆ ಡಿಎಂಕೆಯ ಮಿತ್ರಪಕ್ಷಗಳಾದ ಕಾಂಗ್ರೆಸ್, ಐಯುಎಂಎಲ್, ಎಂಎಂಕೆ, ಎಂಡಿಎಂಕೆ, ವಿಸಿಕೆ, ಸಿಪಿಐ ಹಾಗೂ ಸಿಪಿಎಂ ಸೇರಿದಂತೆ ಎಲ್ಲಾ ರಾಜಕೀಯ ಪಕ್ಷಗಳು, ಕಾರ್ಯಕರ್ತರು ಮತ್ತು ಸಾಮಾನ್ಯ ಜನರು ಸೇರಿ ಸ್ಪಂದಿಸಿದ್ದಾರೆ. ತಮಿಳುನಾಡಿನ ಪುದುಚೇರಿಯಲ್ಲಿ ಜನಜೀವನ ಅಸ್ತವ್ಯಸ್ತವಾಗಿದ್ದರೂ, ಪೊಲೀಸ್ ಭದ್ರತೆಯಿಂದ ಒಟ್ಟು ತಮಿಳುನಾಡು ಸಹಜ ಸ್ಥಿತಿಗೆ ಮರಳಿದೆ. ಆದರೆ ತೂತುಕುಡಿಯಲ್ಲಿ ೧೩ ಜನರ ಮೇಲೆ ನಡೆದ ಗೋಲಿಬಾರ್‌ಗೆ ಸಂಬಂಧಿಸಿದಂತೆ ಸಿಬಿಐ ತನಿಖೆಯಾಗಬೇಕು ಎಂದು ಅಲ್ಲಿನ ಮಿತ್ರಪಕ್ಷಗಳು ಪಟ್ಟುಹಿಡಿದು ಕೂತಿವೆ.

ತಮಿಳುನಾಡಿನ ತೂತುಕುಡಿಯಲ್ಲಿ ೧೩ ಜನರು ಗೋಲಿಬಾರ್‌ನಲ್ಲಿ ಹತ್ಯೆಯಾಗಲು ಕಾರಣವೇನು ? ಹಾಗಾದರೆ ಗೋಲಿಬಾರ್‌ಗೆ ಬಲಿಯಾದ ಜನ ಯಾವುದರ ವಿರುದ್ಧ ಹೋರಾಟ ಮಾಡುತ್ತಿದ್ದರು ಎಂಬುದು ತುಂಬ ಗಂಭೀರವಾದದ್ದು. ಪರಿಸರ ಮತ್ತು ಜನರನ್ನು ಬಲಿತೆಗೆದುಕೊಳ್ಳುತ್ತಿದ್ದ ಒಂದು ಕಂಪನಿಯ ವಿರುದ್ಧ ಮಾಡಿದ ಹೋರಾಟಕ್ಕಾಗಿ ೧೩ ಜನರು ಗೋಲಿಬಾರ್‌ಗೆ

ಕಂಪನಿಗಳು ಉತ್ಪಾದಿಸುವ ವಸ್ತುಗಳು ಹಾಗೂ ಇತರ ಸಾಮಗ್ರಿಗಳು ಮನುಷ್ಯನ ಆಧುನಿಕತೆಗೆ ಬಹುಮುಖ್ಯ. ಆದರೆ ಅವುಗಳು ಪರಿಸರ ಮತ್ತು ಜನಸಾಮಾನ್ಯರ ಆರೋಗ್ಯಕ್ಕೆ ಧಕ್ಕೆಯಾಗುವಂತೆ ಇರಬಾರದು. ಕಾನೂನು ಕಟ್ಟಳೆಗಳನ್ನು ಮೀರುವಂತಿರಬಾರದು. ಇಷ್ಟೆಲ್ಲಾ ತಂತ್ರಜ್ಞಾನ ಹೊಂದಿರುವ ಜಗತ್ತಿನಲ್ಲಿ ಆರೋಗ್ಯ ಮತ್ತು ಪರಿಸರವನ್ನು ಕಾಪಾಡುವಂತಹ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವತ್ತ, ಅದನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ವಿಜ್ಞಾನ ಸಾಗಬೇಕು. ಹಾಗೆ ನೋಡಿದರೆ ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದ ತಾಮ್ರದ ಬಳಕೆಯಿಂದ ಯಾವುದೇ ಹಾನಿಗಳು ಸಂಭವಿಸಿರುವ ಉದಾಹರಣೆಗಳಿಲ್ಲ.



## ಎರಡು ದಶಕದತ್ತ 'ಹೊಸತು'

'ಹೊಸತು' ಪತ್ರಿಕೆ ಮುಂದಿನ ಆಗಸ್ಟ್ ತಿಂಗಳಿಗೆ ಇಪ್ಪತ್ತನೇ ವರ್ಷಕ್ಕೆ ಕಾಲಿಡುತ್ತಿದೆ. ಕಳೆದ ಹತ್ತೊಂಬತ್ತು ವರ್ಷಗಳಿಂದ 'ಹೊಸತು'ವಿನ ಹೊಸತನಕ್ಕೆ ಕಾರಣರಾದ ಲೇಖಕರು ಮತ್ತು ಓದುಗರ ಬಳಗದ ಕಾಣ್ಕೆಯನ್ನು ಸಂಪಾದಕೀಯ ಮಂಡಲಿ, ನವಕರ್ನಾಟಕ ಪ್ರಕಾಶನ ಅಭಿಮಾನದಿಂದ ಸ್ಮರಿಸುತ್ತದೆ. ಮುಂದಿನ ದಿನಗಳಲ್ಲಿ 'ಹೊಸತು' ಇನ್ನೂ ಅರ್ಥಪೂರ್ಣಗೊಳ್ಳಲು ಓದುಗರ, ಲೇಖಕರ, ಹಿತೈಷಿಗಳ ಸಲಹೆ, ಸೂಚನೆ, ಅಭಿಪ್ರಾಯಗಳನ್ನು ಸಂಪಾದಕೀಯ ಮಂಡಲಿ ನಿರೀಕ್ಷಿಸುತ್ತದೆ.

**– ಸಂಪಾದಕ**

ತುತ್ತಾಗಬೇಕಾಯಿತು. ವೇದಾಂತ ರಿಸೋರ್ಸ್ ಎಂಬುದು ಈ ಪ್ರಪಂಚದಲ್ಲಿಯೇ ಬಹುದೊಡ್ಡ ಕಂಪನಿಗಳಲ್ಲೊಂದು. ಅನೀಲ್ ಅಗರವಾಲ್ ಎಂಬುವವರು ಈ ಕಂಪನಿಯ ಮೂಲ ಸಂಸ್ಥಾಪಕರಾದರೆ, ನವೀನ್ ಅಗರವಾಲ್ ಎಂಬುವವರು ಎಕ್ಸಿಕ್ಯೂಟಿವ್ ಚೇರ್‌ಮನ್ ಆಗಿದ್ದಾರೆ. ೨೦೧೭ರ ನಂತರ ಈ ಕಂಪನಿಯ ಸಿಇಒ ಕುಲದೀಪ್ ಕೆ. ಕೌರ್ ಎಂಬುವವರು. ಈ ಕಂಪನಿಯು ಮೊದಲು ೧೯೭೬ರಲ್ಲಿ ಮಹಾರಾಷ್ಟ್ರದ ಮುಂಬೈನಲ್ಲಿ ಪ್ರಾರಂಭವಾಯಿತು. ಅನಂತರ ಈ ಕಂಪನಿಯು ಇಂಗ್ಲೆಂಡ್‌ನಲ್ಲಿ ನೆಲೆಯೂರಿ, ಬೇರೆ ಬೇರೆ ದೇಶಗಳಲ್ಲಿಯೂ ೨೫೦ ಕಂಪನಿಯನ್ನು ತನ್ನ ಉಪಶಾಖೆಯನ್ನಾಗಿ ಮಾಡಿಕೊಳ್ಳುವುದರೊಂದಿಗೆ, ಇಂಗ್ಲೆಂಡನ್ನೇ ಕಂಪನಿಯ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡಿದೆ. ಈ ಕಂಪನಿಯು ೨೦೧೬ರಲ್ಲಿ ಇಂಗ್ಲೆಂಡ್‌ನಲ್ಲಿ ನಡೆದ ಜೈಪುರ ಸಾಹಿತ್ಯ ಸಮ್ಮೇಳನಕ್ಕೆ ಬಹುಮೊತ್ತದ ಹಣವನ್ನು ನೀಡಿತ್ತು. ಅದಕ್ಕೆ ಸಂಬಂಧಿಸಿದಂತೆ ಕಂಪನಿಯ ವಿರುದ್ಧ ಹಲವು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಲೇಖಕರ ಪರ – ವಿರೋಧವು ಜರುಗಿತ್ತು.

ಸೆಪ್ಟೆಂಬರ್ ೮, ೧೯೭೫ರಂದು ಕಲ್ಕತ್ತಾದಲ್ಲಿ ಅನಿಲ್ ಅಗರವಾಲ್ ಅವರು ಸ್ಟೆರ್ಲೈಟ್ ಇಂಡಸ್ಟ್ರೀಸ್ (ಇಂಡಿಯಾ) ಲಿಮಿಟೆಡ್ ಎಂಬ ಕಂಪನಿಯನ್ನು ಸ್ಥಾಪಿಸುತ್ತಾರೆ. ಈ ಕಂಪನಿಯು ಇಂದಿಗೂ ಸಹ ಇಂಗ್ಲೆಂಡ್‌ನಲ್ಲಿರುವ ವೇದಾಂತ ರಿಸೋರ್ಸ್ ಕಂಪನಿಗೆ ಉಪಶಾಖೆಯಾಗಿ ಕಾರ್ಯನಿರ್ವಹಿಸುತ್ತಿದೆ. ಸ್ಟೆರ್ಲೈಟ್ ಕಂಪನಿಯು ವೇದಾಂತ ರಿಸೋರ್ಸ್ ಕಂಪನಿಗಿಂತ ಒಂದು ವರ್ಷ ಮುಂಚಿತ ವಾಗಿಯೇ ಸ್ಥಾಪಿತವಾದರೂ ಭಾರತದಲ್ಲಿ ಹಲವು ಪ್ರಾಜೆಕ್ಟ್‌ಗಳೊಂದಿಗೆ ಇಂಗ್ಲೆಂಡ್‌ನಲ್ಲಿರುವ ವೇದಾಂತ ರಿಸೋರ್ಸ್ ಕಂಪನಿಗೆ, ಉಪಶಾಖೆಯಾಗಿ ತನ್ನ ಕಾರ್ಯಕ್ಷೇತ್ರವನ್ನು ಮುಂದುವರಿಸುತ್ತಲೇ ಇದೆ. ಇದೀಗ ಈ ಸ್ಟೆರ್ಲೈಟ್ ಕಂಪನಿಯ ಸಿಇಒ ಪಿ. ರಾಮನಾಥ್. ಕಲ್ಕತ್ತಾದಲ್ಲಿ ಪ್ರಾರಂಭವಾದ ಸ್ಟೆರ್ಲೈಟ್ ಕಂಪನಿ ೨೩೦೦ ಕೋಟಿ ಪ್ರಾಜೆಕ್ಟ್‌ನ ತಾಮ್ರದ ಗಣಿಗಾರಿಕೆ ಮತ್ತು ಸಂಸ್ಕರಣೆಯನ್ನು ತಮಿಳುನಾಡಿನ ತೂತುಕುಡಿಯಲ್ಲಿ ನಡೆಸುತ್ತಿದೆ. ತಾಮ್ರದ ಸಂಸ್ಕರಣೆಯಲ್ಲಿ ತೊಡಗಿರುವ ಈ ಕಂಪನಿಯ ಆದಾಯ ೨೦೦೭–೦೮ಕ್ಕೆ ೧೨೬.೫೮ ಬಿಲಿಯನ್.

ಜಾಗತೀಕರಣದಲ್ಲಿ ವಿಜ್ಞಾನ – ತಂತ್ರಜ್ಞಾನದ ಮೂಲಕ ತಾಮ್ರವನ್ನು ಪರಿಚಯಿಸಲಾಗುತ್ತಿದೆ. ಆದರೆ ಆಧುನಿಕ ಕಂಪನಿಗಳಿಗಿಂತ ಹಿಂದೆಯೇ ಜನರಿಗೆ ತಾಮ್ರದ ಪರಿಚಯವಿತ್ತು. ಪ್ರಾಚೀನ ಕಾಲದ ಶಿಲಾಯುಗ ಕೊನೆಯ ಭಾಗ ಕ್ರಿ. ಪೂ. ೧೦೦೦೦ದಲ್ಲಿ ತಾಮ್ರದ ಶೋಧ ನಡೆದಿದೆ. ಆ ವೇಳೆಯಲ್ಲಿ ಬದುಕಿದ್ದ ನವಶಿಲಾಯುಗದ ಜನರು ಕ್ರಿ. ಪೂ. ೮೦೦೦ದ ಹೊತ್ತಿಗೆ ತಾಮ್ರವನ್ನು ಮೊದಲ ಬಾರಿಗೆ ಬಳಕೆಗೆ ತಂದಿದ್ದಾರೆಂದು ಇಂದಿಗೂ ಕೂಡ ಇತಿಹಾಸಕಾರರು ಅಂದಾಜಿಸುತ್ತಾರೆ. ಪ್ರಾಕೃತಿಕವಾಗಿ ಲೋಹದ ರೂಪದಲ್ಲಿ ದೊರೆಯುವ ತಾಮ್ರವನ್ನು ನವಶಿಲಾಯುಗ ಮಾನವ ಉಪಯೋಗಿಸಿ ಅದೊಂದು ಬೆಲೆಯುಳ್ಳ ಪದಾರ್ಥ ಎಂದು ಕಂಡುಕೊಂಡಿದ್ದ, ತದನಂತರ ಅದರ ಅನ್ವೇಷಣೆಯನ್ನು ಗೀಳು ಮಾಡಿ ಕೊಂಡು, ತಾಮ್ರದ ನಿಕ್ಷೇಪಗಳ ಶೋಧನೆಗಳ ಫಲವಾಗಿ ಕ್ರಿ. ಪೂ. ೬೦೦೦ದಲ್ಲಿ ತಾಮ್ರವನ್ನು ಕಾಯಿಸಿ, ಕರಗಿಸಿ ಬೇಕಾದ ಆಕಾರಕ್ಕೆ ಎರಕ ಮಾಡಿಕೊಳ್ಳುವ ತಿಳುವಳಿಕೆಯು ಮೂಡಿತು. ತಾಮ್ರಯುತ ಶಿಲೆಯ ಪುಡಿಯನ್ನು ಕಾಯಿಸಿ ದೊರೆಯುವ ದ್ರವರೂಪದ ಪದಾರ್ಥದಿಂದ ಲೋಹ ತಾಮ್ರವನ್ನು ಪಡೆಯ ಬಹುದು ಎನ್ನುವ ಜ್ಞಾನ ಮೂಡಿದ ನಂತರ ಲೋಹವಿದ್ಯೆ ಮೈದಳೆದುಕೊಂಡಿತು.

ಅಂದು ತಾಮ್ರ ವಸ್ತುಗಳ ನಿರ್ಮಾಣದಲ್ಲಿ ಮುಂದುವರಿದಿದ್ದ ರಾಷ್ಟ್ರಗಳೆಂದರೆ ಕ್ರಿ. ಪೂ. ೫೦೦೦ದಲ್ಲಿ ಈಜಿಪ್ಟ್, ಕ್ರಿ. ಪೂ. ೩೮೦೦ರಲ್ಲಿ ಸಿಯಾನ್ ಪರ್ಯಾಯ ದ್ವೀಪ ಹಾಗೂ ಕ್ರಿ. ಪೂ. ೨೫೦೦ರಲ್ಲಿ ಭಾರತ. ತಾಮ್ರದ ಬಳಕೆಯಲ್ಲಿ ಈಜಿಪ್ಟ್ ಭಾರತಕ್ಕಿಂತ ೨೫೦೦ ವರ್ಷಗಳ ಮುಂದಿತ್ತು. ಅದಲ್ಲದೆ ತಾಮ್ರದ ಮಿಶ್ರಣದೊಂದಿಗೆ ಕಂಚನ್ನು ಕೂಡ ಉತ್ಪಾದಿಸಿ ಬಳಸುವುದರಲ್ಲಿ ಈಜಿಪ್ಟ್ ಮುಂಚೂಣಿಯಲ್ಲಿತ್ತು. ಕ್ರಿ. ಪೂ. ೩೭೦೦ರಲ್ಲಿ ಕಂಚಿನ ಅಸ್ತಿತ್ವ ಈಜಿಪ್ಟ್‌ನಲ್ಲಿ ಇತ್ತು ಎನ್ನುವುದಕ್ಕೆ ಅಲ್ಲಿನ ಪಿರಮಿಡ್‌ಗಳೇ ಉದಾಹರಣೆ. ಪ್ರಾಚೀನ ಕಾಲದಲ್ಲಿ ತಾಮ್ರವನ್ನು ಶುದ್ಧೀಕರಿಸಿ ಬಳಸುತ್ತಿದ್ದರು. ಇದರ ಜೊತೆಗೆ ಮಿಶ್ರ ಲೋಹಗಳ ತಯಾರಿಕೆಯೂ ಅವರಿಗೆ ಗೊತ್ತಿತ್ತು. ಆದರೆ ಅಂದಿನ ತಾಮ್ರದ ತಯಾರಿಕೆಯಿಂದ ಪರಿಸರವಾಗಲಿ, ಜನಸಾಮಾನ್ಯರ ಆರೋಗ್ಯದ ಮೇಲಾಗಲಿ ಯಾವುದೇ ಪರಿಣಾಮ ಉಂಟಾಗಿರುವ ಉದಾಹರಣೆಗಳಿಲ್ಲ. ಬಹುಶಃ ಅಂದು ನಮ್ಮ ಪೂರ್ವಜರು ಆರೋಗ್ಯಕರವಾದ ಜನಪದೀಯ ತಂತ್ರಜ್ಞಾನವನ್ನು ಅಳವಡಿಸಿಕೊಂಡಿದ್ದರೋ, ಏನೋ ?

ಪ್ರಾಚೀನ ಕಾಲದಲ್ಲಿ ಮಾನವ ತನ್ನ ಅರಿವಿಗೆ ದಕ್ಕಿದಷ್ಟು ತಾಮ್ರವನ್ನು ಸಂಸ್ಕರಿಸಿ ಬಳಸುತ್ತಿದ್ದ. ಆದರೆ ನಾಗರಿಕತೆ ಮುಂದುವರಿದು ವಿಜ್ಞಾನ ಮತ್ತು ತಂತ್ರಜ್ಞಾನ ಅಳವಡಿಸಿ ಆಧುನಿಕೋತ್ತರ ಯುಗದಲ್ಲಿ ಸಂಸ್ಕರಿಸುವ ರೀತಿಯೇ ಬೇರೆಯಾಗಿದೆ. ಕಾರ್ಖಾನೆಗಳು, ಕಂಪನಿಗಳು ಸರ್ಕಾರದಿಂದ ಪರವಾನಗಿ ಪಡೆದು ಅಶುದ್ಧ ರೂಪದಲ್ಲಿ ಸಿಗುವ ತಾಮ್ರವನ್ನು ಮೈನಿಂಗ್ ಮಾಡಿ ತಮ್ಮದೇ ಆದ ತಂತ್ರಜ್ಞಾನಗಳ ಮೂಲಕ ಶುದ್ಧ ರೂಪಕ್ಕೆ ಇಳಿಸಿ, ಅದನ್ನು ಬೇಕಾದ ಆಕಾರಕ್ಕೆ ತಂದು ಲಾಭದಾಯಕ ವಸ್ತುವಾಗಿಸಿಕೊಂಡಿದ್ದಾರೆ. ಅವುಗಳಲ್ಲಿ ತೂತುಕುಡಿಯಲ್ಲಿನ ಸ್ಟೆರ್ಲೈಟ್ ಕಂಪನಿ ಪ್ರಮುಖವಾದುದು. ಕಬ್ಬಿಣ, ಕಲ್ಲಿದ್ದಲು, ಮ್ಯಾಂಗನೀಸ್ ಹಾಗೂ ಚಿನ್ನ ಮುಂತಾದವುಗಳಂತೆ ತಾಮ್ರವೂ ಕೂಡ ಅದಿರಿನ ರೂಪದಲ್ಲಿಯೇ ದೊರೆಯುತ್ತದೆ. ಗಣಿಗಾರಿಕೆ ನಡೆಸುವಾಗ ತಾಮ್ರವು ಕಲ್ಲು ಮಣ್ಣುಗಳಿಂದ ಬೆರೆತುಕೊಂಡಿರುತ್ತದೆ. ಅದನ್ನು ತಾಮ್ರವೇ ಬೇರೆ, ಕಲ್ಲು, ಮಣ್ಣುಗಳೇ ಬೇರೆ ಎಂಬುದಾಗಿ ಬೇರ್ಪಡಿಸುತ್ತಾರೆ. ಈ ಪ್ರಕ್ರಿಯೆಯನ್ನೇ ಅದಿರು ಶುದ್ಧೀಕರಣ ಎಂದು ಕರೆಯುತ್ತಾರೆ.

ತಾಮ್ರವನ್ನು ಶುದ್ಧೀಕರಿಸಿ, ಸಂಸ್ಕರಿಸುವ ಕಂಪನಿ ಎಂದರೆ ಅದು ತೂತುಕುಡಿಯಲ್ಲಿರುವ ಸ್ಟೆರ್ಲೈಟ್ ಕಂಪನಿ. ಅದಿರಿನಲ್ಲಿರುವ ತಾಮ್ರವನ್ನು ಮೂಲ ರೂಪಕ್ಕೆ ತರುವುದೇ ಇದರ ಕಾಯಕ. ತಾಮ್ರವನ್ನು ವೈಜ್ಞಾನಿಕವಾಗಿಯೂ, ಇಲ್ಲವೇ ನಿಕ್ಷಾಲನದ ಮೂಲಕವೂ ಕರಗಿಸುತ್ತಾರೆ. ಸಲ್ಫೈಡ್ ಅದಿರುಗಳಾದರೆ ಸೆಲೆಕ್ಟಿವ್ ಫ್ಲೋಟೇಶನ್ ರೀತಿಯಲ್ಲಿ, ಆಕ್ಸೈಡ್ ಅದಿರುಗಳಾದರೆ ನಿಕ್ಷಾಲಿಸುವ (ಲೀಚ್) ರೀತಿಯಲ್ಲಿ ಸಾಂದ್ರೀಕರಿಸುತ್ತಾರೆ. ಸೆಲೆಕ್ಟಿವ್ ಫ್ಲೋಟೇಶನ್ ರೀತಿಯಲ್ಲಿ ತಾಮ್ರವನ್ನು ಶುದ್ಧೀಕರಿಸುವುದಾದರೆ, ಅದಿರನ್ನು ಬಲುಸೂಕ್ಷ್ಮವಾಗಿ ಅರೆದು ನೀರು ಮತ್ತು ಆಯ್ದ ರಾಸಾಯನಿಕ ವಸ್ತುಗಳನ್ನು ಬೆರೆಸಿ, ಅದರ ಮಿಶ್ರಣಕ್ಕೆ ವಾಯುವನ್ನು ಪೂರೈಸಿ ತೀವ್ರವಾಗಿ ಕುಲುಕಲಾಗುತ್ತದೆ. ಇದರಿಂದ ದಟ್ಟವಾದ ನೊರೆ ಹೊರಬರುತ್ತದೆ. ನೊರೆಯಲ್ಲಿರುವ ವಾಯುಗುಳ್ಳೆಗಳೊಡನೆ ತಾಮ್ರದ ಕಣಗಳು ಹೆಚ್ಚಿನ ಪ್ರಮಾಣದಲ್ಲಿ ಅಂಟಿಕೊಂಡಿರುತ್ತವೆ. ಮಿಶ್ರಣದಲ್ಲಿ ತೇಲುತ್ತಿರುವ ತಾಮ್ರಸಹಿತ ನೊರೆಯನ್ನು ತಳದ



ಕಿಟ್ಟ ಪದಾರ್ಥದಿಂದ ಬೇರ್ಪಡಿಸುತ್ತಾರೆ. ಈ ಪ್ರಕ್ರಿಯೆಯನ್ನು ಮತ್ತೆ ಪುನರಾವರ್ತಿಸಿ ಅದಿರಿನಲ್ಲಿರುವ ಶೇಕಡ ೯೫ಕ್ಕೂ ಹೆಚ್ಚು ತಾಮ್ರವನ್ನು ಮೂಲ ಅದಿರಿನ ತೂಕದ ಶೇಕಡ ೧೦-೨೦ ತೂಕದಷ್ಟಕ್ಕೆ ಸಾಂದ್ರೀಕರಿಸುವ ಸಾಧ್ಯತೆಯೂ ಇದೆ. ಹೀಗೆ ಲಭಿಸಿದ ಸಾಂದ್ರ ವಸ್ತುವನ್ನು ಬಿಸಿ ಮಾಡಿ ಹುರಿಯಲಾಗುವುದು. ಇದರ ಉತ್ಪನ್ನವಾಗಿ ದೊರೆವ ಪದಾರ್ಥಕ್ಕೆ ಕ್ಯಾಲ್ಸೈನ್ ಎಂದು ಹೆಸರು. ಲೋಹ ವಿಜ್ಞಾನದಲ್ಲಿ ಇದನ್ನು ಮ್ಯಾಟ್ ಎಂದು ಕರೆಯುತ್ತಾರೆ. ಮ್ಯಾಟ್ ಅನ್ನು ಕರಗಿಸುವ ಮೂಲಕ ಅಥವಾ ವಿದ್ಯುದ್ವಿಚ್ಛೇದನ ತಂತ್ರಗಳ ಮೂಲಕ ಲೋಹ ತಾಮ್ರವನ್ನು ಪಡೆಯಬಹುದು.

ತೂತುಕುಡಿಯಲ್ಲಿ ಸ್ಟೆರ್ಲೈಟ್ ಕಂಪನಿಯು ನಡೆಸುತ್ತಿರುವ ತಾಮ್ರದ ಗಣಿಗಾರಿಕೆಯಿಂದ ಫಾಸ್ಫರಿಕ್ ಆಸಿಡ್ (ರಂಜಕ), ಸಲ್ಫೂರಿಕ್ ಆಸಿಡ್ (ಗಂಧಕಾಮ್ಲ) ಇದರ ಜೊತೆಗೆ ಬಾಕ್ಸೈಟ್, ಝಿಂಕ್, ಅಲ್ಯೂಮಿನಿಯಂ ಹಾಗೂ ಅದಿರು ಗಣಿಗಾರಿಕೆಯೂ ನಡೆಯುತ್ತದೆ. ಅದರಲ್ಲಿಯೂ ಸ್ಟೆರ್ಲೈಟ್ ಕಂಪನಿ ಮಾಡುತ್ತಿರುವ ತಾಮ್ರದ ಗಣಿಗಾರಿಕೆಯಿಂದ ಎಷ್ಟೆಲ್ಲಾ ಉಪಯೋಗಗಳಿವೆ ಎಂದರೆ ತಾಮ್ರವು ಬೇರೆ ಲೋಹಗಳೊಡನೆ ಸುಲಭವಾಗಿ ಬೆರೆಯುವುದರಿಂದ ಹಿತ್ತಾಳೆ, ಕಂಚು, ಮಿಶ್ರಲೋಹಗಳ ತಯಾರಿಕೆಯಲ್ಲಿ ಪ್ರಮುಖವಾಗಿದೆ. ಇದರ ಜೊತೆಗೆ ವಿದ್ಯುತ್ ಉಪಕರಣಗಳಿಗೂ ತಾಮ್ರದ ಲೋಹವನ್ನೇ ಬಳಸಲಾಗುತ್ತದೆ. ಅದಲ್ಲದೆ ಆಧುನಿಕ ಉಪಕರಣಗಳಾದ ಮೊಬೈಲ್, ಕಂಪ್ಯೂಟರ್ ಹಾಗೂ ಇನ್ನಿತರ ವಿದ್ಯುತ್ ಉಪಕರಣಗಳಿಗೆ ತಾಮ್ರದ ಲೋಹ ಬೇಕೇ ಬೇಕು. ಬಲ್ಬ್‌ಗಳಿಗೆ ವಿದ್ಯುತ್ ಪ್ರವಹಿಸಲು ವಿದ್ಯುತ್ ವಾಹಕವನ್ನಾಗಿ ತಾಮ್ರವನ್ನೇ ಅಳವಡಿಸಲಾಗುತ್ತದೆ. ತಾಮ್ರ ಎನ್ನುವ ಉತ್ಪಾದನೆ ಇಲ್ಲವಾದರೆ ಬಹುತೇಕವಾಗಿ ಆಧುನಿಕ ಬದುಕಿಗೆ ಮನುಷ್ಯ ತೆರೆದು ಕೊಳ್ಳಲು ಸಾಧ್ಯವೇ ಇಲ್ಲ. ಅಷ್ಟರಮಟ್ಟಿಗೆ ತಾಮ್ರವು ದಿನನಿತ್ಯದ ಬಳಕೆಯಾಗಿದೆ.

ಪ್ರಪಂಚದ ಇತರ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ತಾಮ್ರ ನಿಕ್ಷೇಪಗಳ ಸಂಖ್ಯೆ ಅತ್ಯಲ್ಪ. ಬಿಹಾರದ ಸಿಂಘ್ ಭೂಮ್ ಮತ್ತು ಖೇತ್ರಿ, ರಾಜಸ್ಥಾನದ ದರಿಬಾ, ಜೈಪುರ್ ಹಾಗೂ ಸಿಕ್ಕಿಂನಲ್ಲಿ ತಾಮ್ರದ ನಿಕ್ಷೇಪಗಳಿವೆ. ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಇಂಗಳಧಾಳು, ದಾವಣಗೆರೆ, ಹಾಸನದ ಕಲ್ಯಾಡಿ, ಗದಗ ಜಿಲ್ಲೆಯ ಕಪ್ಪತಗುಡ್ಡ, ರಾಯಚೂರಿನ ತಿಂತಿಣಿ ಹಾಗೂ ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ. ಈ ವಲಯಗಳಲ್ಲಿಯೂ ತಾಮ್ರದ ಅದಿರುಗಳಿವೆ. ತಾಮ್ರವನ್ನು ಕರಗಿಸುವ ಉದ್ಯಮ ಬಿಹಾರದ ಸಿಂಘ್ ಭೂಮ್‌ನಲ್ಲಿ ಗಮನಾರ್ಹವಾಗಿದೆ. ಅದನ್ನು ಬಿಟ್ಟರೆ ತಮಿಳುನಾಡಿನ ತೂತುಕುಡಿಯಲ್ಲಿ ತಾಮ್ರವನ್ನು ಕರಗಿಸುವ ಬಹುದೊಡ್ಡ ಔದ್ಯಮಿಕ ಸ್ಟೆರ್ಲೈಟ್ ಎಂಬ ಕಂಪನಿ ಇದೆ. ಈ ಕಂಪನಿಯಲ್ಲಿ ೧೫೦೦ಕ್ಕೂ ಹೆಚ್ಚು ಜನರು ಕೆಲಸ ಮಾಡುತ್ತಿದ್ದಾರೆ.

ತೂತುಕುಡಿಯಲ್ಲಿ ಸ್ಟೆರ್ಲೈಟ್ ಕಂಪನಿ ಮಾಡುತ್ತಿರುವ ತಾಮ್ರ ಸಂಸ್ಕರಣಾ ಕಾರ್ಯದಿಂದ ಆಧುನಿಕತೆಗೆ ಬೇಕಾಗುವ ಎಲ್ಲಾ ಉಪಕರಣಗಳಿಗೂ ಸಹಾಯವಾಗುತ್ತದೆ. ಅದರ ಜೊತೆಗೆ ತಾಮ್ರದ ಆಮದು-ರಫ್ತುವಿನಲ್ಲಿ ಕೋಟ್ಯಾಂತರ ವಹಿವಾಟನ್ನು ನಡೆಸುತ್ತಿದೆ. ಆದರೆ ಅಲ್ಲಿನ ಸ್ಥಳೀಯರು ಈ ಕಂಪನಿಯನ್ನು ಮುಚ್ಚಬೇಕು ಎಂದು ದಂಗೆ ಎದ್ದಿದ್ದಾರೆ. ಇದರ ಪರಿಣಾಮ ಹೋರಾಟವನ್ನು ಹತೋಟಿಯಲ್ಲಿಡಲು ಮಾಡಿದ ಗೋಲಿಬಾರ್‌ನಿಂದ ಕೆಲವು ಹೋರಾಟಗಾರರು ಕೂಡ ಹತರಾಗಿದ್ದಾರೆ.

ಕಂಪನಿಯನ್ನು ಮುಚ್ಚಲು ಜನ ಹೋರಾಟ ಮಾಡುತ್ತಿರುವುದಕ್ಕೆ ಕಾರಣವಿದೆ. ಸ್ಟೆರ್ಲೈಟ್ ಕಂಪನಿ ನಡೆಸುತ್ತಿರುವ ತಾಮ್ರದ ಗಣಿಗಾರಿಕೆ ಮತ್ತು ಸಂಸ್ಕರಣೆಯಿಂದ ಅಲ್ಲಿನ ವಾತಾವರಣ ಕಲುಷಿತಗೊಳ್ಳುತ್ತಿರುವುದರಿಂದ ಜನರ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತಿದೆ. ಆದ್ದರಿಂದ ಸ್ಥಳೀಕರು ಸಹಜವಾಗಿಯೇ ಆಕ್ರೋಶಗೊಂಡಿದ್ದಾರೆ. ಸ್ಟೆರ್ಲೈಟ್ ಕಂಪನಿಯು ನಡೆಸುತ್ತಿದ್ದ ತಾಮ್ರದ ಗಣಿಗಾರಿಕೆಯ ಕಾರ್ಯದಿಂದ ಬಿಡುಗಡೆಯಾಗುವ ಅನಿಲದಿಂದ ವಾಯುಮಾಲಿನ್ಯ ಹಾಗೂ ಬಿಡುಗಡೆಯಾಗುವ ತ್ಯಾಜ್ಯ ನೀರು ಭೂಮಿಯನ್ನು ಸೇರುತ್ತಿರುವುದರಿಂದ ಮಣ್ಣು ಮತ್ತು ಅಂತರ್ಜಲದ ಮಾಲಿನ್ಯವೂ ಆಗುತ್ತಿದೆ. ಇದರಿಂದ ಪರಿಸರ ಮತ್ತು ಜನರ ಆರೋಗ್ಯ ಎರಡೂ ಹದಗೆಡುತ್ತಿದ್ದವು. ಇದನ್ನು ವಿರೋಧಿಸಿ ೧೯೯೬ರಿಂದಲೂ ಜನರು ಹೋರಾಟ ಮಾಡುತ್ತಲೇ ಬಂದಿದ್ದರು.

ಪರಿಸರ ಮತ್ತು ಜನರ ಆರೋಗ್ಯ ದೃಷ್ಟಿಯಿಂದ ಸ್ಟೆರ್ಲೈಟ್ ಕಂಪನಿಯಿಂದ ಬಿಡುಗಡೆಯಾಗುವ ಅನಿಲ ಮತ್ತು ತ್ಯಾಜ್ಯನೀರಿನ ವಿಲೇವಾರಿಯನ್ನು ಮಿತಿಗೊಳಿಸಿಕೊಳ್ಳಬೇಕು, ಪರಿಸರವನ್ನು ಕಲುಷಿತಗೊಳ್ಳದಂತೆ ಕಂಪನಿ ತನ್ನ




ಕಾರ್ಯವೈಖರಿಯನ್ನು ನಡೆಸಬೇಕು ಎಂದು ಎನ್‌ಇಇಆರ್‌ಐ ಮತ್ತು ಟಿಎನ್‌ಪಿಸಿಬಿ ಎರಡೂ ಜಂಟಿಯಾಗಿ ಕಟ್ಟುನಿಟ್ಟಿನ ಸೂಚನೆ ನೀಡಿದ್ದವು. ಆದರೂ ಸ್ಟೆರ್ಲೈಟ್ ಕಂಪನಿ ಅವರ ಆದೇಶವನ್ನು ಉಲ್ಲಂಘಿಸಿ ತಾಮ್ರದ ಶುದ್ಧೀಕರಣ ನಡೆಸುತ್ತಿತ್ತು. ೧೯೯೮ರಲ್ಲಿ ಸ್ಥಳೀಯ ರಾಜಕಾರಣಿಯೊಬ್ಬರು ನ್ಯಾಯಾಲಯದಲ್ಲಿ ಕಂಪನಿಯ ವಿರುದ್ಧ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆ ಹೂಡಿದ ಪರಿಣಾಮವಾಗಿ ಕಂಪನಿಯು ನ್ಯಾಯಾಲಯದ ಮೆಟ್ಟಿಲೇರಬೇಕಾಯಿತು. ೧೯೯೮ರಲ್ಲಿ ಕಂಪನಿಯ ವಿರುದ್ಧ ಹೂಡಿದ್ದ ಮೊಕದ್ದಮೆಗೆ ಸಂಬಂಧಿಸಿದಂತೆ ೨೦೧೦ರಲ್ಲಿ ಮದ್ರಾಸ್ ಹೈಕೋರ್ಟ್ ಸ್ಟೆರ್ಲೈಟ್ ಕಂಪನಿಯನ್ನು ಮುಚ್ಚುವಂತೆ ತೀರ್ಪು ನೀಡಿತು. ಆದರೂ ಅವರು ಕಂಪನಿಯನ್ನು ಮುಚ್ಚದೆ ಸುಪ್ರೀಂ ಕೋರ್ಟ್‌ಗೆ ಮೊರೆಹೋದರು. ೨೦೧೩ರಲ್ಲಿ ಸುಪ್ರೀಂ ಕೋರ್ಟ್ ಈ ಪ್ರಕರಣವನ್ನು ಕೈಗೆತ್ತಿಕೊಂಡು ಮದ್ರಾಸ್ ಹೈಕೋರ್ಟ್ ನೀಡಿದ್ದ ತೀರ್ಪನ್ನು ತಳ್ಳಿಹಾಕಿ ಪರಿಸರವನ್ನು ಕಲುಷಿತಗೊಳಿಸಿರುವ ಕಾರಣ ಹಾಗೂ ಟಿಎನ್‌ಪಿಸಿಬಿ ಆದೇಶವನ್ನು ಉಲ್ಲಂಘಿಸಿರುವುದಕ್ಕಾಗಿ ಕಂಪನಿಯ ಆದಾಯದ ಆಧಾರದ ಮೇಲೆ ೧೦೦ ಕೋಟಿ ದಂಡ ವಿಧಿಸಿ ಕಂಪನಿಯನ್ನು ಮುಂದುವರಿಯಲು ಅನುಮತಿ ನೀಡಿತು. ಆದರೆ ಇಂದು ೨೦೧೮ರಲ್ಲಿ ಜನರು ಅದರಿಂದ ಉಂಟಾಗುತ್ತಿರುವ ಪರಿಸರ ಹಾನಿಯ ಕುರಿತಂತೆ ಕಂಪನಿಯನ್ನು ಮುಚ್ಚಲು ಹೋರಾಟ ನಡೆಸುತ್ತಿದ್ದಾರೆ.

ತಮಿಳುನಾಡಿನ ತೂತುಕುಡಿಯಲ್ಲಿ ಸ್ಟೆರ್ಲೈಟ್ ಕಂಪನಿಯನ್ನು ಮುಚ್ಚಲು ಎಲ್ಲಾ ರಾಜಕೀಯ ಪಕ್ಷಗಳು ಒಗ್ಗಟ್ಟಿನಿಂದ ಕೂಡಿವೆ. ಅಲ್ಲಿನ ಪ್ರಗತಿಪರರು, ಹೋರಾಟಗಾರರು ಕೂಡ ದನಿಯಾಗಿದ್ದಾರೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಶ್ವಸಂಸ್ಥೆಯು ಕೂಡ ಕಂಪನಿಗೆ ಛೀಮಾರಿ ಹಾಕಿದೆ. ಅದಲ್ಲದೆ, ಅಂತರರಾಷ್ಟ್ರೀಯ ರಫ್ತು ಮತ್ತು ಆಮದು ವಹಿವಾಟಿನ ಸಂಸ್ಥೆಯು ಕೂಡ ಸ್ಟೆರ್ಲೈಟ್ ಕಂಪನಿಯು ಅಕ್ರಮವಾಗಿ ಹಣ ಮಾಡಿದೆ ಹಾಗೂ ಪರಿಸರ ಹಾನಿಗೂ ಕಾರಣವಾಗಿದೆ ಎಂದು ಕಂಪನಿಯ ವಿದೇಶಿ ವಿನಿಮಯ ವಹಿವಾಟನ್ನು ಸ್ಥಗಿತಗೊಳಿವುದೋ ? ಬೇಡವೋ ? ಎಂದು ಚರ್ಚೆ ನಡೆಸುತ್ತಿದೆ. ಈ ಎಲ್ಲಾ ವಾದ-ವಿವಾದಗಳ ಹೋರಾಟದ ನಂತರ ತಮಿಳುನಾಡಿನ ಮುಖ್ಯಮಂತ್ರಿ ಪಳನಿಸ್ವಾಮಿ ಅವರು ಕಂಪನಿಯನ್ನು ಮುಚ್ಚುವಂತೆ ಆದೇಶ ನೀಡಿದ್ದಾರೆ. ಏನೇ ಆಗಲಿ ಕಂಪನಿಗಳು ಉತ್ಪಾದಿಸುವ ವಸ್ತುಗಳು ಹಾಗೂ ಇತರ ಸಾಮಗ್ರಿಗಳು ಮನುಷ್ಯನ ಆಧುನಿಕತೆಗೆ ಬಹುಮುಖ್ಯ. ಆದರೆ ಅವುಗಳು ಪರಿಸರ ಮತ್ತು ಜನಸಾಮಾನ್ಯರ ಆರೋಗ್ಯಕ್ಕೆ ಧಕ್ಕೆಯಾಗುವಂತಿರಬಾರದು. ಕಾನೂನು ಕಟ್ಟಳೆಗಳನ್ನು ಮೀರುವಂತಿರಬಾರದು. ಇಷ್ಟೆಲ್ಲಾ ತಂತ್ರಜ್ಞಾನ ಹೊಂದಿರುವ ಜಗತ್ತಿನಲ್ಲಿ ಆರೋಗ್ಯ ಮತ್ತು ಪರಿಸರವನ್ನು ಕಾಪಾಡುವಂತಹ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವತ್ತ, ಅದನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ವಿಜ್ಞಾನ ಸಾಗಬೇಕು. ಹಾಗೆ ನೋಡಿದರೆ ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದ ತಾಮ್ರದ ಬಳಕೆಯಿಂದ ಯಾವುದೇ ಹಾನಿಗಳು ಸಂಭವಿಸಿರುವ ಉದಾಹರಣೆಗಳಿಲ್ಲ.

**ಹಾರೋಹಳ್ಳಿ ರವೀಂದ್ರ**
ಸಾಹಿತಿ, ನಂ. ೫೬೮, ೩ನೇ ತಿರುವು, ೪ನೇ ಮುಖ್ಯ ರಸ್ತೆ, ೨ನೇ ಹಂತ
ಇ ಅಂಡ್ ಎಫ್ ಬ್ಲಾಕ್, ರಾಮಕೃಷ್ಣ ನಗರ, ಮೈಸೂರು

# ಅಸ್ಪೃಶ್ಯ ಕನ್ಯೆಯ ವಿಷಾದ ಗೀತೆ



ಭರತನೆಂಬ ಬ್ರಾಹ್ಮಣನೊಬ್ಬ
ಶತ್ರು ದಾಳಿಯೆದುರು ಶಾಸ್ತ್ರ ಪ್ರಕಾರ ಕ್ಷತ್ರಿಯರನ್ನು ಮಾತ್ರ
ಯುದ್ಧ ಮಾಡಲು ಬಿಟ್ಟು ಸೋತು ಸೋತು ಗುಲಾಮನಾಗಿಬಿಟ್ಟಿದ್ದ
ತುರ್ಕರು, ಮೊಗಲರಿಗೆ ಮುನ್ನೂರು ವರ್ಷ
ಬ್ರಿಟಿಷರು, ಡಚ್ಚರು, ಪೋರ್ಚುಗೀಸರಿಗೊಂದಿನ್ನೂರೈವತ್ತು
ವರ್ಷಗಳು ದುಡಿದು ಹೆಣಗಾಡಿ ಹೈರಾಣಾಗಿದ್ದ

ಗಾಂಧಿ ಎಂಬ ವೈಶ್ಯ ವಕೀಲರೊಬ್ಬರು ದಕ್ಷಿಣ ಆಫ್ರಿಕಾದಿಂದ ಬಂದು
ಹಾಗೂ ಹೀಗೂ ಶೂದ್ರಾತಿಶೂದ್ರ ದೇಶವಾಸಿಗಳನ್ನು ಕೂಡಿಸಿದರು
ಹೋರಾಟಕ್ಕೆ ಜೀವತುಂಬಿ ಸ್ವಾತಂತ್ರ್ಯವನ್ನು ಪಡೆದರು
ಗುಲಾಮನನ್ನು ಸಂಕೋಲೆಗಳಿಂದ ಬಿಡಿಸಿ
ಸಾಕು ತಂದೆಯಾದರು

ಇತ್ತ ಅಂಬೇಡ್ಕರರೆಂಬ ಮುಟ್ಟಿಸಿಕೊಳ್ಳಲಾರದ
ಅವಮಾನಿತ ಬಿಸಿರಕ್ತದ ಪಂಚಮನೊಬ್ಬ ಏಕಲವ್ಯ ಮಾರ್ಗದಲ್ಲಿ
ಕದ್ದುಮುಚ್ಚಿ ಓದಿಕೊಂಡು ವಿದ್ಯೆಯ ಪರ್ವತವೇ ಆಗಿಬಿಟ್ಟಿದ್ದರು
ಇತಿಹಾಸನ್ನು ತಿರುವಿ, ಶಾಸ್ತ್ರಗಳನ್ನು ಪರೀಕ್ಷಿಸಿ
ಧರ್ಮಗಳ ಬೇರು ಕಿತ್ತು ಮೂಸಿನೋಡಿದ್ದರು
ಅರ್ಥ, ನ್ಯಾಯ, ತತ್ತ್ವ ಎಲ್ಲ ಕರಗತವಾದವು

ಈ ನೆಲವನ್ನು, ಈ ಜನವನ್ನು ನೋಡಿ ಕನಲಿ ಕಸಿವಿಸಿಗೊಂಡರು
ಒರೆದರು, ಬರೆದರು, ತಮ್ಮ ಜೀವಸತ್ವವನ್ನೆ ಧಾರೆ ಎರೆದರು
ಜಾತಿಯೆಂಬ ಭೂತಕ್ಕೊಂದು ವ್ಯಾಖ್ಯೆ ಬರೆದರು
'ಅದು ಏರುಗತಿಯ ಗೌರವ, ಜಾರುಗತಿಯ ರೌರವ'
ಅಂತು ಇಂತು 'ಸಂವಿಧಾನ'ವೆಂಬ ಹೆಣ್ಣುಮಗಳ ಹೆತ್ತರು

ಗಾಂಧಿ ಓಡೋಡಿ ಬಂದರು
ಭರತನೆಂಬ ಮಗನಿಗೆ ಇವಳೆ ಅನುರೂಪ ಜೋಡಿ ಎಂದರು
ಕುಟುಂಬ ಒಪ್ಪದು, ಹಟ ಬಿಟ್ಟವರಲ್ಲ ಈ ಸಾಕಪ್ಪ
ಕೊಳುಕೊಡೆಯ ಮಾತುಕತೆಯಾಯಿತು
'ಪೂನಾ ಒಪ್ಪಂದ'ವೆಂಬ ವರದಕ್ಷಿಣೆಯನ್ನು ಪಡೆದೇಬಿಟ್ಟರು
ನಿರಾಭರಣೆ ಸಂವಿಧಾನ ಸುಂದರಿ
ಭರತನ ತೊಡೆ ಏರಿ ಕುಳಿತಳು




ಚೆಂದದ ಮನೆಯಾಯಿತು ಅತ್ತ
ಹಿಮಾಲಯದ ತಪ್ಪಲು ಇತ್ತ
ಹಿಂದೂಮಹಾಸಾಗರ ಒತ್ತರಿಸಿದಲ್ಲಿ
ಸೀತೋಷ್ಣವಲಯದ ಒಕ್ಕಲಾದರು
ಈ ಇಬ್ಬರೂ ಕೂಡಿದಾಗ 'ಪ್ರಜಾಪ್ರಭುತ್ವ'ವೆಂಬ
ಮುದ್ದಾದ ಗಂಡುಮಗು ಹುಟ್ಟಿತು

ಕೇಳಬೇಕಲ್ಲ ಕೂಡುಕುಟುಂಬದ ಹದವರಿಯದ ಮುದಿಯರು
ಇವಳು ಅಸ್ಪೃಶ್ಯ ಕನ್ಯೆ, ಒಳಗೆ ಬಿಟ್ಟುಕೊಳ್ಳಲಾರೆವು ಎಂದರು
ಅಧಿಕಾರಸ್ಥ ಗಂಡ ಗುಟರಿಸಿದ
ಶಯ್ಯಾಗೃಹದಲ್ಲಿಯೆ ನಿನ್ನ ಸ್ವಾತಂತ್ರ್ಯ
ರಾಜಕೀಯವೆಂಬ ಮೊಗಸಾಲೆಯಲ್ಲಿ ತಿರುಗಾಡಿಕೊಂಡಿರು ಎಂದರು

ಸಮಾನತೆಯ ಎಣ್ಣೆ ಸಾಬೂನಿನಲ್ಲಿ ತಿಕ್ಕಿ ತೊಳೆದುಕೊಂಡರೂ
ಸಮಾಜವೆಂಬ ನಡುಮನೆಗೆ ಬರಲೇಬಾರದು
ಸಂಸ್ಕೃತಿಯೆಂಬ ಅಡುಗೆಮನೆಗೆ ಕಾಲಿಡಬೇಡ ನೀನು ಮ್ಲೇಚ್ಛಳು
ನಮ್ಮ ಧರ್ಮದಲ್ಲಿ ಪೂಜಾಗೃಹಕ್ಕೆ ಅನ್ಯರಿಗೆ ಪ್ರವೇಶವಿಲ್ಲ
ಅಕ್ಷರ ಬಲ್ಲೆನೆಂದು ಮಂತ್ರಗಳಿಗೆ ಸಲ್ಲುವೆಯಾ ಎಂದರು
ಇನ್ನು ಭ್ರಾತೃತ್ವ ಎಲ್ಲಿಯ ಮಾತು?

ಸಂಸಾರವಂತೂ ಸಾಗುತ್ತಿದೆ
ಕುಂಟುತ್ತಾ, ತೆವಳುತ್ತಾ, ಮುಗ್ಗರಿಸುತ್ತಾ
ಸುಳ್ಳುಗಳ ಬಿತ್ತಿ, ಭ್ರಮೆಗಳ ಬೆಳೆ ತೆಗೆಯುತ್ತಾ
ಗೋಮಾತೆಯನ್ನು ಮಾರುತ್ತಾ, ಮನುಷ್ಯರನ್ನು ಕೊಲ್ಲುತ್ತಾ
ಕಾಶ್ಮೀರವನ್ನು ಪ್ರತಿದಿನವೂ ಗೆಲ್ಲುತ್ತಾ
ಸಂಸಾರವಂತೂ ಸಾಗುತ್ತಿದೆ, ನ್ಯಾಯವೆಲ್ಲಿದೆ ಹೇಳಿ?

ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವವೆಂಬ
ಕ್ರಾಂತಿ ಬೀಜಗಳು ಮೊಳಕೆಯೊಡೆಯಲೇ ಇಲ್ಲ
ಬೀಗರಿಬ್ಬರಿಗೂ ಬಾಯಿಕಟ್ಟಿದೆ
ಧರ್ಮಚಕ್ರವು ಬಾವುಟಕ್ಕೆ ಸೀಮಿತವಾಗಿದೆ
ಬುದ್ಧ ಮೂಕವಿಸ್ಮಿತನಾಗಿದ್ದಾನೆ

ಭರತನೆಂಬ ಗಣತಂತ್ರದ ಯಜಮಾನ
ವಿವಾಹ ಪಂಚವಾರ್ಷಿಕೋತ್ಸವಕ್ಕೆ ನನ್ನನ್ನೂ ಆಹ್ವಾನಿಸಿದ್ದಾನೆ
ಪ್ರಜಾಪ್ರಭುತ್ವವೆಂಬ ಕೂಸು ಅನಾಥವಾಗಿದೆ
ಸೊರಗಿದೆ ಆದರೇನು?
ನನ್ನದೊಂದು ಮೀಸಲು ಮತವಿದೆ, ಜಾತಿ ಬಲಿಷ್ಠನಿಗಾಗಿ
ಒತ್ತಿ ಬರುತ್ತೇನೆ.

**ಡಾ|| ಮೂಡ್ನಾಕೂಡು ಚಿನ್ನಸ್ವಾಮಿ**
"ಕಾವ್ಯಮೋಡಿ", ನಂ.೫೫೮, ಬಿಹೆಚ್‌ಇಎಲ್ ಬಡಾವಣೆ, ೭ನೇ ಹಂತ, ೩ನೇ
ಮುಖ್ಯ ರಸ್ತೆ, ಕೆ. ಜಿ. ರಸ್ತೆ, ರಾಜರಾಜೇಶ್ವರಿ ನಗರ, ಬೆಂಗಳೂರು - ೫೬೦೦೯೮

# ನಿವೃತ್ತನ ನೀರುಪಾಯಸ




ಡಾ॥ ಬೋರೇಗೌಡ ಚಿಕ್ಕಮರಳಿ

ಊಟ ಆದ ಮೇಲೆ ಲೋಟಕ್ಕೆ ಪಾಯಸ ಬಿಟ್ಟುಕೊಂಡ ಮಗಳು “ಪಾಯ್ಸಕ್ಕೆ ನೀರು ಬೆರುಸ್ದ” ಎಂದು ಅವ್ವನೊಡನೆ ತಕರಾರು ತೆಗೆದಳು. ಆಗಲೇ ಊಟ ಮುಗಿಸಿ ಟಿವಿ ಧಾರಾವಾಹಿಗಳನ್ನು ನೋಡುತ್ತ ಹಾಲಿನಲ್ಲಿ ಸೋಫಾದ ಮೇಲೆ ಕುಳಿತಿದ್ದ ಅವ್ವ “ಇಲ್ಲಕಣೆ, ನಾನ್ಯಾಕ್ ನೀರ್ ಬೆರ್ಸಾನೆ, ನನ್ಗೇನ್ ತಿಕ್ಲ” ಎಂದು ಪ್ರತಿವಾದ ಮಂಡಿಸಿದಳು. ‘ಅಸ್... ... ಅಪ್ಪಾ... ...’ ಎಂದು ಸೂಲು ಬಿಟ್ಟಳು, ‘ವತ್ತಾರಿಂದ ಈ ಹಾಳುಮನೆಗೆ ಜೀತ ಗೇದುದ್ದು ಸಾಕಾಗದೆ’ ಎಂದು ಮನದೊಳಗೇ ಗೊಣಗಿಕೊಳ್ಳುತ್ತ.

“ನನುಗ್ ತಿಕ್ಲ ಸುಮ್‌ಸುಮ್ನೆ ಅನ್ನಿಕೆ, ನನ್ಗೇನ್ ಗೊತ್ತಾಗಿಕಿಲ್ವ; ತೊಳ್ದುದ್ದು ಬಳ್ದುದ್ದು ಯಲ್ಲಾನು ಪಾಯ್ಸುದ್ ತಪ್ಲೇಗ್ ಹೂದ್ಬುಟ್ಟೇನೊ.”

ರೇಗಿಕೊಂಡಳು ಮಗಳು. ಖಾಸಗಿ ಒಡೆತನದ ಕಂಪನಿಯಲ್ಲಿ ಗೇದು ಸಾಕಾಗಿ ವಾರದ ಕೊನೆಗೆ ಮನೆಗೆ ಬಂದಿದ್ದಳು.

“ಏಯ್, ಇರೂದ ಕುಡುದ್ಬುಟ್ಟು ಬಂದ್ ಬಿದ್ಕೊ; ಇಲ್ಲ ಅಂದ್ರೆ ಅದೇನ್ ಬೇಕೊ ತರುಸ್ಕಂದು ಅದೆಂಗ್ ಬೇಕೊ ಕಾಯುಸ್ಕಂದು ಕುಡಿ ಬೆಳ್ಗಾನ. ಮಗ್ಳು ಬತ್ತಳೆ ಅಂತ ಬೇಕ್ಬೇಕಾದ್ದ ತಂದು ಮಡ್ಗಿದ್ದನ ಇಲ್ಲಿ, ನಿನುಗ್ ಬೇಕಾದಂಗೆ ಅಟ್ಕೊಡ್ಗಿಕ್ಕೆ.” ಅಂತ ಖಂಡತುಂಡವಾಗಿ ಅಂದು ಟಿವಿ ನೋಡುವುದು ಬಿಟ್ಟು (ಸಂಜೆಯಿಂದ ನೋಡಿದ್ದೇ ಸಾಕಾದಷ್ಟಾಗಿದೆ) ತನ್ನ ರೂಮಿಗೆ ಹೋಗಿ ‘ಅಸ್... ...’ ಅನ್ನುತ್ತ ಮತ್ತೊಮ್ಮೆ ಸೂಲು ಬಿಟ್ಟು ಪರದೆ ಬಿಟ್ಟುಕೊಂಡು ಮಲಗಿದಳು ಅವ್ವ. ಇನ್ನು ಮಾತಾಡಿ ಪ್ರಯೋಜನವಿಲ್ಲವೆಂದುಕೊಂಡ ಮಗಳು ಪಾಯಸದ ತಪ್ಪಲೆಯನ್ನೂ ಲೋಟವನ್ನೂ ಅಪ್ಪನ ಮುಂದೆ ಇಟ್ಟು ‘ಎಸ್ಟ್ ಬೇಕೊ ಬುಟ್ಕಂದ್ ಕುಡಿ ಪಪ್ಪ’ ಎಂದು ಹೇಳಿ ಮಿಕ್ಕ ಪಾತ್ರೆಗಳನ್ನೆಲ್ಲಾ ತೆಗೆದು ಅಡುಗೆಮನೆಲಿಟ್ಟು ಹಾಲಿಗೆ ಹೋಗಿ ರಗ್ಗು ಹೊದ್ದುಕೊಂಡು, ಕೈಯಲ್ಲಿ ರಿಮೋಟ್ ಹಿಡಿದು ಟಿವಿ ನೋಡುತ್ತ ಸೋಫಾದ ಮೇಲೆ ಮಲಗಿಕೊಂಡಳು.

ಮಗಳು ತನ್ನ ಮುಂದೆ ಊಟದ ತಟ್ಟೆ ಇಟ್ಟು ಹಾಕಿದ ಅನ್ನ ಸಾರನ್ನು ಕಲಸಿಕೊಂಡು ತಲೆ ಬಗ್ಗಿಸಿಕೊಂಡು ಊಟ ಮಾಡಿದ ಅಪ್ಪ. ಊಟ ಮುಗಿದ ಮೇಲೆ ತಲೆಯೆತ್ತಿ ತೌಬೆಚ್ಚಗಿನ ಬಿಸಿನೀರನ್ನು ಗಂಟಲಿಗೆ ಸುರಿದುಕೊಂಡ. ಅಷ್ಟು ಹೊತ್ತಿಗೆ ಮಗಳು ಊಟ ಮುಗಿಸಿ ಅವ್ವನೊಂದಿಗೆ ಇಷ್ಟು ಮಾತನಾಡಿದ್ದಳು. ಮಗಳು ತನ್ನ ಊಟ ಮುಗಿಸಿದ ಮೇಲೆ ಲೋಟಕ್ಕೆ ಪಾಯಸ ಬಿಟ್ಟುಕೊಂಡುದನ್ನಷ್ಟೇ ಗಮನಕ್ಕೆ ತಂದುಕೊಂಡಿದ್ದ ಅಪ್ಪನಿಗೆ ತನ್ನ ಊಟದಲ್ಲೋ ಚಿಂತೆಯಲ್ಲೋ ಮಗ್ನನಾಗಿದ್ದುದರಿಂದ ಅವಳು ಪಾಯಸ ಕುಡಿದಳೋ ಹೊರಕ್ಕೆ ತೆಗೆದುಕೊಂಡು ಹೋಗಿ ಸುರಿದುಬಂದಳೋ ಗೊತ್ತಾಗಲೇ ಇಲ್ಲ. ಇರಲಿ ನೋಡೋಣ ಎಂದು ತಾನೂ ಎರಡು ಸೌಟು ಪಾಯಸ ಬಿಟ್ಟುಕೊಂಡು ಚಪ್ಪರಿಸಿದ. ಪಾಯಸ ತೆಳ್ಳಗಿದ್ದುದೇನೋ ನಿಜ; ಆದರೆ ರುಚಿಯಲ್ಲಿ ಸಪ್ಪೆ ಅನ್ನಿಸಲಿಲ್ಲ. ಬೆಲ್ಲದಿಂದ ಏನು ಮಾಡಿದರೂ ಇಷ್ಟಪಟ್ಟು ತಿಂದುಬಿಡುತ್ತಿದ್ದ ಅವನು ಇನ್ನೂ ಒಂದು ಲೋಟ ಬಿಟ್ಟುಕೊಂಡು ಕುಡಿದ (ಮಗಳ ಅಸಮಾಧಾನಕ್ಕೆ ಇಂಬು ಕೊಡಬಾರದೆಂಬ ಉದ್ದೇಶವೂ ಇತ್ತೊ ಏನೊ). ತನ್ನ ಊಟದ ತಟ್ಟೆಯನ್ನು ಹೊರಕ್ಕೆ ಇಟ್ಟು, ಉಳಿದ ಪಾಯಸದ ತಪ್ಪಲೆಯನ್ನು ಅಡುಗೆ ಮನೆಯಲ್ಲಿ ಮುಚ್ಚಿಟ್ಟು, ಹಾಲಿಗೆ ಬಂದು ಕುರ್ಚಿಯಲ್ಲಿ ತನ್ನ ಅಂಡು ಮಂಡಿಸಿ ಟಿವಿ ನೋಡತೊಡಗಿದ; ಟೀಪಾಯಿ ಮೇಲಿದ್ದ ಬಾಳೇಹಣ್ಣಿನಲ್ಲಿ ಮಗಳಿಗೊಂದು ಕೊಟ್ಟು ತಾನೊಂದು ತಿಂದ.

* * *

“ಅವ್ನುಗ್ ಬರ್ಬಾರುದ್ ಬರ,
ಬರ್ಬಾರುದ್ ಬಂದು ಸ್ಯಾಪೆಲ್ ಸುತ್ಗಂದ್ ವೋಗ;
ಅವ್ನ್ ಯಣ ಎಸ್ಟೊತ್ಗ್ ವೋದದೋ;
ವೋದ್ತಾವ್ಳಿಂದ ಎಸ್ಟೊತ್ತುಗ್ ಯಣ್ವಾಗ್ ಬಂದನೋ, ಅವ್ನ್ ಮನೆ ಹಾಳಾಗ ... ... ...”

ಬೆಳಗ್ಗಿನ ಗಾಢ ನಿದ್ದೆಯಲ್ಲಿದ್ದವನನ್ನು ಇದ್ದಕ್ಕಿದ್ದಂತೆ ಎತ್ತಿ ಕುಕ್ಕಿದಂತಾಯಿತು. ಕರ್ಣಕಠೋರವಾದ ಮಾತುಗಳು ಕಿವಿಯ ಮೇಲೆ ಬಂದು ಅಪ್ಪಳಿಸುತ್ತಿದ್ದವು. ಹೊಡೆತವನ್ನು ತಾಳಲಾರದೆ ದಡಬಡಾಯಿಸಿಕೊಂಡು ಎದ್ದು ಕುಳಿತ. ಮೊಟ್ಟೆಕಡ್ಡಿಯ ಕಸಪೊರಕೆಯನ್ನು ಪರಪರನೆ ಎಳೆಯುತ್ತ ಬೀದಿಯ ಕಸ ಗುಡಿಸುತ್ತಿದ್ದ ಸದ್ದಿನೊಡನೆ ಬೆರೆತ ಬೈಗುಳದ ಮಾತುಗಳು ಮನದಂಗಳದಲ್ಲಿ ಲಾಸ್ಯವಾಡತೊಡಗಿದವು. ಬೆಳಗ್ಗೆ ಎದ್ದು ಮನೆಯೊಳಗೆಲ್ಲ ಓಡಾಡಿಕೊಂಡು ಒಂದಿಷ್ಟು ಕೆಲಸಗಳನ್ನು ಮಾಡಿಕೊಟ್ಟು ಶೌಚ, ಸ್ನಾನಾದಿ ತನ್ನ ಕೆಲಸಗಳನ್ನೂ ಮುಗಿಸಿಕೊಳ್ಳುತ್ತಿದ್ದ ಅಪ್ಪ. ನಿವೃತ್ತಿಯ ನಂತರ ಇಡೀ ದಿವಸ ಮನೆಯಲ್ಲಿ ಕೂರಲಾರದ್ದಕ್ಕೆ ಇಪ್ಪತ್ತೈದು ಕಿಲೋಮೀಟರು ದೂರದ ನಗರಕ್ಕೆ ದಿನಾಲೂ ಹೋಗಿಬರುತ್ತಿದ್ದ, ಕೊಡುವ ಕೆಲವು ಸಾವಿರಗಳ ತಾಬೇದಾರಿ ಕೆಲಸಕ್ಕೆ. ಎಂದಿನಂತೆ ರೆಡಿಯಾಗಿ ಹೊರಡುವ ಧಾವಂತಕ್ಕೂ ಶಕ್ತಿಯಿಲ್ಲದವನಂತೆ, ನಡಿಗೆಯೂ ಉಡುಗಿ ಹೋದವನಂತೆ ಹಾಸಿಗೆಯ ಮೇಲೆ ಅದೆಷ್ಟು ಹೊತ್ತು ಕುಳಿತಿದ್ದನೊ. ಕಸ ಗುಡಿಸುವ, ನೀರು ಹಾಕಿ ತೊಳೆದು ರಂಗೋಲಿ ಬಿಡುವ ಹೊರಗಿನ ಅಂಗಳದ ಕೆಲಸ ಮುಗಿಸಿ ಮನೆಯೊಳಕ್ಕೆ ಬಂದು ಹೂವ್ಬರಲು ಹಿಡಿದು ಹಾಲಿನ



ಕಸ ಗುಡಿಸತೊಡಗಿದಳು :

"ಇನ್ನೂ ಕುಂತವ್ನೆ ನೋಡು ದಯ್ಯ ಕುಂತಂಗೆ,

ಇದ್ನೆಲ್ಲ ವದ್ರಾಸೂ ಕೆಲ್ಸ ಯಾರುಗ್ ಒಯ್ಸಿದ್ದಾನೊ ಕಾಣೆ ಇವತ್ತು;

ವೋಗಿ ವೋಗಿ ಸುರುದ್ಬುಟ್ ಬತ್ತನೆಲ, ಕರ್ಕಬಂದ್ ಮಾಡುಸ್ಲೇಳು ಇವ್ನ್ ಕಾಲ್ಸೇದೋಗೊನು ... ..." ಎಂದು ಶುರು ಮಾಡಿದಳು ಅವ್ವ. ಕೂರುವುದೂ ಕಷ್ಟವಾಗಿ ಎದ್ದು ಎಂದಿನ ಕೆಲಸದಲ್ಲಿ ತೊಡಗಿ ಕೊಂಡ ಅಪ್ಪ.

ಅವತ್ತಿನ ತನ್ನ ತಾಬೇದಾರಿ ಕೆಲಸ ಮುಗಿಸಿ, ಅಂಥದೇ ಕೆಲಸವನ್ನು ವಾರದ ಆರೂ ದಿವಸಗಳು ಮಾಡಿ ವಾರದ ಕೊನೆಯ ದಿವಸದ ರಜೆಗೆ ಮನೆಗೆ ಬರುತ್ತಿದ್ದ ಮಗಳನ್ನೂ ಕರೆದುಕೊಂಡು ಸ್ಕೂಟರ್ ಏರಿ ರೈಲ್ವೇ ಸ್ಟೇಷನ್ನಿನಿಂದ ಬರುತ್ತಿದ್ದಾಗ ಅವತ್ತಿನ ಬೆಳಗ್ಗಿನ ಪ್ರವರದ ವರದಿ ಒಪ್ಪಿಸಿದ್ದಕ್ಕೆ ಮಗಳು ಹೇಳಿದ ಸಮಾಧಾನದ ಮಾತು ಒಂದೇ :

"ಇರಲಿ ಬಿಡು ಪಪ್ಪ, ಅವ್ಳದು ಯಾವತ್ತೂ ಇದ್ದುದ್ದೇ ಅಲ್ವ; ಅದ್ಕ್ಯಾಕ್ ಫೀಲ್ ಮಾಡ್ಕಂತಿಯ; ಏನ್ ಒಂದಿನುದ್ದ ಯೋಚ್ನೆ ಮಾಡಿಕೆ..."

ಮನಸ್ಸಿಗೆ ಸಮಾಧಾನ ಆಗಲಿಲ್ಲ. ಮಗಳಿಂದ ಈ ಮಾತು ಕೇಳುತ್ತಿರುವುದು ಇದು ಎಷ್ಟನೇ ಬಾರಿಯೋ ಲೆಕ್ಕ ಇಟ್ಟಿಲ್ಲ. "ಹಾಳಾಗಿ ಹೋಗಲಿ ಬಿಡು; ಒಂದು ದಿವಸ ಮನೆಯಲ್ಲಿ ಇದ್ದು ಆರು ದಿವಸದ ಕೆಲಸಕ್ಕೆ ಆ ಮಹಾನಗರಿಗೆ ಹೋಗುವ ಮಗಳ ನೆಮ್ಮದಿಗೆ ಯಾಕೆ ಕಲ್ಲು ಹಾಕುವುದು" ಎಂದು ಮೌನವಾದ ಅಪ್ಪ. ಮನೆಗೆ ಬರುವ ಹೊತ್ತಿಗೆ ಸರಿಯಾಗಿ ರಾತ್ರಿ ಊಟದ ಹೊತ್ತು ಆಗಿತ್ತು.

ಸ್ನಾನದ ಮನೆಗೆ ಹೋಗಿ ಮೈ ಕೈ ತೊಳೆದು ಕೊಂಡು ಬೇರೆ ಬಟ್ಟೆ ತೊಟ್ಟು ಊಟದ ಟೇಬಲ್ ಮುಂದೆ ಕೂರುವ ಹೊತ್ತಿಗೆ ಊಟವೇನೊ ಸಿದ್ಧವಾಗಿತ್ತು. ಮಗಳು ಬರುತ್ತಿದ್ದಾಳೆಂದೇ ಇರಬೇಕು ಪಾಯಸವೂ ಇತ್ತು. ಮಗಳನ್ನೂ ಕೂರಿಸಿಕೊಂಡು ಜೊತೆಯಲ್ಲಿ ಮಾಡುವ ಊಟ, ವಿನಿಮಯದ ನಾಲ್ಕು ಮಾತು ಕೊಡುವ ಸುಖಕ್ಕೆ ವಂಚಿತಳಾಗಿ ಒಬ್ಬಳೇ ಊಟ ಮುಗಿಸಿ ಟಿವಿ ಮುಂದೆ ಹೋಗಿ ಕುಳಿತದ್ದು ಮಾತ್ರ ವಿಚಿತ್ರವಾಗಿತ್ತು. ಅದೂ ಹೋಗಲಿ ಎಂದು ಮೌನವಾಗಿ ಅಗಲಿಗೆ ಮುಖ ಕೊಟ್ಟು ಊಟ ಮಾಡಹತ್ತಿದರೆ ಕೊನೆಯಲ್ಲಿ ಈ ಪಾಯಸದ ಹಗರಣ. ಅದರೊಳಕ್ಕೆ ತನ್ನ ಮಾತನ್ನೂ ಸೇರಿಸಿ ಪೀಠಿಕೆ ಬರೆದು ನಾಳೆಯ ಭಾನುವಾರವನ್ನು ಮಗಳ ಪಾಲಿಗೆ ಇನ್ನಷ್ಟು ಕಹಿ ಮಾಡುವುದು ಬೇಡವೆಂದು ಮೌನ ಮುರಿಯದೆ ಊಟ ಮುಗಿಸಿ ಮಗಳ ಜೊತೆ ಟಿವಿ ನೋಡುತ್ತ ಬಾಳೆಹಣ್ಣು ತಿಂದ ಅಪ್ಪ ಬೇಸರವಾದಾಗ ಒಬ್ಬನೇ ಕೂತು ಕಾಲ ಕಳೆಯುವ ತನ್ನ ಓದಿನ ಕೋಣೆಯ ಕಡೆ ಎದ್ದು ನಡೆದ. (ಅಲ್ಲಿ ಮಲಗಲು ಒಂದು ಚಿಕ್ಕ ಮಂಚವೂ ಇತ್ತು.) ಎಷ್ಟು ಹೇಳಿದರೂ ಅಪ್ಪ ತನ್ನದನ್ನೇ ಮುಂದು ಮಾಡುತ್ತಾನೆ ಅಂದುಕೊಂಡಾಳೇನೊ ಮಗಳು ಅಂತ ನಡೆಯ ದಿಕ್ಕು ಬದಲಿಸಿ ಹೆಂಡತಿ ಮಲಗಿದ್ದ ಕೋಣೆಗೆ ಹೊಕ್ಕು ಬಾಗಿಲು ಮುಚ್ಚಿದ ಸದ್ದಾಗದಂತೆ. ಸೂಕ್ಷ್ಮ ಅರಿತ ಮಗಳು ಟಿವಿಯ ಜೀವ ತೆಗೆದು ತನ್ನ ಕೋಣೆಗೆ ಹೋಗಿ ಮಲಗಿದಳು. ಮಂದ ಬೆಳಕಿನ ದೀಪ ಕತ್ತಲನ್ನು ಭಯಂಕರಗೊಳಿಸದ ತನ್ನ ಕರ್ತವ್ಯವನ್ನು ನಿರ್ವಹಿಸತೊಡಗಿತು.

ಅವ್ವ ಅಪ್ಪ ಮಲಗಿರುವ ಕೋಣೆಯಲ್ಲೂ ಇಂಥದ್ದೇ ದೀಪ ಉರಿಯುತ್ತದೆ ರಾತ್ರಿಯಿಡೀ. ಯಾರೂ ಇರದ ಹಾಲಿನಲ್ಲಿ, ಮನೆಯ ಹೊರಗಿನ ಅಂಗಳದಲ್ಲಿ ಸಹ; ಬೀದಿ ದೀಪದ ಬೆಳಕು ಸಾಲದು ಅಂತ! ಇದೆಂತಹ ವಿಚಿತ್ರ; ಯಾಕಿಷ್ಟು ಶಕ್ತಿಯ ಪೋಲು? ಕತ್ತಲ ಬಗೆಗೆ ಇಷ್ಟೊಂದು ಭಯ ಯಾಕೆ ಮನುಷ್ಯನಿಗೆ? ಎಲ್ಲವೂ ಇವನು ಮಾಡಿಕೊಂಡಿದ್ದೇ ಅಲ್ಲವೆ, ಕಳ್ಳತನ ಕೊಲೆ ಸುಲಿಗೆಯಿಂದ ಹಿಡಿದು ಗೂಬೆಯ ಸಹಜ ಗೂಗುಡುವಿಕೆಯವರೆಗೆ! ಏನನ್ನೂ ಕಾಣಿಸದ, ಏನನ್ನೂ ಕೇಳಿಸದ ಗಾಢ ಕತ್ತಲು, ಕತ್ತಲನ್ನು ಆವರಿಸಿದ ಗಾಢ ಮೌನ. ಈ ಕತ್ತಲ ಬಗೆಗೆ ಮೌನದ ಬಗೆಗೆ ಇವನವು ಸ್ವಕಪೋಲಕಲ್ಪಿತ ಭಾವಗಳು, ಕಾರ್ಯ-ಕಾರಣವಿಲ್ಲದ ಕತೆಗಳು! ಮನುಷ್ಯನಲ್ಲಿ ಇಂತಹ ಭಾವ-ಭಯ ನೆಲೆಗೊಳ್ಳು ವುದಕ್ಕೆ ಮನುಷ್ಯನೇ ಕಾರಣ. ಆದರೆ ನನ್ನೊಳಗೆ ಅಂತಹುದೇನೂ ಇಲ್ಲ, ಯಾಕೆ? ನಾನು ಮನುಷ್ಯಳಲ್ಲವ ಹಾಗಾದರೆ? ಎಸ್ಸೆಸ್ಸೆಲ್ಸಿ ಪಾಸಾದ ಮೇಲೆ ಪದವಿ ಗಳಿಸುವವರೆಗೆ ಓದು ಅಂತ, ಆಮೇಲೆ ಕೆಲಸ ಅಂತ, ಸಂಪಾದನೆ ಅಂತ ಮನೆಯಿಂದ ಹೊರಗೆ, ಅವ್ವ ಅಪ್ಪನಿಂದ ದೂರ ಇದ್ದುದೇ ಹೆಚ್ಚು; ಕಾಲೇಜು ಹಾಸ್ಟೆಲು ಪೀಜಿ ಅಂತ. ಅಲ್ಲೂ ಸಹಪಾಠಿಗಳು ಸಹೋದ್ಯೋಗಿಗಳು ಗೆಳತಿಯರು ಗೆಳೆಯರು ಇತ್ಯಾದಿ ಇದ್ದರು, ನಿಜ. ಆದರೆ ಅವ್ವ ಅಪ್ಪ ಕೊಡುವ ಆಪ್ತತೆ ಅವರಿಂದ ಸಾಧ್ಯವಾಗುತ್ತಿದೆಯೆ? ಖಂಡಿತ ಇಲ್ಲ. ಅವರೆಲ್ಲರ ನಡುವೆ ಇದ್ದೂ ಒಂಟಿತನ; ಅವಸರ, ಧಾವಂತ; ಕಾಲ ಮಿಂಚಿದರೆ ಏನೋ ಕಳೆದು ಹೋಗುತ್ತದೆಂಬ ಆತಂಕ – ಇಂತಹುದರಲ್ಲೇ ದಿವಸ ಗಳನ್ನು ಕಳೆದುದು ಹೆಚ್ಚು. ಬುದ್ಧಿ ತಿಳಿದಾಗಿನಿಂದ ಇವತ್ತಿನವರೆಗೂ ಬದುಕೇ ಒಂದು ಬಗೆಯ ಹೋರಾಟ; ಈ ವ್ಯಾಪಾರೀ ಜಗತ್ತಿನೊಡನೆ, ಅವಸರದ ಹುಚ್ಚು ಪ್ರವಾಹದೊಡನೆ, ತಾನುಂಟೋ ಮೂರು ಲೋಕವುಂಟೋ ಎಂದು ತನ್ನನ್ನೇ ಕೇಂದ್ರ ಮಾಡಿಕೊಂಡು ನಿಂತಲ್ಲೇ ಗಿರಕಿ ಹೊಡೆಯುವ, ಸೆಳವಿಗೆ ಸಿಕ್ಕವರನ್ನೆಲ್ಲ ಸುಳಿಗೆ ಸೆಳೆದುಕೊಳ್ಳಲು ಹವಣಿಸುವ ಈ ಮಹಾಮಾನವನೊಡನೆ ಎದುರು ಈಜುವ ನಿಲ್ಲದ ಹೋರಾಟ; ಅಸ್ತಿತ್ವಕ್ಕಾಗಿ ಪರದಾಟ – ಹಗಲು ರಾತ್ರಿಗಳ ವ್ಯತ್ಯಾಸವೇ ಗೊತ್ತಾಗದಷ್ಟು.

ಹಗಲ ಹೋರಾಟಕ್ಕೆ ನಮ್ಮನ್ನು ಸಜ್ಜುಗೊಳಿಸುವ ಸಾಧನ ಕತ್ತಲು; ಹೊರಗಿನ ಕೆಲಸಗಳಿಗೆ ಶಕ್ತಿ ತುಂಬುವ ರೀ ಜನರೇಟಿಂಗ್ ಸೆಂಟರು ಮನೆ. ಹೀಗಿರುವಾಗ ಕತ್ತಲು ಭಯಂಕರ ಎಂದುಕೊಳ್ಳಲು ಕಾರಣವಾಗುವ ಚಟುವಟಿಕೆಗಳಲ್ಲಿ ತೊಡಗಿ ಕೊಳ್ಳುವಷ್ಟು ವ್ಯವಧಾನ, ಕಥೆ ಕಟ್ಟಲು ಬೇಕಾದ ಪುರುಸೊತ್ತು ಎಲ್ಲಿತ್ತು ಈ ಮನುಷ್ಯನಿಗೆ? ಇದೆಲ್ಲ ಹೇಗಾಯಿತು? ಯಾವಾಗಿನಿಂದ ಶುರುವಾಯಿತು? ಅಪ್ಪನನ್ನು ಕೇಳಬೇಕೆನಿಸಿತು. ಅಪ್ಪನೂ ತನ್ನಂತೆಯೇ ಅಲ್ಲವ ಅನಿಸಿತು, ಮರುಕಹುಟ್ಟಿ ಮರುಗಳಿಗೆಯಲ್ಲಿ. ಅವನೂ ಓದು, ಕೆಲಸ, ಸಂಸಾರ ಅಂತ ಹಳ್ಳಿ ಬಿಟ್ಟು ಪಟ್ಟಣಕ್ಕೆ ಬಂದವನು. ನಿವೃತ್ತನಾದಮೇಲೂ ಕೆಲಸ ಅಂತ ನಗರಕ್ಕೆ ಅಲೆಯುವವನು. ಮಗಳನ್ನು ಮಹಾನಗರಕ್ಕೆ ಕಳುಹಿಸಿ ಕರೆತರುವವನು. ಅದೇ ಅವ್ವ? ಅವಳೂ ಹಳ್ಳಿ ಬಿಟ್ಟು ಪಟ್ಟಣಕ್ಕೆ ಬಂದವಳೇ. ಆದರೆ ತಾನಾಗಿ ಅಲ್ಲ; ತನಗಾಗಿಯೂ ಅಲ್ಲ. ಅಪ್ಪನೊಡನೆ, ಅಪ್ಪನಿಗಾಗಿ; ಆಮೇಲೆ ಮಗಳಿಗಾಗಿ. ಅವಳ ಕೆಲಸಗಳೂ ಅಷ್ಟೆ, ತನಗಾಗಿ ಅಲ್ಲ ಎನ್ನುವಂತಹವೇ. ಆದರೂ ಅವ್ವನಿಗೆ ಯಾಕಿಷ್ಟು ಭಯ ಕತ್ತಲನ್ನು ಕಂಡರೆ! ಮನೆಯೊಳಗಿನದನ್ನು ಬಿಟ್ಟು ಹೊರಗಿನ ಕೆಲಸಕ್ಕೆ ತನ್ನನ್ನು ವಿಸ್ತರಿಸಿಕೊಳ್ಳದ್ದಕ್ಕೆ ಇರಬಹುದು; ಓದದುದಕ್ಕೆ, ಓದಿಗಾಗಿ ಶಾಲೆ ಹಾಸ್ಟೆಲು ಕಾಲೇಜಿಗೆ ನನ್ನಂತೆ ಅಲೆಯದುದಕ್ಕೆ ಇರಬಹುದು. ಅಂದರೆ ಅವ್ವನಿಗೆ ಮನುಷ್ಯರೆಲ್ಲಾ ಕಳ್ಳರಾಗಿ ದಗಾಕೋರರಾಗಿ ಕಾಣುತ್ತಾರೆಯೆ? ಸದ್ದುಗಳೆಲ್ಲಾ ಗೂಬೆಯ ಊಳಿಡುವಿಕೆಯಂತೆ ಕೇಳುತ್ತವೆಯೆ? ಹಾಗಾದರೆ ಅವಳ ಪಾಲಿಗೆ ನಾನು, ನನ್ನ ಧ್ವನಿ? ಅಪ್ಪ, ಅಪ್ಪನ ಧ್ವನಿ? ಛೇ, ಇರಲಾರದು; ಅವಳನ್ನು ಕುರಿತು ಅಷ್ಟೊಂದು ಹಗುರವಾಗಿ ಯೋಚಿಸಬಾರದು ಅಂದುಕೊಂಡಳು.

ಮಲಗಿದ ಮೇಲೂ ಮನೆಯೊಳಗೆ ದೀಪ ಉರಿಯಬೇಕು ಅನ್ನುತ್ತಾಳೆ ಯಾಕೆ? ಮನೆ ಕಟ್ಟುವಾಗ ಇಡೀ ರಾತ್ರಿ ದೀಪ ಉರಿಸುವುದಕ್ಕೇ ಬೇರೆ ಇಂಥದೇ ದಿಕ್ಕಿನಲ್ಲಿ ಎಲೆಕ್ಟ್ರಿಕ್ ಪಾಯಿಂಟು ಬೇಕು ಎಂದು ಹಟ ಹಿಡಿದವಳಲ್ಲವೇ ಅವಳು. ಅವಳ ದೇವರ ಮನೆಯಲ್ಲಂತೂ ರಾತ್ರಿಯೂ ದೀಪ, ಹಗಲೂ ದೀಪ; ಕರೆಂಟಿನದೂ ಎಣ್ಣೆಯದೂ. ಆ ದೀಪಗಳಿಗೆ ಅದೆಷ್ಟು ಎಣ್ಣೆ, ಅದೆಷ್ಟು ಕರೆಂಟು; ಅದೆಷ್ಟು ಬತ್ತಿಗಳು, ಅದೆಷ್ಟು ಬಲ್ಬುಗಳು. ಕರೆಂಟು ಆಗಾಗ ಹೋಗುತ್ತದೆ, ಯುಪಿಎಸ್ ಹಾಕಿಸು ಎಂದು ಅಪ್ಪನ ಜೊತೆ ಹಟ ಹಿಡಿದುದಕ್ಕೆ ಇದೂ ಕಾರಣ ಇರಬಹುದು; ಇದು ಇಲ್ಲಿಯವರೆಗೆ ಹೊಳೆದೇ ಇರಲಿಲ್ಲ ನನಗೆ. ಅವ್ವ ಎಷ್ಟು ನಿಗೂಢ ಎನಿಸಿತು. ಇದನ್ನೆಲ್ಲ ಅವ್ವನಿಗೆ ಯಾರು ಹೇಳಿ ಕೊಟ್ಟಿದ್ದು, ಕಲಿಸಿದ್ದು ಯಾವುದು. ಆ ಎಲೆಕ್ಟ್ರೀಷಿಯನ್ನ, ಆ ಪುರೋಹಿತನ, ಆ ಪಂಚಾಂಗವಾ? ಹಳ್ಳಿಯಲ್ಲೇ ಕಲಿತು ಬಂದಳಾ? ಹಳ್ಳಿಯಲ್ಲಿ ರಾತ್ರಿಯೆಲ್ಲಾ ದೀಪ ಎಲ್ಲಿ ಉರಿಯುತ್ತವೆ. ಉಂಡು ಮಲಗಿದ ಮೇಲೆ ಇಡೀ ಮನೆ ಕತ್ತಲಲ್ಲಿ ಮುಳುಗಿಹೋಗುತ್ತದೆ (ಕಳ್ಳತನ

### ಅಭಿನಂದನೆ...

ನಗರದ ವಿ. ಸೋಮಣ್ಣ ಪ್ರತಿಷ್ಠಾನವು ನೀಡುವ ೨೦೧೮ನೇ ಸಾಲಿನ ಮಾಜಿ ಮುಖ್ಯಮಂತ್ರಿ 'ಜೆ. ಎಚ್. ಪಟೇಲ್ ಪ್ರಶಸ್ತಿ'ಯು ಡಾ॥ ಚಂದ್ರಶೇಖರ ಕಂಬಾರ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಮತ್ತು 'ಹೊಸತು'ವಿನ ಅಭಿನಂದನೆಗಳು.

ಮಾಡುವವರಿಗೆ ಬಹಳ ಸುಲಭ; ಇಲಿಗಳೂ ಎಗ್ಗಿಲ್ಲದೆ ಓಡಾಡುತ್ತವೆ ಬೆಕ್ಕಿನ, ಗೂಬೆಯ ಭಯವೂ ಇಲ್ಲದೆ). ಅಲ್ಲಿಗೆ ಬೀದಿ ದೀಪಗಳು ಬಂದದ್ದು ಆಮೇಲಾ ಮೇಲಂತೆ. ಮಗಳು ಮೈನೆರೆದಾಗ, ಬಾಣಂತಿ ಯಾದಾಗ, ಯಾರಾದರೂ ಸತ್ತಾಗ, ಇನ್ನೇನಾದರೂ ವಿಶೇಷವಿದ್ದಾಗ ಮಾತ್ರ ರಾತ್ರಿಯೆಲ್ಲಾ ದೀಪ ಉರಿಸುತ್ತಾರೆ. ಇದೂ ಕೆಲವೊಮ್ಮೆ ಬೇಕು, ಕೆಲವೊಮ್ಮೆ ಬ್ಯಾಡ. ನಗರಗಳಲ್ಲಿ ಪ್ರತೀ ರಾತ್ರಿಯೂ ದೀಪ ಉರಿಸುವುದಕ್ಕೆ ಇದೇ ಮೂಲ ಇರಬಹುದೆ? ಅಥವಾ ಅವ್ವ ಪಟ್ಟಣಕ್ಕೆ ಬಂದ ಮೇಲೆ ಇಲ್ಲಿನ ರಿವಾಜನ್ನು ನೋಡಿ ಕಲಿತದ್ದೇ? ಹಾಗಾದರೆ ತಾನು ತಿಳಿದಂತಹ ಧಾವಂತದ ನಗರದೊಳಗೊಂದು ಪುರುಸೊತ್ತಿನ ನಗರವೂ ಇರಬೇಕು! ಇದು ಯಾಕೆ ಇಷ್ಟು ದಿವಸವಾದರೂ ನನ್ನ ಯೋಚನೆಗೆ ಬರಲಿಲ್ಲ? ಇದನ್ನೆಲ್ಲಾ ಯೋಚಿಸಬೇಕು ಅವ್ವನನ್ನು ಪೂರ್ತಿ ಅರ್ಥಮಾಡಿಕೊಳ್ಳಲು.

ಮನಸ್ಸು ಆಳಕ್ಕೆ ಇಳಿದಂತೆ ನಿದ್ರೆಯ ಮಂಪರು ಏರತೊಡಗಿತು ದುಡಿದು ಪ್ರಯಾಣ ಮಾಡಿ ಬಂದಿದ್ದ ಮಗಳಿಗೆ. ಎಂದಿನ ಏಳೆಂಟು ಗಂಟೆಗಳ ಕೆಲಸ, ಜೊತೆಗೆ ಮೂರ್‍ನಾಲ್ಕು ಗಂಟೆಗಳ ಪ್ರಯಾಣ ಇವತ್ತಿನದು. ನಿದ್ರೆಗೆ ಜಾರುತ್ತಿರುವುದು ತಡವಾಗಿ ಬೇರೆ. ಬೆಳಿಗ್ಗೆ ತಡವಾಗಿ ಎದ್ದರಾಯಿತು. ಒಳಗಿನ ಪ್ರಶ್ನೆಗಳಿಗೆ ಅವ್ವ ಎಷ್ಟು ಉತ್ತರಿಸುತ್ತಾಳೋ, ಅಪ್ಪ ಎಷ್ಟು ಉತ್ತರಿಸುತ್ತಾನೋ ಆಮೇಲೆ ನೋಡೋಣ ಎಂದುಕೊಂಡಳು. ಸದ್ಯಕ್ಕೆ ದೀಪ ಆರಿಸಿಯೇ ಮಲಗುತ್ತೇನೆ; ಇದಕ್ಕೆ ಏನನ್ನುತ್ತಾಳೆ ನೋಡೋಣ ಎಂದುಕೊಂಡು ದೀಪ ಆರಿಸಿದಳು. ತನ್ನ ರೂಮಿನಲ್ಲಿ

# ನಮ್ಮ ನಡುವೆ ಗಡಿಗಳೆಳೆದು ಹೋದರು



ಜ್ಯೋತಿ ಎ.
ಎಸ್-೩, ನಂ. ೩೭, ೧೬ನೇ ಮುಖ್ಯರಸ್ತೆ
ಎಂ. ಸಿ. ಬಡಾವಣೆ, ವಿಜಯನಗರ
ಬೆಂಗಳೂರು – ೫೬೦ ೦೪೦

ಮನಗಳ ಬಿರಿದು ಚೆಂಡಾಡಿದರು
ನಮ್ಮ ನಡುವೆ ಗಡಿಗಳೆಳೆದು ಹೋದರು
ಹೃದಯಕ್ಕಿರದ ಬೇಲಿಯ ಅಲ್ಲಿ ನೆಟ್ಟುಬಿಟ್ಟರು
ಬೇಲಿಯ ಮೇಲೂ ಗಿಡಗಂಟೆಗಳು ಬೆಳೆದವು
ಆ ಪೊದೆಯೊಳಗೂ ಕುಸುಮಗಳು ಅರಳದಂತೆ
ಮೊಗ್ಗುಗಳನ್ನೇ ಚಿವುಟಿ ಹಿಸುಕಿಹಾಕಿದರು

ಮನಗಳ ಬಿರಿದು ಚೆಂಡಾಡಿದರು
ನಮ್ಮ ನಡುವೆ ಗಡಿಗಳೆಳೆದು ಹೋದರು

ಕೂಲಿ ಕೂಳುಗಳಿಗಾಗಿ ಕಾದು ನಿಂತವನ
ಗಡಿಗಳಿಗೆ ಕಳಿಸಿ ಸಮವಸ್ತ್ರವ ತೊಡಿಸಿದರು
ಅನ್ನ ಬೆಳೆವ ಚಿನ್ನ ದುಡಿವ ರಟ್ಟೆಗಳಲಿ
ನವನವೀನ ಬಂದೂಕು ಹೊರಿಸಿ ಹುಸಿನಗೆಯ ಬೀರಿದರು
ತಂಪಾದ ಮಳೆಗೆಂದು ಗಡಿಯಲಿ ಬೆಂದ ಜನ
ಬಾಂಬು ತುಪಾಕಿಗಳ ಮಳೆಯಲಿ ನೆಂದು ನೊಂದರು
ಅನ್ನದಾಸೆ ಹೊತ್ತು ಬಂದು ಶಸ್ತ್ರ ಹಿಡಿದವನೂ
ಸಿಡಿಗುಂಡಿನ ಬೆಂಕಿಯಲ್ಲೇ ಭಸ್ಮವಾಗಿಬಿಟ್ಟನು

ಜೈಕಾರ ಧಿಕ್ಕಾರಗಳು ಮುಗಿಲು ಮುಟ್ಟಿದವು
ಅವನಾದರೂ ಚಿತಾಭಸ್ಮದಿಂದ ಮೇಲೇಳಲೇ ಇಲ್ಲ
ಹೆಣಗಳಲ್ಲಿ ರಾಶಿ ರಾಶಿ ಚೆಲ್ಲಾಡಿದವಾದರೂ
ಗಡಿರೇಖೆಯ ಯಾವ ಭಾಗದ್ದು ಯಾವ ಹೆಣವೆಂದು
ಗುರುತಿಸುವ ತಜ್ಞನೊಬ್ಬ ಗಡಿಯೊಳಗೆಲ್ಲೂ ಸಿಗದೇ ಹೋದನಲ್ಲಾ!
ಹಸಿರ ಭೂ ತಾಯಿಗೆ ನೆತ್ತರ ಸ್ನಾನ ನಡೆದೇ ಇತ್ತು
ನೋವು ಸಂಕಟಗಳಿಂದವಳು ನರಳುತ್ತಲೇ ಇದ್ದಳು

ಅಂತೂ ಕೊನೆಗೆ ಪಿಂಡಿ ಕಟ್ಟಿದ್ದ ಹೆಣವೊಂದು
ಅನ್ನ ಕೇಳದ್ದವನ ಮನೆ ಬಾಗಿಲಿಗೆ ರವಾನೆಯಾಯಿತು
ಧ್ವಜವ ಹೊದ್ದು ಹುತಾತ್ಮನ ಪಟ್ಟ ಪಡೆದು
ಸಾವಿರಾರು ಗಣ್ಯರ ಕಂಬನಿ ಮಿಡಿತದಲಿ
ಮತ್ತೊಮ್ಮೆ ಸಿಡಿಗುಂಡಿನ ಶಬ್ದದಲಿ ಅದು
ಅನ್ನ ನೀರು ಕಾಣದೆ ನಿಸರ್ಗದ ಮಡಿಲ ಸೇರಿತ್ತು

ಇನ್ನಷ್ಟು ಗಡಿರೇಖೆಗಳ ಎಳೆಯಲು
ಕಳ್ಳ ಬೆಕ್ಕಿನಂತೆ ಭೂಮಿಯ ಕೆರೆಯುತ್ತ
ಹೊಸದೊಂದು ಗಿರಾಕಿ ಸಿಕ್ಕಿತೆಂದು ಕೇಕೆ ಹಾಕುತ್ತಲಿದ್ದ
ಅವನೇ ಆ ಬಂದೂಕು ಕಾರಖಾನೆಯ ದಷ್ಟಪುಷ್ಟ ಮಾಲೀಕ

ಮನಗಳ ಬಿರಿದು ಚೆಂಡಾಡಿದರು
ನಮ್ಮ ನಡುವೆ ಗಡಿಗಳೆಳೆದು ಹೋದರು

ಕೇಳು ಗೆಳೆಯಾ,
ಬಂದೂಕುಗಳ ನಳಿಕೆಗಳೆಂದೂ ದಹಿಸುವುದು
ಕಾಳಿಗಾಗಿ ಕಾತರಿಸುವ ಗುಬ್ಬಿಮರಿಗಳನ್ನೇ
ಹೊರತು
ಸರಹದ್ದುಗಳನ್ನು ಬಳಿದು ಹೆಣಕ್ಕಾಗಿ ಹಾರಾಡುವ
ರಣಹದ್ದುಗಳನ್ನಲ್ಲವೋ
ಕೈಗಳಲಿ ಬಾಂಬು ಬಂದೂಕುಗಳ ತುಂಬಿಸಿ
ಪ್ರೀತಿಯ ಹೂಗಳನ್ನರಳಿಸಲಾದೀತೆ ಗೆಳೆಯ
ಹಸಿವಿಗೆ ಸಿಡಿಮದ್ದುಗಳೆಂದೂ ಮದ್ದಾಗುವುದಿಲ್ಲ, ಅಲ್ಲವೇ!

ಕತ್ತಲು ಆವರಿಸಿದ್ದು ಮಗ್ಗುಲ ಕೋಣೆಗೆ ಗೊತ್ತಾಗಲಿಲ್ಲ ಅನ್ನಿಸುತ್ತದೆ. ಸ್ವಿಚ್ಚು ಅದುಮಿದಾಗ ಉಂಟಾದ ಶಬ್ದವೂ ಕೇಳಿಸಲಿಲ್ಲವೆ? ಅವ್ವ ನಿದ್ರೆಹೋಗಿರಬಹುದು; ಅಥವಾ ನೀರುಪಾಯಸದ ನೆಪ ತೆಗೆದು ತಂಟೆ ಮಾಡಿದ ಬೇಸರ ಇರಬಹುದು. ದಣಿದು ಬಂದಿದ್ದ ಮಗಳಿಗೆ ದೇಹ ಮನಸ್ಸುಗಳೆರಡೂ ಭಾರ ಎನಿಸಿತು. ಕತ್ತಲಲ್ಲೂ ಬಿಟ್ಟುಕೊಂಡಿದ್ದ ಕಣ್ಣುಗಳನ್ನು ಮುಚ್ಚಿದಳು; ನಿದ್ರಾದೇವಿ ಕೂಗು ಹಾಕಿಕೊಂಡು ಬಂದು ಆಲಿಂಗಿಸಿದಳು.

* * *

ಮಗ್ಗುಲ ಕೋಣೆಯಲ್ಲಿ ಮಗಳು ದೀಪ ಆರಿಸಿದ ಸದ್ದು ಕೇಳಿಸಿತು ಅಪ್ಪನಿಗೆ. ರಾತ್ರಿದೀಪವನ್ನೂ ಯಾಕೆ ಆರಿಸಿದಳು? ಯಾವತ್ತೂ ಹೀಗೆ ಮಾಡಿದವಳಲ್ಲವಲ್ಲ. ನಿದ್ರೆ ಹತ್ತುತ್ತಿಲ್ಲವೇನೊ. ಅವ್ವ ರೇಗಿದ್ದಕ್ಕೋ ಅವ್ವನೊಡನೆ ತಂಟೆ ತೆಗೆದದ್ದಕ್ಕೋ ಬೇಸರ ಆಗಿರಬೇಕು. 'ಯಾಕಮ್ಮ ಮಗಳೆ, ನಿದ್ರೆ ಬರುತ್ತಿಲ್ಲವಾ?' ಅಂತ ಕೇಳಬೇಕು ಅನ್ನಿಸಿತು. ಮಾತು ಆಪ್ತ ಕಾಳಜಿಗಿಂತ ಕೃತಕತೆಯನ್ನೇ ಹೆಚ್ಚು ಒಳಗೊಳ್ಳುತ್ತದೆ ಅನ್ನಿಸಿ ಸುಮ್ಮನಾದ. ಸಂದರ್ಭ ಹಾಗಿತ್ತು. ಅವ್ವನೊಡನೆ ಮಗಳು ಸಿಡುಕಿಕೊಂಡದ್ದು ಯಾಕೆ? ಸ್ವಲ್ಪ ತೆಳ್ಳಗಿತ್ತು ಎಂಬುದನ್ನು ಬಿಟ್ಟರೆ ಇದ್ದುದರಲ್ಲಿ ಪಾಯಸ ರುಚಿಯಾಗೇ ಇತ್ತಲ್ಲ. ತೆಳ್ಳಗಿದ್ದುದಕ್ಕೇ ಹಾಗಂದಿರಬಹುದೇ. ಮಾತಿನಲ್ಲಿ ಅಷ್ಟೊಂದು ತೀವ್ರತೆ ಇರಬೇಕಾದ ಅಗತ್ಯವಿರಲಿಲ್ಲ. ಯಾಕೆ ಹೀಗಾಯಿತು? ರೈಲ್ವೇ ಸ್ಟೇಷನ್ನಿನಿಂದ ಬರುತ್ತ ನಾನು ವರದಿ ಒಪ್ಪಿಸಿದ್ದರ ಪರಿಣಾಮವಾ? ಏನಂದುಕೊಂಡಿರಬಹುದು ಮಗಳು. ಅಪ್ಪ ಇದನ್ನೆಲ್ಲಾ ಯಾಕೆ ನನಗೆ ಹೇಳುತ್ತಾನೆ, ಗಂಡ ಹೆಂಡತಿಯರ ನಡುವೆ ನಡೆದದ್ದನ್ನು ಮಕ್ಕಳ ಜೊತೆ ಹೀಗೆಲ್ಲ ಹೇಳಿಕೊಳ್ಳಬಾರದು ಅಲ್ವಾ ಅಂದುಕೊಂಡಿದ್ದರೆ? ನನ್ನ ಜೊತೆ ರೇಗಿಕೊಳ್ಳಬೇಕಾಗಿತ್ತು, ಅಥವಾ ಮಾತು ಬಿಟ್ಟು ಬಿಮ್ಮನಿರಬಹುದಾಗಿತ್ತು. ಅಂದರೆ ಬೇಸರ ಅವ್ವನ ಮೇಲೇ ಇರಬೇಕು. ಈ ಫೋನುಗಳು ಬಂದ ಮೇಲೆ ಯಾರ್‍ಯಾರ ನಡುವೆ ಯಾವಾಗ ಏನು ನಡೆಯುತ್ತದೆ ಎಂಬುದೇ ಗೊತ್ತಾಗುವುದಿಲ್ಲ ಅಂದುಕೊಂಡ. ಅವ್ವ ಯಾಕೆ ಹೀಗೆ ವರ್ತಿಸುತ್ತಾಳೆ; ಅಪ್ಪ ದುಡಿದು ಸಂಸಾರ ನೀಗುತ್ತಿಲ್ಲವಾ; ನನ್ನ ಓದಿಸಲಿಲ್ಲವಾ; ಈಗ ಮದುವೆ ಚಿಂತೆ ಹಚ್ಚಿಕೊಂಡಿಲ್ಲವಾ; ಅಥವಾ ಮಗಳಿಗೇ ಹೆಚ್ಚು ಆದ್ಯತೆ ಕೊಡುತ್ತಾನೆ, ನನ್ನ ಮೇಲೆ ಗಮನವೇ ಇಲ್ಲ ಅಂತ ಅವ್ವನಿಗೆ ನಮ್ಮಿಬ್ಬರ ಮೇಲೂ ಕೋಪ ಇರಬಹುದಾ ಅಂತ ಮಗಳು ಅವ್ವನ ಬಗೆಗೆ ಅಂದುಕೊಂಡಿರಬಹುದು ಅನ್ನಿಸಿತು ಅಪ್ಪನಿಗೆ. ನನ್ನ ಇವಳ ನಡುವೆ ನಡೆಯುವ ತಂಟೆ ತಕರಾರುಗಳಲ್ಲಿ ಕೆಲವನ್ನು ಮಗಳ ಜೊತೆ ಹೇಳಿಕೊಂಡುದು ಇದೇ ಮೊದಲಲ್ಲ. ಹೇಳಿದ್ದನ್ನು ಸುಮ್ಮನೆ ಮೌನವಾಗಿ ಕೇಳಿಸಿಕೊಳ್ಳುತ್ತಿದ್ದ ಮಗಳು ಮಧ್ಯದಲ್ಲಿ ಯಾವಾಗಲೋ ಸಮಾಧಾನ ಹೇಳುವುದನ್ನು ರೂಢಿಸಿಕೊಂಡಳು 'ಇರ್ಲಿ ಬಿಡು ಪಪ್ಪ, ಅದಕ್ಯಾಕೆ ಚಿಂತೆ ಮಾಡ್ಕಂತಿಯಾ; ಅವಳದು ಯಾವಾಗಲೂ ಇದ್ದದ್ದೇ ಅಲ್ವ' ಅಂತ. ಹಾಗಾದರೆ ಅವ್ವನ ಗುಣ ಅರ್ಥವಾಗಿದೆ ಮಗಳಿಗೆ; ಅಪ್ಪನ ಬಗೆಗೆ ಪ್ರೀತಿ ಇದೆ. ಆದರೆ ಅಪ್ಪನ ಕಾರಣಕ್ಕೆ ಯಾವತ್ತೂ ಮಗಳು ಅವ್ವನೊಡನೆ ಜಗಳ ಆಡಿದವಳಲ್ಲವಲ್ಲ. ಸಮಾಧಾನವನ್ನೂ ಹೇಳಿ ಆಮೇಲೆ ಒಮ್ಮೊಮ್ಮೆ 'ನೇವ್ನೀವು ಏನಾದ್ರೂ ಮಾಡ್ಕಳಿ' ಅಂದು ತನ್ನ ನಿರ್ಲಿಪ್ತತೆಯನ್ನು ವ್ಯಕ್ತಪಡಿಸುತ್ತಿದ್ದಳು. ಮತ್ತೆ, ಇವತ್ತು ಯಾಕೆ ಹೀಗಾಯಿತು? ಗಂಡ ಹೆಣವಾಗಲಿ ಅಂತ ಶಾಪ ಹಾಕುತ್ತಾಳಲ್ಲ, ಇವಳೆಂತಹ ಹೆಂಡತಿ ಅಂತ ಅವ್ವನ ಬಗೆಗೆ ಮಗಳಲ್ಲಿ ಜುಗುಪ್ಸೆ ಮೂಡಿರಬೇಕು, ತುಂಬ ಯಾತನೆ ಅನುಭವಿಸಿರಬೇಕು. ಅದಕ್ಕೇ ಇವತ್ತು ತಂಟೆ ತೆಗೆದಿರಬೇಕು. ಮನೆಗೆ ಬಂದಾಗಿನಿಂದ ಮುಖ ಗಂಟುಹಾಕಿಕೊಂಡೇ ಇದ್ದಾಳೆ. ನಾನಾದರೂ ಇದನ್ನೆಲ್ಲಾ ಯಾಕೆ ಹೇಳಿದೆ ಮಗಳಿಗೆ; ಹೇಳಬಾರದಿತ್ತು, ಅವಳ ಮನಸ್ಸನ್ನೂ ಕೆಡಿಸಬಾರದಿತ್ತು. ಇಂಥವನ್ನೆಲ್ಲ ಮಕ್ಕಳಿಗೆ ಹೇಳಿ, ಅವರಿಗೂ ಬೇಸರ ತಂದು, ಅವರ ಮುಂದೆ ನಾವೂ ಹಗುರವಾಗಿ – ಛೆ! ಯಾಕೆ ಬೇಕಿತ್ತು; ರಜೆಯ ಸುಖಕ್ಕೆ ಮನೆಗೆ ಬಂದ ಮಗಳಿಗೆ ಏನು ಕೊಟ್ಟಹಾಗಾಯಿತು? ತಪ್ಪು ಮಾಡಿದೆ ಎನಿಸಿತು ಅಪ್ಪನಿಗೆ.

ಇವಳಾದರೂ ಯಾಕೆ ಇಷ್ಟೊಂದು ಕಟುವಾದ ಮಾತುಗಳನ್ನಾಡಬೇಕಿತ್ತು ಇವತ್ತೇ, ಅದೂ ಬೀದಿಯಲ್ಲಿ ನಿಂತುಕೊಂಡು; ದಿನವೂ ಬೆಳಿಗ್ಗೆ ಮನೆಯಿಂದ ಹೊರಗೆ ಹೋಗಿ ರಾತ್ರಿಗೆ ಮನೆಗೆ ಬರುವವನಿಗೆ. ಮನೆಯಲ್ಲೇ ಕೂತು ಬೇಯಿಸಿಹಾಕಿದ್ದನ್ನು ತಿಂದುಕೊಂಡು ಇವಳಿಗೆ ಹೊರೆಯಾಗಿದ್ದೇನ, ಇಲ್ಲದ ತಂಟೆ ತೆಗೆದು ಸಮಸ್ಯೆ ಸೃಷ್ಟಿಸಿ ಬದುಕನ್ನು ಹೊರೆ ಮಾಡಿತ್ತೇನ. ಮೂವತ್ತು ವರ್ಷಗಳಿಂದ ಯಾರು ಸಂಸಾರದ ಹೊರೆ ಹೊತ್ತು ನೀಸಿಕೊಂಡು ಬಂದಿದ್ದಾರೊ ಅವನಿಗೇ ಹೀಗಂದರೆ ?! ಅವಳೇನೋ ಮೊನ್ನೆ ಕೇಳಿದ್ದಳು, ಒಂದೂವರೆ ಲಕ್ಷ ದುಡ್ಡು ಬೇಕು ಅಂತ. ಅವಳ ಒಡವೆ ಬ್ಯಾಂಕಿನಲ್ಲಿದ್ದಾವಂತೆ, ಅದ್ಯಾವಾಗ ತೆಗೆದುಕೊಂಡುಹೋಗಿ ಇಟ್ಟಳು ನನಗೆ ಹೇಳದೆ!? ಬ್ಯಾಂಕಿನ ಬಡ್ಡಿಗೆ ಮನೆಯ ಒಡವೆ ಅಡವಿಟ್ಟು, ಆ ಹಣ ತಂದು ಮೀಟರು ಬಡ್ಡಿಗೆ ಕೊಡುವುದು. ಮೂರು ಪರ್ಸೆಂಟು, ಗ್ರಹಚಾರ ಕೆಟ್ಟವರು ಬಂದರೆ ಐದಾರು ಪರ್ಸೆಂಟು; ತಿಂಗತಿಂಗಳಿಗೆ ಕೊಡದಿದ್ದರೆ ಬಡ್ಡಿ ಅಸಲಾಗುತ್ತದೆ; ಅದಕ್ಕೂ ಮೀಟರು. ಹೊತ್ತುಕೊಂಡು ಹೋಗುವ ಕಳ್ಳರು, ಕೊಟ್ಟೇಯಿಲ್ಲ ಅನ್ನುವ ಖದೀಮರು. ಕೇಳಿದರೆ 'ಅಯ್ಯೋ ಯವಾರ್‍ದಲ್ಲಿ ಇದೆಲ್ಲಾ ಕಾಮನ್ನು, ಯಲ್ಲಾ ನಿನ್ನಂಗೇ ಇದ್ರೆ ನಾಕ್ರಂತೆ ಬದ್ಕೊಕಾದದ' ಅಂತ ಬಾಯಿ ಮುಚ್ಚಿಸುವುದು. ಯಾಕೆ ಬೇಕು ಇದೆಲ್ಲ. ಊರಿನಲ್ಲಿದ್ದಾಗಲೇ ಶುರು ಮಾಡಿದ್ದಳು, ಪುಡಿಗಾಸು ಕೊಟ್ಟುಕೊಂಡು. ಆಗಲೇ ಹೇಳಿದ್ದೆ, 'ಇದೆಲ್ಲ ಬ್ಯಾಡ, ಕೂಲಿ ನಾಲಿ ಮಾಡಿ ಬದ್ಕೊರ್ ಕಣ್ಣಲ್ಲಿ ನೀರು ತರುವುದು ಸರಿಯಲ್ಲ, ನನ್ಗೆ ಇಷ್ಟ ಆಗಲ್ಲ; ನಾಲ್ಕು ಜನಕ್ಕೆ ಬುದ್ಧಿ ಹೇಳುವ ವಿದ್ಯೆ ಕಲಿ; ಪುಸ್ತಕ ಓದು, ಪರೀಕ್ಷೆ ಕಟ್ಟಿಸ್ತೀನಿ, ಡಿಗ್ರಿ ತಗೋ; ಮನೆಯಲ್ಲಿದ್ದುಕೊಂಡೇ ಕಲೀಬಹ್ದು' ಅಂತ. ನೋಟು ಎಣಿಸುವುದರಲ್ಲಿ ತೋರಿದ ಆಸಕ್ತಿಯನ್ನ ಅಕ್ಷರ ಕಲಿಯುವುದರಲ್ಲಿ, ಪುಸ್ತಕದ ಹಾಳೆ ಮೊಗಚುವುದರಲ್ಲಿ ತೋರಲಿಲ್ಲ. 'ಜಾಸ್ತಿ ಓದ್ಬ್ಯಾಡ, ತಲೆ ಕೆಟ್ಟು ಹುಚ್ಚ ಆದೀಯ' ಅಂತ ನನಗೇ ಬುದ್ಧಿ ಹೇಳಿದಳು. ನಾನು ಕೆಲಸಕ್ಕೆ ಹೋದರೆ ಇವಳು ಮನೆಗೆ ಬೀಗ ಹಾಕಿಕೊಂಡು ವಸೀಲಿಗೆ ಹೊರಟಳು. ಶಾಲೆಗೆ, ಕಾಲೇಜಿಗೆ, ಆಮೇಲೆ ಕೆಲಸಕ್ಕೆ ಅಂತ ಮಗಳೂ

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆಗೆ ಸಾಕಷ್ಟು ಪ್ರಮಾಣದಲ್ಲಿ ಜಾಹೀರಾತುಗಳು ಲಭ್ಯವಿಲ್ಲದೆ ಇರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ಪಾವತಿಸಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಮನೆಯ ಹೊರಗೇ ಇದ್ದದ್ದು ಇವಳಿಗೆ ಅನುಕೂಲವೇ ಆಯಿತು. ಬೆಳೆದ ಮಗಳು 'ಇದೆಲ್ಲ ಯಾಕೆ ಮಮ್ಮಿ, ಏನ್ ಸಂಪಾದ್ನೆ ಮಾಡಿದ್ದೀಯೆ; ಬುಟ್ಬುಡು ಅತ್ತಗೆ' ಅಂದ ಮೇಲೂ ತಿಳಿದುಕೊಳ್ಳಲಿಲ್ಲ. ಮದುವೆಗೆ, ಕರೆನೆರೆಗೆ, ತಿಥಿಗೆ, ನಾಮಕರಣಕ್ಕೆ, ಮತ್ತೊಂದಕ್ಕೆ ಅಂತ ಬೇರೆ, ತಿರುಗುವ ಹೆಂಗಸರ ದಂಡಿನಲ್ಲಿ ಇವಳೂ ಒಬ್ಬಳು. ಹೋಗಲಿ, ಅದಕ್ಕೂ ಒಂದು ಮಿತಿ ಬೇಕು. ಇಷ್ಟೆಲ್ಲಾ ತಿರುಗಿ, ಇನ್ನೊಬ್ಬರ ಗೋಳು ಹೊಯ್ದುಕೊಂಡು ಏನು ಸಾಧಿಸಿದಳೊ! ಎಷ್ಟು ಗಳಿಸಿದಳೊ? ಒಂದಿಷ್ಟು ಸ್ಟೀಲು, ಪ್ಲಾಸ್ಟಿಕ್ಕು ಬಂದು ಮನೆಯಲ್ಲಿ ತುಂಬಿಕೊಂಡಿವೆ; ವರ್ಷಕ್ಕೆ ಒಂದು ಸಲ ಪಕ್ಷದ ಹಬ್ಬಕ್ಕೆ ತೆಗಿ, ಬೆಳಗು, ತೊಳಿ; ಮತ್ತೆ ತುಂಬು. ಇಷ್ಟು ಬಿಟ್ಟರೆ ಇನ್ನೇನೂ ಆಗಿಲ್ಲ. ತನಗೂ ಏನೂ ಮಾಡಿಸಿಕೊಂಡಿಲ್ಲ, ಮಗಳಿಗೂ ಏನೂ ಮಾಡಿಸಿಲ್ಲ. ಮದುವೆಯಲ್ಲಿ ನಾನೂ ಅಪ್ಪನೂ ಸೇರಿ ಮಾಡಿಸಿದ್ದು, ಅವರಪ್ಪ ಕೊಡಿಸಿದ್ದು ಬ್ಯಾಂಕಿನ ಲಾಕರ್‌ನಲ್ಲಿ; ಮಾರ್‍ವಾಡಿಗಳ ಬಳಿಗೆ ಹೋಗಿಲ್ಲ ಸದ್ಯ; ಅಷ್ಟಾದರೂ ವ್ಯವಹಾರದ ಬುದ್ಧಿ ಇದೆ, ಅವರಿಗೇ ಅಷ್ಟು ಬಡ್ಡಿ ಕೊಟ್ಟರೆ ಉಳಿಸುವುದು ಏನು ಅಂತ !

ಅವನ್ಯಾರೋ ಚೀಟಿ ನಡೆಸುತ್ತಾನಂತೆ, ಗ್ರೂಪಿನಲ್ಲಿ ಒಬ್ಬ ಹೊತ್ತುಕೊಂಡು ಹೋದನಂತೆ; ಆದ ನಷ್ಟವನ್ನು ಇವನು ಇರುವವರೆಲ್ಲರ ಮೇಲೆ ಹೊರಿಸುತ್ತಿದ್ದಾನಂತೆ. ಏಜೆಂಟ್ ಚೀಟಿ ಅಂತ ಒಂದು ಚೀಟಿ ದುಡ್ಡು ಪೂರ್ತಾ ಇಟ್ಟುಕೊಳ್ಳುತ್ತಾರೆ; ನಷ್ಟವನ್ನು ಮಾತ್ರ ನಾನೊಬ್ಬನೇ ಯಾಕೆ ಹೊತ್ತುಕೊಳ್ಳಲಿ ಅನ್ನುತ್ತಾರೆ. ಅದ್ಯಾರೋ ಅವ್ವ–ಮಗಳು, ವಾರಕ್ಕೆ ಮೂರು ಸಲ ಮನೆಗೆ ಬರುತ್ತಿದ್ದರು; ಕಾಫಿ ತಿಂಡಿಯನ್ನೂ ತಿಂದರು, ಊಟವನ್ನೂ ಮಾಡಿದರು; ಈಸಿಕೊಂಡದ್ದನ್ನು ಹೊತ್ತುಕೊಂಡೂ ಹೋದರು. ಅವರಿವರನ್ನು ವಿಚಾರಿಸಿದಾಗ ತಿಳಿಯಿತು, ಇನ್ನೂ ಕೆಲವು ಕಡೆ ಹೀಗೇ ಮಾಡಿ ಕೊನೆಗೆ ಊರೇ ಬಿಟ್ಟಿದ್ದಾರೆ ಅಂತ. ಇವಳ ಊರಿನವರಿಗೆ – ಇವಳವ್ವನ ತೆಂಡೆಯವರಿಗೇ – ಕೊಟ್ಟಿದ್ದದ್ದು? ಬಡ್ಡಿಯೂ ಇಲ್ಲ ಅಸಲೂ ಇಲ್ಲ ಅನ್ನುವಂತಾಯಿತಂತೆ. 'ಚಿಕ್ಕವ್ವನ ಮಗ, ಅಣ್ಣ ಅನ್ನೂದ್ನೂ ನೋಡ್ದೆ ಬೀದಿಲ್ ನಿಂತ್ಗಂದು ಯಂಗ್ ಮಾತಾಡ್ತಾಳಪ್ಪಾ' ಅನ್ನೋ ಆಪಾದನೆ ಬೇರೆ ಬಂತು ಮನೇ ತನಕ. ಯಾಕೆ ಕೇಳುವುದು ಇದನ್ನೆಲ್ಲಾ. ಹೇಳಿದ ಮಾತಿಗೇ ಬೆಲೆ ಇಲ್ಲ ಅಂದಮೇಲೆ ಹೇಳುವುದೂ ಬ್ಯಾಡ, ಕೇಳುವುದೂ ಬ್ಯಾಡ ಅಂತ ಬಿಟ್ಟದ್ದಾಯಿತು. ಕೊನೆಗೆ ಈ ಸ್ಥಿತಿ. ತಡೀಲಾರದೆ 'ಯಾಕೆ ಬೇಕಿತ್ತು ಇದೆಲ್ಲಾ' ಅಂದದ್ದಕ್ಕೆ ಪ್ರತಿ ಸವಾಲು: 'ನೀನ್ ಮಡುದ್ದು ಇನ್ನೇನು? ಅದ್ಯಾರೋ ಸ್ನೇಹಿತರು ಅಂತ ವೋದೆ, ಫೈನಾನ್ಸ್‌ಗೆ ಅಂತ ಕೇಳ್ತಾ ಅವ್ರೆ ಅಂತ ಕೊಟ್ಟೆ. ಅಲ್ಲಿಂದ ಎಷ್ಟ್ ತಂದೆ? ಊರು ಅಣ್ಣತಮ್ಮಂದ್ರು ಅಂತ ವೊಯ್ತಿಯೆ, ಸುರುದ್ಬುಟ್ ಬತ್ತೀಯೆ; ವ್ಯವ್ಸಾಯ ಮಣ್ಣು ಅಂತ ಹಾಕ್ತೀಯೆ, ಅಲ್ಲಿಂದ ಏನ್ಬತ್ತು?' ಅಂತ. ಮಾತಿಗೆ ಮಾತು ಬೆಳೆಸಿ ಏನು ಪ್ರಯೋಜನ. ಮಾತಾಡುವುದಕ್ಕಿಂತ ಸಾಕ್ಷಿಪ್ರಜ್ಞೆಯಾಗಿ ಸುಮ್ಮನೆ ನೋಡುತ್ತಿರುವುದು ಒಳ್ಳೇದು, ಏನಾಗುತ್ತದೋ ಆಗಲಿ ಅಂತ ಬಿಟ್ಟದ್ದಾಯಿತು. ಈಗ ಈ ಡಿಮಾಂಡು 'ಬಡ್ಡೀ




ಕಟ್ಟಿ ವರ್ಸುದ್‌ಮೇಲಾಯ್ತು, ಇನ್ನೂ ಬುಟ್ರೆ ವಡ್ವೆ ಮನೇಗ್ ಬರೂದಿಲ್ಲ' ಅಂತ. ಅಡವಿಟ್ಟ ಚೀಟಿಯನ್ನು ತಂಗಿಯ ಮನೆಯಲ್ಲಿ ಇಟ್ಟಿದ್ದಾಳಂತೆ. 'ಯಾಕೆ, ನಮ್ಮ ಮನೆಯಲ್ಲಿ ಜಾಗ ಇರಲಿಲ್ಲವ? ಚೀಟಿ ತಂದುಕೊಡು ನೋಡ್ತೀನಿ, ಬ್ಯಾಂಕಿಗೆ ಹೋಗಿ ವಿಚಾರಿಸ್ತೀನಿ' ಅಂದ್ರೆ ಅದೇ ಕೊಂಕು – 'ಮಾತ್ನಲ್ ನಂಬ್ಕೆ ಇಲ್ದಿದ್ರೆ ಬುಡು, ಅಲ್ಲೇ ಇದ್ರಿರ್‍ತವೆ; ವೋದ್ರೆ ವಂಟೇ ವೋಗ್ಲಿ' ಅಂತ. 'ಮೇಸ್ತ್ರ ಹೆಂಡ್ತಿ ವಡ್ವೆ ಹಾಕ್ಕಂಡೇ ತಿರುಗ್ಬೇಕು ಅಂತ ಏನು? ಜನುಕ್ ಗೊತ್ತಾಗ್ಲಿ ಬುಡು, ನಿನ್ ಬಂಡ್ವಾಳ ಏನು ಅಂತ' ಅಂತ ಮೇಷ್ಟ್ರ ತಲೇ ಮ್ಯಾಲೆ ಮೆಣಸು ಅರೆದು ಎಮೋಷನಲ್ ಬ್ಲಾಕ್ಮೇಲ್ ಮಾಡೋದು ಬೇರೆ! ತಮ್ಮ ತಪ್ಪು ಒಪ್ಪುಗಳು ತಮಗೇ ತಿಳಿಯದವರಿಗೆ ಎಷ್ಟು ಹೇಳಿದರೇನು; ತಿಳಿದೂ ತಿಳಿದೂ ಆಡುವವರಿಗೆ ಮಾಡುವವರಿಗೆ ಬುದ್ಧಿ ಕಲ್ಸೋರು ಯಾರು? ಕಡೆಗೆ ನೀರುಪಾಯಸದ್ದೇ ಸ್ಥಿತಿ. ಹದವಾಗಿ ಮಾಡಿದ ಪಾಯಸಕ್ಕೆ ಬೇಕು ಅಂತ ನೀರು ಸುರಿಯುವುದು, ಮಾಡುವ ಹದ ಗೊತ್ತಿರದೆ ಸುಮ್ಮನೆ ಪದಾರ್ಥ ಸುರಿದು ಬೇಯಿಸುವುದು ಎರಡಕ್ಕೂ ವ್ಯತ್ಯಾಸವೇನೂ ಇಲ್ಲ. ಇದು ಬಗೆಹರಿಯದ ಸಮಸ್ಯೆ. ತಂಟೆ ಮಾಡಿ ಗಾಯದ ಮೇಲೆ ಬರೆ ಎಳೆದುಕೊಳ್ಳುವ ಕೆಲಸ ಮಾಡಬಾರದು ಅಂತ ಸುಮ್ಮನಾದ ಅಪ್ಪ.

ಆದರೆ ಮನಸ್ಸು ಸುಮ್ಮನಿರಬೇಕಲ್ಲ, ಆಯಾಸವಾಗಿರುವುದು ದೇಹಕ್ಕೆ ತಾನೆ! ಸದ್ಯಕ್ಕೆ ಅದು ಒಂದು ಕಡೆ ಬಿದ್ದುಕೊಂಡಿದೆ, ಅಷ್ಟು ಸಾಲದ? ಮತ್ತೆ ಚಿಂತೆ ಮುಂದುವರಿಸಿದ. ಇವತ್ತು ಯಾಕೆ ಬಂತು ಈ ಮಾತು ಇವಳ ಬಾಯಿಂದ? ಮೂವತ್ತು ವರ್ಷಗಳ ಒಡನಾಟದ ಅನುಭವಗಳನ್ನೆಲ್ಲಾ ಕೆದಕಿದ. ಏನೇನೋ ಅಂದಿದ್ದಳು; ಯಾವತ್ತೂ ಈ ಮಾತು ಅಂದಿರಲಿಲ್ಲ. ನಿವೃತ್ತಿಯಾದ ಮೇಲೆ ಇವನೇ ಒಮ್ಮೆ ಅಂದಿದ್ದ– ವ್ಯಂಗ್ಯಕ್ಕೊ ತಮಾಷೆಗೊ ನಿಜಕ್ಕೊ: 'ಬದುಕಿದ್ದು ನಾನು ಪಡೆಯುವ ಪಿಂಚಣಿಗಿಂತ ಈಗಲೇ ನಾನು ಸತ್ತುಹೋದರೆ ನಿನಗೆ ಬರುವ ಫ್ಯಾಮಿಲಿ ಪಿಂಚಣಿಯೇ ಮೂರ್‍ನಾಲ್ಕು ಸಾವಿರ ಜಾಸ್ತಿ ಕಣೆ' ಅಂತ. 'ನಿವೃತ್ತಿಯಾದಾಗ ಪಡೆದಿರುವ ಪಿಂಚಣಿ ಮೇಲೆ ಕೊಟ್ಟಿರುವ ಸಾಲವೂ ಮನ್ನಾ ಆಗುತ್ತದಂತೆ – ಡಬಲ್ ಬೆನಿಪಿಟ್ಟು ; ಗಂಡನ ಕಾಟ ಶಾಶ್ವತವಾಗಿ ಇಲ್ಲವಾಗುವುದು ಮೂರನೇ ಬೆನಿಪಿಟ್ಟು' ಅಂತಲೂ ಅಂದಿದ್ದ ಕಣ್ಣು ಮಿಟುಕಿಸಿ. 'ಯಂತೆ ಮಾತು ಅಂತ ಆಡೀಯೆ ಪಪ್ಪ; ಭೂಮಿ ಮೇಲೆ ಇರೋರೆಲ್ಲ ಪೆನ್ಷನ್ ತಕೊಂಡೇ ಜೀವ್ನ ಮಾಡ್ತಾಯಿದ್ದರ? ಸಾಯೊ ಮಾತ್ಯಾಕಾಡಿಯೆ?' ಅಂದಿದ್ದಳು ಮಗಳು, ತನ್ನ ರೂಮಿನಲ್ಲಿ ಲ್ಯಾಪ್‌ಟಾಪ್ ಮುಂದೆ ಕುಳಿತು ಇಂಟರ್‌ನೆಟ್ ನೋಡುತ್ತ. ಆ ಮಾತು ಕೇಳಿ ಕರುಳೇ ಬಾಯಿಗೆ ಬಂದಿತ್ತು ಅಪ್ಪನಿಗೆ. ಇವಳೂ ಅಂದಿದ್ದಳು, 'ನಿನ್ ಲೆಕ್ಕಾಚಾರುಕ್ ಬೆಂಕಿ ಹಾಕ; ಮೂವತ್ತೊರ್ಸ್ದಿಂದ ಕೊಟ್ಟು ಕೊಟ್ಟು ಸಾಕಾಗಿದ್ದಿಯಲ ಅದ್ಕಂಗಂದಿಯ; ಸುಮ್ಮನ್ ಕೂತ್ಕೊ, ಇನ್ನೊಂದ್ಸತಿ ಅಂದ್ಗಿಂದೆಯೆ ಈ ಮಾತ, ಗಾಚಾರ ಬುಡುಸ್ಬುಟ್ಟೇನು ಆಮೇಲೆ' ಅಂತ. ಆ ಪ್ರೀತಿಗೆ ಹೃದಯವೇ ಕಿತ್ತು ಬಂದಿತ್ತು. ಅದಾಗಿ ವರ್ಷವೇ ಕಳೆದಿರಬೇಕು. ಈಗ ಈ ಮಾತು. ಒಂದೂವರೆ ಲಕ್ಷ ಕೊಟ್ಟಿದ್ದರೆ ಅನ್ನುತ್ತಿರಲಿಲ್ಲವೇನೊ. ಅದೆಂಥಾ ಲೆಕ್ಕಾಚಾರ, ಅದ್ಯಾವ ಸೂತ್ರ ಪೆನ್ಷನ್ ಗೊತ್ತುಪಡಿಸಿದ್ದು?! ಹೈಸ್ಕೂಲಿನಲ್ಲಿದ್ದದ್ದು, ಅಲ್ಲಿಂದ ಡಿಗ್ರಿ ಕಾಲೇಜಿಗೆ ಬಂದದ್ದು, ನಾನ್‌ಗ್ರಾಂಟ್ ಪೀರಿಯೆಡ್ಡು ಇತ್ಯಾದಿ ಸಮಸ್ಯೆಗಳಿದ್ದುದೇನೋ ನಿಜ ಸೇವಾ ಅವಧಿ ಪರಿಗಣನೆಯಲ್ಲಿ. ಆದರೆ ಅದು ಇಂಥ ವಿಪರ್ಯಾಸಕ್ಕೆ ಕಾರಣವಾಗುತ್ತದೆ ಅಂತ ಅಂದುಕೊಂಡಿರಲಿಲ್ಲ. ಆದರೂ ಲೆಕ್ಕ ವಿಚಿತ್ರವಾಗಿತ್ತು. 'ಕಡಿಮೆ ಫಿಕ್ಸ್ ಮಾಡಿದ್ದಾರೆ, ಮರು ಪರಿಗಣನೆಗೆ ಅರ್ಜಿ ಹಾಕು, ನನ್ನ ಜೊತೆ ಬಾ ಸರಿಪಡಿಸಿಕೊಡ್ತೀನಿ' ಅಂದಿದ್ದರು ಕೆಲವರು. ಇದೆಲ್ಲಾ ಗೋಜಲು ಯಾರಿಗೆ ಬೇಕು, ಕೈಕಾಲು ಗಟ್ಟಿಯಾಗಿರುವ ತನಕ ಇನ್ನೊಂದಿಷ್ಟು ಕೆಲಸ ಮಾಡಿದರೆ ಆಯಿತು ಅಂದುಕೊಂಡು ಪಿತ್ರಾರ್ಜಿತವಾಗಿ ಬಂದಿದ್ದ ಜಮೀನಿಗೆ ಬೀಳುವುದರಲ್ಲಿದ್ದ. ಅಷ್ಟರಲ್ಲಿ ಗೊತ್ತಿದ್ದವರೊಬ್ಬರು ಕರೆದರು, 'ಕೆಲಸ ಮಾಡು ಬಾ' ಅಂತ. ಆಗ ಶುರುವಾಯಿತು ಈ ಎರಡನೇ ರೌಂಡಿನ ತಾಬೇದಾರಿ. ಇದರ ಜೊತೆಗೆ ಮಗಳು ತರುವುದರಲ್ಲೂ ಒಂದಿಷ್ಟು ಸೇರುತ್ತದೆ. ಸಂಸಾರ ನಡೆಸಲು ತೊಂದರೆಯಿಲ್ಲ. ನಿವೃತ್ತಿಯಾದಾಗ ಬಂದದ್ದನ್ನು ಜೋಪಾನವಾಗಿಟ್ಟು ಮಗಳ ಮದುವೆ ಆಯಿತು ಅನ್ನಿಸಿದರೆ ಇನ್ನೇನು ಅಂದುಕೊಂಡಿದ್ದ. ಹೇಳಿದ ಮಾತು ಕೇಳದೆ ಅಲೆಮಾರಿಯಂತೆ ತಿರುಗುತ್ತಿದ್ದ ಹೆಂಡತಿ ಕೇಳಿದ್ದಕ್ಕೂ (ದುಡ್ಡು ಬಂದಿದೆ ಕೇಳು ಅಂತ ಯಾರಾದರೂ ಹೇಳಿಕೊಟ್ಟಿರಲೂಬಹುದು) ಇಲ್ಲ ಅಂದಿದ್ದ. ಅದಕ್ಕೆ ಅಂದದ್ದೆ ಹೀಗಂತಾ ... ... ...! ಹೆಂಡತಿಯ ಋಣಕ್ಕೆ ಬಿದ್ದವನಂತೆ ಚಡಪಡಿಸಿದ.

ಥೂ ... ಹಾಳಾದ ಮನಸ್ಸು, ಕಿಲುಬುಗಟ್ಟಿದ ಕೊಳಕು. ಮಗ್ಗುಲ ಕೋಣೆಯಲ್ಲಿ ಮಗಳು ಹಾಯಾಗಿ ನಿದ್ರಿಸುತ್ತಿರಬಹುದು ಮಂದಬೆಳಕಿನ ದೀಪವನ್ನೂ ಆರಿಸಿ. ನಾನೂ ಹಾಗೇ ಮಾಡುತ್ತೇನೆಂದು ದೀಪ ಆರಿಸಲು ಕೈ ನೀಡುವ ಹೊತ್ತಿಗೆ ಕರೆಂಟೇ ಹೋಗಬೇಕೆ! ಕಿಟಕಿಯ ಗಾಜಿನಿಂದ ತೂರಿ ಬರುವ ಬೀದಿದೀಪದ ಬೆಳಕೂ ಇಲ್ಲವಾಯಿತು. ಕತ್ತಲು, ಬರೀ ಕತ್ತಲು. ಒಳ್ಳೆಯದೇ ಆಯಿತು ಅಂತ ಕಣ್ಣು ಮುಚ್ಚಿದ. ಸದ್ಯ, ನಿದ್ರಾಮಾಯೆ ಸುಳುಹು ದೋರಿದಳು. ನಾಲ್ಕು ಕ್ಷಣ ಕಳೆಯುವುದರೊಳಗೆ ಗಾಢ ನಿದ್ರೆಯಲ್ಲಿ ಮುಳುಗಿದ.

✶ ✶ ✶

ಮೊಟ್ಟೆಕಡ್ಡಿಯ ಬರಲಿನ ಪರ್‌ಪರ್ ಸದ್ದಿನೊಡನೆ ಹೆಂಡತಿಯ ಬೈಗುಳದ ಧ್ವನಿಯೂ ಬೆರೆತು ಕಿವಿಯ ಮೇಲೆ ಬಿದ್ದು ಅನುರಣಿಸುತ್ತಿತ್ತು. ಮುಖದ ತುಂಬಾ ರಗ್ಗು ಕವುಚಿಕೊಂಡಿದ್ದವನು, 'ಅಯ್ಯೋ ಬೆಳಕು ಹರಿದ ಮೇಲೂ ಮಲಗಿದ್ದೇನಲ್ಲ' ಎಂದು ಎದ್ದ. ಆಗಿನ್ನೂ ಮಬ್ಬು ಬೆಳಕು. ಮತ್ತೆ ಮಲಗುವುದು ಕಷ್ಟವಾಗಿ ಮನೆಯೊಳಗಿನ ಮಾಮೂಲಿ ಕೆಲಸಗಳನ್ನೆಲ್ಲಾ ಮುಗಿಸಿ ಸ್ನಾನ ಮಾಡಿ ಬೇಗ ಹೋಗೇಬಿಡೋಣ ಅಂದುಕೊಂಡು ಕೆಲಸಕ್ಕೆ ಹೊರಡಲು ಸಿದ್ಧನಾದ. ತಿಂಡಿ ತಿಂದರೆಷ್ಟು ಬಿಟ್ಟರೆಷ್ಟು, ಅಲ್ಲೆಲ್ಲಾದರೂ ಹೋಟೆಲಿನಲ್ಲಿ ತಿಂದುಕೊಂಡರಾಯಿತು; ಹೆಂಡತಿ ಯಂತೂ ಮನೆಯ ಹೊರಗೆ ತೊಳೆದು ಮುಗಿಸಿ ಮನೆಯೊಳಕ್ಕೆ ಬಂದು ನೀರು ಸುರಿದುಕೊಂಡು ಹೂವ್ಬರಲು ಹಿಡಿದು ಆಡಿಸುತ್ತಿದ್ದಳು. ಇವಳದು ದಿವಸವೂ ತೊಳೆಯುವ ಕೆಲಸವೇ. ಊರಿನ ಗಾರೆ ನೆಲಕ್ಕೂ ಇಲ್ಲಿನ ಮಾರ್ಬಲ್ ನೆಲಕ್ಕೂ ವ್ಯತ್ಯಾಸವೇ ಇಲ್ಲವಾ. ನೀರಿಗೆ ಪಿನಾಯಿಲ್ ಹಾಕಿಕೊಂಡು ಬಟ್ಟೆಯಿಂದ ಒರಸಿದರೆ ಸಾಕು, ಮುಖ – ನೆಲದ ಮುಖ – ಫಳಫಳನೆ ಹೊಳೆಯುತ್ತದೆ. ಇದನ್ನೂ ಹೇಳಿ ಕೊಡಬೇಕ? ಹೇಳೋರು ಯಾರು, ಯಂಗಾದರೂ ಹಾಳಾಗಿಹೋಗಲಿ ಬಿಡು ಅಂತ ಕಾಂಪೌಂಡಿನಲ್ಲಿ ನಿಂತಿದ್ದ ಸ್ಕೂಟರನ್ನು ಗೇಟಿನಿಂದಾಚೆಗೆ ತೆಗೆದು ಕಿಕ್ಕರ್‌ಗೆ ಒದ್ದ. ಒಂದೇ ಒದೆತಕ್ಕೆ ಬರ್ ಎಂದು ಸದ್ದು ಮಾಡಿತು. ಬಿಟ್ಟೂಬಿಟ್ಟು ಎಕ್ಸಿಲೇಟರ್ ತಿರುಗಿಸಿ ಬರ ಬರ ಅನ್ನಿಸಿ ಗಿಯರ್ ತುಳಿದು ಗಾಡಿ ಚಾಲೂ ಮಾಡಿದ. ಊರು ಕಳೆಯಿತು. ಊರ ಹೊರಬದಿಯಲ್ಲಿ ತುಂಬಿ ಹರಿಯುವ ದೊಡ್ಡ ಕಾಲುವೆ. ರಸ್ತೆ ಸ್ವಲ್ಪ ಬಲಕ್ಕೆ ತಿರುಗಿ ಸೇತುವೆ ಮೇಲೆ ಹೋಗುತ್ತದೆ. ನೇರ ಹೋದರೆ ರಸ್ತೆ ತಪ್ಪಿ ಕಾಲುವೆ ನೀರೇ ಗತಿ. ಮನೆಯ ಬಳಿ ಗೇರ್ ಒತ್ತಿ ಚಾಲೂ ಮಾಡಿದ್ದಷ್ಟೇ ಗೊತ್ತು; ಗಾಡಿಯ ವೇಗ, ಹೋಗುತ್ತಿರುವ ಜಾಗ ಯಾವುದೂ ಗೊತ್ತಾಗುತ್ತಿಲ್ಲ. ಮನೆಯೊಳಗಿನ ಕೆಲಸ ಅಷ್ಟು ಮಾಡಿ ಹೊರಗಿನ ಕೆಲಸಕ್ಕೆ ಹೊರಡಲು ರೆಡಿ ಆಗಿ ಸಮಯ ಕಳೆದಿದ್ದರೂ ಬೆಳಗ್ಗಿನ ಮಬ್ಬು ಮಾತ್ರ ಸ್ವಲ್ಪವೂ ಕಳೆದಿಲ್ಲ, ನಿದ್ರೆಯ ಮಂಪರೂ ಕಳೆದಿಲ್ಲವೇನೊ. ಬಲಕ್ಕೆ ತಿರುಗುವ ಎಂದಿನ ಯಾಂತ್ರಿಕತೆ ಜರುಗಲಿಲ್ಲ. 'ವೋದ್ತಾವ್ಳಿಂದ ಯಣ್ವಾಗ್ ಬರ' ಇತ್ಯಾದಿ ಬೈಗುಳಗಳೇ ಕಿವಿಯಲ್ಲಿ ಮೊಳಗುತ್ತಿದ್ದವು. ಗಾಡಿ ನೇರ ನುಗ್ಗಿತು, ಧಡ ಧಡ ಧಡನೆ ಹಳ್ಳಕ್ಕೆ ಇಳಿದು ಕಾಲುವೆ ನೀರಿಗೆ ಬಿದ್ದೇಹೋಯಿತು. ನೀರಿಗೆ ಬಿದ್ದದ್ದೇ, ಸ್ಕೂಟರ್ ಎಲ್ಲೋ ತಾನೆಲ್ಲೊ. ನೀರಿನಾಳಕ್ಕೆ ಆಳಕ್ಕೆ ಇನ್ನೂ ಆಳಕ್ಕೆ ಇಳಿದ; ನೀರಿನ ತಳ ಮುಟ್ಟಿದ; ನೆಲ ಕಚ್ಚಿದ. ಅಲ್ಲೋ ಬರೀ ಕಲ್ಲು ಮಣ್ಣು ಕೆಸರು. ಉಸಿರು ಕಟ್ಟಿತು, ಬಾಯೂ ಕಟ್ಟಿತು. ಮಗಳೇ ಅಂತ ಕೂಗ ಬೇಕೆನಿಸಿತು. ಕಟ್ಟಿಕೊಂಡಿದ್ದ ಬಾಯನ್ನು ಬಿಚ್ಚಲಾಗಲಿಲ್ಲ. ಉಸಿರಾಡಲೂ ಸಾಧ್ಯವಾಗಲಿಲ್ಲ. ... ... ಆದರೆ; ಉಸಿರಾಡಲೇಬೇಕು, ಮಗಳೇ ಅಂತ ಕೂಗಲೇ ಬೇಕು. ನಿಲೀಜು ಹೊಡೆದು ನೀರಿನಿಂದ ಮೇಲಕ್ಕೆದ್ದು ಬೆಳಗುವ ಸೂರ್ಯನನ್ನು ನೋಡಲೇ ಬೇಕು ... ... ಹಟ ತೊಟ್ಟ. ಒತ್ತಡ ಹೆಚ್ಚಾಯಿತು. ತಲೆ ಕೊಡವಿದ, ಕೈ ಜಾಡಿಸಿದ, ಧಡಕ್ಕನೆ ಎದ್ದುಕೂತು ಕಣ್ಣು ಬಿಟ್ಟ.

ಅದೇ ಕತ್ತಲು, ದೀಪ ಆರಿಸಲು ಹೋದಾಗ ಕರೆಂಟು ಹೋದ ಕತ್ತಲು. ಕಿಟಕಿಯ ಗಾಜುಗಳೂ ಕಾಣಿಸುತ್ತಿಲ್ಲ. ಇನ್ನು ಬೆಳಕು ಎಲ್ಲಿಂದ ಬರಬೇಕು! ಕಂಡದ್ದು ಕನಸು ಎಂದು ಗೊತ್ತಾಯಿತು. ಸೆಕೆ ಜಾಸ್ತಿ ಅನ್ನಿಸಿ ಹೊದ್ದಿದ್ದ ರಗ್ಗು ಝಾಡಿಸಿ ಪಕ್ಕಕ್ಕೆ ಕೈಯಿಟ್ಟ. ಹೆಂಡತಿ ತನಗೆ ಬೆನ್ನು ಹಾಕಿ, ಗೋಡೆಗೆ ಮುಖ ಕೊಟ್ಟು ಮಲಗಿರುವುದು ತಿಳಿಯಿತು. ಹಾಯಾಗಿ ನಿದ್ರಿಸುತ್ತಿರಬೇಕು ಅಂದುಕೊಂಡ. ಮಗ್ಗುಲ ಕೋಣೆಯಲ್ಲಿ ಮಗಳು ಮಲಗಿರುವುದನ್ನೂ ಮನಸ್ಸಿಗೆ ತಂದುಕೊಂಡ. ತನಗೂ ಹಾಯಾಗಿ ನಿದ್ರಿಸಬೇಕು ಅನಿಸಿತು. ಮತ್ತೆ ಮಲಗಿದ, ಗಾಢ ನಿದ್ರೆಯ ಬಯಕೆಯ ಹೊತ್ತು. ಕರೆಂಟು ಬಂದೀತೆಂದು ಅಂದಾಜಿನಲ್ಲೇ ಕೈಯಿಟ್ಟು ಸ್ವಿಚ್ ಅದುಮಿದ. ಸ್ವಿಚ್‌ಬೋರ್ಡಿನ ಬಳಿಗೇ ತಲೆ ಹಾಕಿ ಮಲಗಿದ್ದ ಹೆಂಡತಿಗೆ ಟಿಕ್ ಸದ್ದು ಕೇಳಲಿಲ್ಲವೆಂದೇ ತೋರುತ್ತದೆ. ಮಂದ ಬೆಳಕಿನ ಚಟಕ್ಕೆ ಬಿದ್ದವಳಾದರೂ ಸದ್ಯಕ್ಕೆ ಗೊಣಗಲಿಲ್ಲ. ಕತ್ತಲೆಗೂ ಕಣ್ಣು ಮುಚ್ಚಿದ. ಮುಚ್ಚಿದ ಕಣ್ಣೊಳಗೂ ಕತ್ತಲು; ಆದರೂ ಆಕಾಶ ನಿಟ್ಟಿಸುವ, ನಕ್ಷತ್ರ ಎಣೆಸುವ ಚಪಲ !


**ಡಾ॥ ಬೋರೇಗೌಡ ಚಿಕ್ಕಮರಳಿ**

ನಂ. ೫೮/೭, 'ಸಿದ್ಧಿ', ಶಾಂತಿನಗರ ೨ನೇ ಹಂತ

ಪಾಂಡವಪುರ – ೫೭೧ ೪೩೪, ಮಂಡ್ಯ ಜಿಲ್ಲೆ


## ಪದ ಕುಸಿದರೂ

ಮಂದ್ರ ಷಡ್ಜದ ಮೊಳೆಗೆ
ನೇತಾಡುವ ರಾಗವೊಂದು
ಮುಂದೆ ಹೋಗಲಾರದೇ
ಅದದೇ ಆಲಾಪಗಳ ತೊಡಕಿನಲಿ
ಒದ್ದಾಡುತ್ತ ತಿರುಗುತ್ತದೆ ಅಲ್ಲೇ
ಮತ್ತೆ ಮತ್ತೆ......

ಮಧ್ಯದ ಗುರಿಯೂ ದುಸ್ತರವಾದ
ವಿಲಂಬಿತ ಲಯಕೆ ಬೇಸತ್ತು
ಹೆಜ್ಜೆಗಳೂ ಮುಖ ಊದಿಸಿಕೊಂಡು
ಕೂತಿವೆ......

ಹತಾಶೆಯಾಕಾಶದಲ್ಲಿ
ಕಣ್ಣು ಹೊಡೆಯುವ ಅಸಂಖ್ಯ
ನಕ್ಷತ್ರಗಳ ನಂಜುನಗೆ
ಗಾಢವಾಗಿಸುತ್ತದೆ ಕತ್ತಲೆಯನು
ಮತ್ತೆ ಮತ್ತೆ..... !

ಬದುಕೇ ಹೆಬ್ಬಂಡೆಯಾಗಿ
ಬೆಟ್ಟವಾಗಿ ಬೆಳೆದು
ಹಿಂಜರಿಕೆ ರಾಗವನು
ಹಿಡಿದು ಎಳೆದೆಳೆದು
ಬೆಟ್ಟಕ್ಕೆ ಕಟ್ಟಿ ಕಣ್ಣ ಕಿಸಿಯುತ್ತದೆ
ಮತ್ತೆ ಮತ್ತೆ....!

ಆದರೂ..........
ಒಳಗೆಲ್ಲೋ ಸರ ಸರ ಕೊರೆವ
ಇರುವೆಗಳ ಕಲರವ,
ಬೆರ ಬೆರ ಬೆದಕುವ
ಇಲಿಗಳ ಚಿಂವ್ ಚಿಮು......

ಒಳಗೊಳಗೇ ಬೆಟ್ಟ ಟೊಳ್ಳಾಗುತ
ಬಿದ್ದು ಮಣ್ಣಾಗುತ
ಮಣ್ಣು ಹಣ್ಣಾಗುತ
ಹಾಡು ಹಾದಿಯಾಗುವ
ಬೆಳಕು.....!

ಈಗ ಹೆಜ್ಜೆ ಹುರುಪಾಗಿವೆ,
ದ್ವಿಗುಣವಾಗಿದೆ ಲಯದ ನಡೆ
ಹುಡಿಯೆಬ್ಬಿಸಿ ಮುನ್ನಡೆದಿದೆ
ರಾಗ......
ತಾನಗಳ ತನನನ
ತಾರಕವ ಮುಟ್ಟಿ, ಚುಂಬಿಸಿ
ಬರುವ ತವಕ...




**ಮಾರುತಿ ದಾಸಣ್ಣವರ**

ಕನ್ನಡ ಶಿಕ್ಷಕರು, ಜವಾಹರ್ ನವೋದಯ ವಿದ್ಯಾಲಯ, ಟೇವಾ, ಉತ್ತರ ಪ್ರದೇಶ – ೨೧೨ ೨೦೭

ರೇಶ್ಮಾ ಜಿ. ಉಲ್ಲಾಳ್

ಒಬ್ಬ ಹೆಣ್ಣು ಅಥವಾ ಗಂಡು ಬಾಲ್ಯಾವಸ್ಥೆಯ ಬಳಿಕ ಹೆಣ್ಣೂ ಅಲ್ಲದ ಗಂಡೂ ಅಲ್ಲದ ಸ್ಥಿತಿಗೆ ತಲುಪುವ ತೃತೀಯ ಲಿಂಗಿಗಳು ಪುರಾಣಗಳಲ್ಲಿ, ಜನಪದ ಕಥೆಗಳಲ್ಲಿ, ಅಷ್ಟೇ ಏಕೆ ಮಧ್ಯಕಾಲೀನ ಯುಗದವರೆಗೂ ಅತ್ಯಂತ ಗೌರವಯುತವಾಗಿ ಬದುಕಿದ ನಿದರ್ಶನಗಳಿವೆ. ಭಾರತ, ಪಾಕಿಸ್ತಾನ, ಬಾಂಗ್ಲಾದೇಶದಲ್ಲಿ ಹಿಜ್ರಾಗಳೆಂದು ಕರೆಯುವ ಈ ಸಮುದಾಯಕ್ಕೆ ಬ್ರಿಟಿಷ್ ಆಡಳಿತ ಕತ್ತಲೆಯ ಕೂಪವಾಯಿತು. ಇವರನ್ನು ಸೋಡೋಮೈಟ್ ಎಂದು ವರ್ಗೀಕರಿಸಿದ ಬ್ರಿಟಿಷರು, ಸಲಿಂಗ ಕಾಮವನ್ನು ಅಪರಾಧವೆಂದು ಪರಿಗಣಿಸಿದರು. ಅಲ್ಲಿಂದಲೇ ಭಾರತದ ಇತಿಹಾಸದಲ್ಲಿ ಇವರು ಅಸ್ಪೃಶ್ಯರಾಗಿ ಉಳಿದರು. ಹೀಗೆ ಆಧುನಿಕ ಕಾಲದಲ್ಲಿ ಅತ್ಯಂತ ನಿಕೃಷ್ಟವಾಗಿ ಬದುಕಿದ ತೃತೀಯ ಲಿಂಗಿಗಳು ಇಂದಿಗೂ ಗೌರವಯುತ ಬದುಕಿಗಾಗಿ ಹೋರಾಟ ಮಾಡುತ್ತಲೇ ಇದ್ದಾರೆ. ಇದೆಲ್ಲದರ ನಡುವೆಯೂ ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಅವರ ಆಚಾರ-ವಿಚಾರಗಳನ್ನು, ಭಾಷೆಗಳನ್ನು ಜೀವಂತವಾಗಿರಿಸಿದ್ದಾರೆ. ತೃತೀಯ ಲಿಂಗಿಗಳು ಪ್ರತ್ಯೇಕ ಜನಾಂಗವಲ್ಲದಿದ್ದರೂ ಅವರ ಸಂಸ್ಕೃತಿ ಜನಾಂಗದ ಅಧ್ಯಯನಕಾರರಿಗೆ ಅತ್ಯುತ್ತಮವಾದ ಆಕರವಾದರೆ ಆಶ್ಚರ್ಯವಿಲ್ಲ.

*ಮೊಲೆ ಮುಡಿ ಬಂದರೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ*
*ಕಾಣಾ ರಾಮನಾಥ*

ಈ ಸಾಲುಗಳ ಮೂಲಕ ಹನ್ನೆರಡನೇ ಶತಮಾನದಲ್ಲಿ ಜೇಡರ ದಾಸಿಮಯ್ಯ, ಗಂಡು-ಹೆಣ್ಣನ್ನು ಲಿಂಗಗಳ ಆಧಾರದಲ್ಲಿ ವಿಂಗಡಿಸಬಹುದೇ ವಿನಾ ಅವರೊಳಗೆ ಸುಳಿಯುವ ಆತ್ಮಗಳಿಗೆ ಲಿಂಗವಿಲ್ಲ ಎಂಬುದನ್ನು ಮಾರ್ಮಿಕವಾಗಿ ನುಡಿದಿದ್ದಾನೆ. ಪುರಾಣ ಕಾಲದಿಂದ ಆಧುನಿಕ ಯುಗದವರೆಗೂ ಗಂಡು – ಹೆಣ್ಣಿನ ನಡುವೆಯೇ ಶಾರೀರಿಕವಾಗಿ ಇವೆರಡಕ್ಕೂ ನಾವು ಸೇರಿದವರಲ್ಲವೆಂದು ಹೇಳಿಕೊಳ್ಳುತ್ತಿರುವ ತೃತೀಯ ಲಿಂಗಿಗಳು ಹಲವಾರು ಕಾರಣಗಳಿಗೆ ವಿಸ್ಮಯವೂ; ಸ್ವಾಭಾವಿಕವೂ; ಅಸ್ವಾಭಾವಿಕವೂ ಆಗಿ ಗೋಚರಿಸುತ್ತಾರೆ. ಅವನ ದೇಹದೊಳಗೆ ಅವಳ ಮನಸ್ಸನ್ನು ಹೊಂದಿರುವ ಅಥವಾ ಅವಳ ದೇಹದಲ್ಲಿ ಅವನಾಗಿರುವ ಇವರ ಉಭಯಸಂಕಟ ಊಹೆಗೂ ಮೀರಿದ್ದು.

ಒಂದು ಲಿಂಗದಿಂದ ಹುಟ್ಟಿ ಮನೆಯವರ ಕಣ್ಮಣಿಯಾಗಿ ಬೆಳೆಯುವ ಮಗು ಬೆಳೆಯುತ್ತಿದ್ದಂತೆ ತನ್ನ ಮನಸ್ಸಿನಲ್ಲಾಗುವ ವ್ಯತಿರಿಕ್ತ ಭಾವನೆಗಳಿಂದ ಮನೆಯವರ, ನೆರೆಹೊರೆಯವರ, ಸಹಪಾಠಿಗಳ ಮೂದಲಿಕೆಗೆ, ದೈಹಿಕ, ಮಾನಸಿಕ ಹಿಂಸೆಯಿಂದ ತೊಳಲಾಡುವ ಇವರ ಸ್ಥಿತಿಯನ್ನು ಯಾವ ಮನಶಾಸ್ತ್ರಜ್ಞರಿಗೂ ಅರ್ಥೈಸಿಕೊಳ್ಳಲಾಗುವುದಿಲ್ಲ. ಸಮಾಜದಲ್ಲಿ ಗೌರವಯುತ ಬದುಕು ಇವರ ಪಾಲಿಗೆ ಇನ್ನೂ ಕನಸಾಗಿಯೇ ಉಳಿದಿದೆ. ಹಾಗಾಗಿಯೇ ಎಲ್ಲರೂ ಇದ್ದರೂ ಯಾರೂ ಇಲ್ಲದಂತೆ ಬದುಕು ಸಾಗಿಸುತ್ತಾರೆ. ಇಂತಹ ಸಮಾಜದ ಬಗ್ಗೆ ಅಸೂಯೆಪಡುತ್ತಲೇ ಪ್ರತ್ಯೇಕ ಸಮುದಾಯದೊಂದಿಗೆ ತಮ್ಮದೇ ಆದ ಕಟ್ಟುಪಾಡುಗಳೊಂದಿಗೆ ಬದುಕುತ್ತಿದ್ದಾರೆ.

ಹಿಂದೆ ನಡೆದ ಅನೇಕ ಭಾರತೀಯ ಮತ್ತು ಪಾಶ್ಚಾತ್ಯ ಅಧ್ಯಯನಗಳು

# ಇದು ಅವನು ಅವಳಾಗುವವರ ಕಥೆ : ಅಸ್ಮಿತೆಗಾಗಿ ಜೀವಂತವಾಗಿದೆ ಇವರ ಸಂಸ್ಕೃತಿ



ತೃತೀಯ ಲಿಂಗಿಗಳ ಕುಲದೇವತೆ ಮುರ್ಗಿ ಮಾತಾ
(ಹುಂಜದ ಮೇಲೆ ಕುಳಿತ ದೇವಿ)

ತೃತೀಯ ಲಿಂಗಿಗಳ ಕುರಿತ ಅಧ್ಯಯನ ಯಾವುದೇ ಜನಾಂಗದ ಅಧ್ಯಯನಕ್ಕೆ ಕಮ್ಮಿಯೇನಿಲ್ಲ. ವಿವಿಧ ಧರ್ಮಗಳಲ್ಲಿರುವ ತೃತೀಯ ಲಿಂಗಿಗಳು ಒಂದೇ ಸಮುದಾಯದಡಿ ಸೇರಿ ತಮ್ಮದೇ ಆದ ಸಂಸ್ಕೃತಿ, ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಅವರು ತುಳಿದ ಹೋರಾಟದ ಹಾದಿಗಳು ಇತಿಹಾಸದಲ್ಲಿ ಗುರುತರವಾದುದು. ಆಧುನಿಕ ಯುಗದ ಅಸಮಾನತೆ, ಲಿಂಗತಾರತಮ್ಯದಂತಹ ಸಮಸ್ಯೆಗಳಿಗೆ ಇವರೂ ಬಲಿಯಾಗಿದ್ದಾರೆ. ಜನಾಂಗೀಯ ದ್ವೇಷಗಳು, ತಾರತಮ್ಯಗಳು ಇತಿಹಾಸದಲ್ಲಿ ಹೇಗೆ ಬೇರೂರಿವೆಯೋ ತೃತೀಯ ಲಿಂಗಿಗಳ ಕುರಿತು ಇದೇ ತೆರನಾದ ಪೂರ್ವಾಗ್ರಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿವೆ. ಸಮಾಜಶಾಸ್ತ್ರಜ್ಞರ ಪ್ರಕಾರ ಅಧಿಕಾರ ರಹಿತ ಸಮುದಾಯದ ಮೇಲೆ ಅಧಿಕಾರಿಶಾಹಿಗಳ ದಬ್ಬಾಳಿಕೆ ಹೇಗೆ ನಡೆದಿದೆಯೋ ಭಾರತದಂತಹ ರಾಷ್ಟ್ರಗಳಲ್ಲಿ ಅಧಿಕಾರವಿರದ, ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ತೃತೀಯ ಲಿಂಗಿಗಳೂ ಟಾರ್ಗೆಟ್ ಆಗುತ್ತಿರುವುದೂ ಅಷ್ಟೇ ಸತ್ಯ.




**ಗಂಡು ಹೆಣ್ಣಾಗುವ ಶಸ್ತ್ರಚಿಕಿತ್ಸೆ ಆದ ಬಳಿಕ ಅದನ್ನು ಹಬ್ಬದ ಹಾಗೆ ಆಚರಿಸುತ್ತಿರುವುದು**

ಸಮಾಜ ಬರೀ ಗಂಡು ಹೆಣ್ಣು ಲಿಂಗಗಳಿರುವವರಿಂದ ಮಾತ್ರ ಕೂಡಿಲ್ಲ. ಇದು ಬಹು ಲಿಂಗಿಗಳಿಂದ ಆವೃತವಾಗಿದೆ. ಇದು ಕೇವಲ ಮನುಷ್ಯರಲ್ಲಿ ಮಾತ್ರವಲ್ಲ, ಪ್ರಾಣಿಗಳಲ್ಲೂ ಈ ತೆರನಾದ ವಿಂಗಡಣೆಯಿದೆ ಎಂದು ಹೇಳುತ್ತಲೇ ಬಂದಿದ್ದಾರೆ. ಜೀವ ವಿಜ್ಞಾನಿ ಆ್ಯನೊ ಫಾಸ್ಟೊ ಲೇಖನವೊಂದರಲ್ಲಿ 'ಮಾನವರನ್ನು ಲಿಂಗದ ಮೇಲೆ ವರ್ಗೀಕರಿಸುವುದಾದಲ್ಲಿ ಕನಿಷ್ಠ ಐದು ವರ್ಗೀಕರಣ ಬೇಕು' ಎನ್ನುತ್ತಾರೆ. ಪೋಸ್ಟ್ ಮಾಡರ್ನಿಸಂ ಹಾಗೂ ಪೋಸ್ಟ್ ಸ್ಟ್ರಕ್ಚರಲಿಸಂ ಸಿದ್ಧಾಂತಗಳ ಪ್ರತಿಪಾದನೆಯ ಬಳಿಕ ಈ ಅಂಶಗಳು ಹೆಚ್ಚು ಬೆಳಕಿಗೆ ಬಂದವು. ಇಂದು ಲಿಂಗ ಮತ್ತು ಲಿಂಗತ್ವ (ಸೆಕ್ಸ್ ಮತ್ತು ಜೆಂಡರ್) ಸಮಾಜವಿಜ್ಞಾನಗಳ ಆಧುನಿಕ ಕಾಲದ ಚರ್ಚೆಯಾಗಿ ರೂಪುಗೊಳ್ಳುತ್ತಿದೆ. ಪ್ರಪಂಚ ಕಂಡ ಬಹುತೇಕ ಎಲ್ಲಾ ಧರ್ಮಗಳಲ್ಲೂ ಗಂಡು ಹೆಣ್ಣುಗಳಲ್ಲದೆ ಮತ್ತೊಂದು ಲಿಂಗಿಗಳ ಬಗ್ಗೆ ಉಲ್ಲೇಖಗಳಿವೆ. ಕೆಲವು ಪ್ರದೇಶಗಳಲ್ಲಿ ಅದು ನಾಲ್ಕು, ಐದನೇ ಲಿಂಗಿಗಳ ಬಗ್ಗೆಯೂ ಮಾತನಾಡುತ್ತದೆ.

ರಸ್ತೆಯಲ್ಲಿ ಸೀರೆ ಉಟ್ಟುಕೊಂಡು, ಚೂಡಿದಾರ್ ಅಥವಾ ಜೀನ್ಸ್ ಟೀ ಶರ್ಟ್‌ನಲ್ಲಿ ಓಡಾಡುವ ತೃತೀಯ ಲಿಂಗಿಗಳ ವರ್ತನೆಗಳಷ್ಟೇ ಅವರ ಆಚಾರ–ವಿಚಾರಗಳು, ಅವರ ಕಟ್ಟುಪಾಡುಗಳು, ವಿಧಿ–ನಿಷೇಧಗಳು ವಿಚಿತ್ರ ಹಾಗೂ ಕುತೂಹಲಕಾರಿಯಾದ ಸಂಗತಿ. ತಾನು ಗಂಡಲ್ಲ; ಹೆಣ್ಣು ಅಥವಾ ಹೆಣ್ಣಲ್ಲ; ಗಂಡು ಎಂದು ಸಮಾಜಕ್ಕೆ ನಿರೂಪಿಸಲು ತೃತೀಯ ಲಿಂಗಿಗಳು ಅನುಸರಿಸಿದ ಮಾರ್ಗಗಳಲ್ಲಿ ಪ್ರಮುಖವಾದುದು ಲಿಂಗಪರಿವರ್ತನೆ. ಅವರ ಭಾಷೆಯಲ್ಲಿ ಅದನ್ನು ನಿರ್ವಾಣ ಅನ್ನುತ್ತಾರೆ. ಇಂದಿನ ಹೈಟೆಕ್ ಆಸ್ಪತ್ರೆಗಳು ಅವರ ತೊಳಲಾಟವನ್ನು ಪರಿಹರಿಸಿಕೊಳ್ಳುವಲ್ಲಿ ಸಹಕಾರಿಯಾಗಿದ್ದರೂ ಹಿಂದೆ ಲಿಂಗಪರಿವರ್ತನೆ ಎಂಬುದು ಅಷ್ಟು ಸುಲಭದ ಮಾತಲ್ಲ. ಮನೆಯವರ ಹಿಂಸೆ ತಾಳಲಾರದೆ, ಸಮಾಜದ ನಿಂದನೆಯನ್ನು ಅರಗಿಸಿಕೊಳ್ಳಲಾಗದೆ ಮನೆ ಬಿಟ್ಟು ಬರುವ ತೃತೀಯ ಲಿಂಗಿಗಳು ತಮ್ಮ ಹಾಗೆ ಬದುಕುವ ಸಮುದಾಯದ ಜೊತೆ ಸೇರಿಕೊಳ್ಳುತ್ತಾರೆ. ಆರ್ಥಿಕವಾಗಿ ಹಿಂದುಳಿದ ಇವರು ಲಿಂಗಪರಿವರ್ತನೆಗೆ ತಮ್ಮೊಳಗೆ ಒಬ್ಬ ಸೂಲಗಿತ್ತಿಯನ್ನು ತಯಾರುಮಾಡುತ್ತಿದ್ದರು. ಮನೆಯನ್ನು ತೊರೆದು ಬಂದ ಮೇಲೆ ಆ ಸಮುದಾಯದ ಹಿರಿಯರೊಬ್ಬರು ಇವರನ್ನು ಚೇಲಾ ಎಂದು ಸ್ವೀಕರಿಸುತ್ತಾರೆ. ಅವರೇ ಇವರಿಗೆ ಗುರುವಾಗಿರುತ್ತಾರೆ. ಹೀಗಾಗಿ ಅವರೆಲ್ಲಾ ಜವಾಬ್ದಾರಿಗಳನ್ನು ಇವರೇ ನಿರ್ವಹಿಸುತ್ತಾರೆ; ನಿರ್ವಾಣದ ಜವಾಬ್ದಾರಿಯನ್ನು ಕೂಡ.

ಗಂಡು ಹೆಣ್ಣಾಗುವ ಶಸ್ತ್ರಚಿಕಿತ್ಸೆಗೆ ತೃತೀಯ ಲಿಂಗಿಗಳಲ್ಲಿ ಅದರದ್ದೇ ಆದ ಮಹತ್ವವಿದೆ. ನಿರ್ವಾಣದಲ್ಲಿ ಅವರ ಜೀವನದ ಸಾರ್ಥಕ್ಯವಿದೆ. ಇದಕ್ಕಾಗಿ ಇಷ್ಟು ದಿನ ಕಾದು ಗೆದ್ದಿರುವ ಸಂತೋಷವಿದೆ; ಆತ್ಮವಿಶ್ವಾಸವಿದೆ. ನಿರ್ವಾಣ ಎಂಬ ದುಬಾರಿಯೂ, ಅತ್ಯಂತ ಯಾತನಾಮಯ ಶಸ್ತ್ರಕ್ರಿಯೆಯ (ಎಷ್ಟೋ ಬಾರಿ ಶಸ್ತ್ರಚಿಕಿತ್ಸೆಯಿಂದ ತಮ್ಮ ಜೀವವನ್ನೇ ಕಳೆದುಕೊಳ್ಳುವ ತೃತೀಯ ಲಿಂಗಿಗಳಿಗೆ ಬದುಕಿ ಬಂದರೆ ಪುನರ್ಜನ್ಮವಿದ್ದಂತೆ) ಬಳಿಕ ಅದನ್ನು ಹಬ್ಬದ ಹಾಗೆ ಆಚರಿಸುತ್ತಾರೆ. ಶಸ್ತ್ರಚಿಕಿತ್ಸೆಯ ಬಳಿಕ ಬದುಕಿ ಬಂದ ಮೇಲೆ ತಾನು ಅವನಲ್ಲ ಅವಳು ಎಂದು ಜಗತ್ತಿಗೆ ಹೇಳುವ ತೃತೀಯ ಲಿಂಗಿಗಳ ಮನಸ್ಸಿನ ಬೇಗುದಿಯನ್ನು ಹೊರಹಾಕುವ ಆಚರಣೆಯಿದು ಎಂದರೆ ತಪ್ಪಾಗಲಾರದು.

ನಿರ್ವಾಣಗಳನ್ನು ಆಧುನಿಕ ಹಾಗೂ ಹಳೆಯ ಶೈಲಿಯೆಂದು ವಿಂಗಡಿಸಬಹುದು. ಇದರಲ್ಲಿ ದಾಯಮ್ ಅಥವಾ ದಾಯಮ್ಮ ನಿರ್ವಾಣ ಎಂಬೆಲ್ಲಾ ಭಾಷಾ ವೈವಿಧ್ಯತೆಯ ಹೆಸರಿನಿಂದ ಕೂಡಿರುವ ನಿರ್ವಾಣ ಪದ್ಧತಿ ಹಳೆಯ ಕಾಲದ್ದು. ದಾಯಮ್ಮ ಎಂದರೆ ಗುರು. ಗುರುವಿನ ಸಮ್ಮುಖದಲ್ಲಿ ನಡೆಸುವ ನಿರ್ವಾಣವಾಗಿದ್ದರಿಂದ ಇದನ್ನು ದಾಯಮ್ಮ ನಿರ್ವಾಣ ಎಂದು ಕರೆಯುತ್ತಾರೆ. ಮಧ್ಯಕಾಲೀನ ಯುಗದಲ್ಲಿ ರಾಜರು ತಮ್ಮ ಸೆರೆಯಲ್ಲಿ ಸಿಕ್ಕ ಸೈನಿಕರನ್ನು ಗುಲಾಮರನ್ನಾಗಿಸುವ ಸಂದರ್ಭ ಅವರ ಜನನೇಂದ್ರಿಯಗಳನ್ನು ಛೇದಿಸಿ ರಾಣಿಯರ ದಾಸರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಆದರೆ ಇಂದು ಜಗತ್ತಿಗೆ ತಮ್ಮ ಅಸ್ಮಿತೆಯನ್ನು ಸಾರುವುದಕ್ಕಾಗಿ ತೃತೀಯ ಲಿಂಗಿಗಳು ನಿರ್ವಾಣ ಮಾಡಿಸಿಕೊಳ್ಳುತ್ತಿದ್ದಾರೆ.

ದಾಯಮ್ಮ ನಿರ್ವಾಣಕ್ಕೂ ಮುನ್ನ ತಮ್ಮ ಕುಲದೇವತೆ ಮುರ್ಗಿ ಮಾತಾ (ಹುಂಜದ ಮೇಲೆ ಕುಳಿತ ದೇವಿ) ಚಿತ್ರದೆದುರು ಸುಮಾರು ನಾಲ್ಕು ಗಂಟೆಗಳ ಕಾಲ ನಿಲ್ಲಿಸಿ, ಮಾತಾ ಸ್ಮರಣೆ ಮಾಡಲು ಹೇಳುತ್ತಾರೆ. ಕೂದಲನ್ನು ಬಾಯಲ್ಲಿ ಕಚ್ಚುತ್ತಾ ಇರಲು ಸೂಚಿಸುತ್ತಾರೆ. ಹರಿತವಾದ ಕತ್ತಿಯಂತಹ ಆಯುಧದಿಂದ ಒಂದೇ ಏಟಿಗೆ ಗಂಡು ಅವಯವ (ಶಿಶ್ನ ಹಾಗೂ ವೃಷಣ)ಗಳನ್ನು ದೇಹದಿಂದ ಬೇರ್ಪಡಿಸುತ್ತಾರೆ. ಇನ್ನೊಂದು ವಿಧಾನದ ಪ್ರಕಾರ, ಜನನೇಂದ್ರಿಯಗಳ ಮೇಲೆ ಉಪ್ಪು ನೀರು ಹಾಗೂ ಬಿಸಿ ಎಣ್ಣೆಯನ್ನು ಆಗಾಗ ಎರಚುವ ಮೂಲಕ ನೋವನ್ನು ಸಾಯಿಸಲಾಗುತ್ತದೆ. ಎಷ್ಟೋ ಮಂದಿ ಈ ಸಂದರ್ಭದಲ್ಲೇ ಅತಿಯಾದ ನೋವಿನಿಂದ ಪ್ರಜ್ಞೆ ಕಳೆದುಕೊಳ್ಳುತ್ತಾರೆ. ಆದರೆ ಅವರನ್ನು ಪದೇ ಪದೇ ಎಚ್ಚರಿಸಲಾಗುತ್ತದೆ. ಕೆಲ ಗಂಟೆಗಳ ಬಳಿಕ ಜನನೇಂದ್ರಿಯಗಳಿಗೆ ದಾರವನ್ನು ಕಟ್ಟಿ ಬಲವಾಗಿ ಎಳೆದಾಗ ಅದು ದೇಹದಿಂದ ಬೇರ್ಪಡುತ್ತದೆ. ನಿರ್ವಾಣದ ವೇಳೆ ಸ್ಮೃತಿ ಮರಳದೆ ಸಾವನ್ನಪ್ಪಿದರೆ ಅವರನ್ನು ಮೊದಲೇ ತೆಗೆದಿರುವ ಹೊಂಡದಲ್ಲಿ ಹಾಕಿ ಮಣ್ಣು ಮುಚ್ಚುತ್ತಾರೆ. ಹೀಗೆ ಗಂಡಿನಿಂದ ಹೆಣ್ಣಾಗಬೇಕು ಎಂಬ ಅದಮ್ಯ ಬಯಕೆ ಕೆಲವೊಮ್ಮೆ ಸಾವಿನಲ್ಲೂ ಪರ್ಯವಸಾನವಾಗುವುದುಂಟು. ಆದರೆ ಇದು ಹೊರಜಗತ್ತಿಗೆ ತಿಳಿಯುವುದೇ ಇಲ್ಲ.

ಕಾಲ ಬದಲಾಗಿದೆ. ಹೈಟೆಕ್ ಆಸ್ಪತ್ರೆಗಳು ತಲೆ ಎತ್ತಿವೆ. ಕಾಸ್ಮೆಟಿಕ್ ತಜ್ಞರು ತೃತೀಯ ಲಿಂಗಿಗಳ ಆಸೆಯನ್ನು ಅರಿತು ಅವರಿಗೆ ಬೇಕಾದ ಹಾಗೆ ಶಸ್ತ್ರಚಿಕಿತ್ಸೆಯ ಮೂಲಕ ಮರುಜನ್ಮ ನೀಡುತ್ತಾರೆ. ಹಿಂದೆಲ್ಲಾ ಮುಂಬಯಿ, ಚೆನ್ನೈಯಲ್ಲಿ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವಂತಹ ಅನಿವಾರ್ಯತೆಯಿತ್ತು. ಆದರೆ, ಈಗ ಹಾಗಲ್ಲ ಬೆಂಗಳೂರಿನ ಕೆಲ ಆಸ್ಪತ್ರೆಗಳು, ಕಳೆದೆರಡು ವರ್ಷಗಳಿಂದ ಮಂಗಳೂರಿನ ಎ. ಜೆ. ಆಸ್ಪತ್ರೆ ತೃತೀಯ ಲಿಂಗಿಗಳ ಪಾಲಿಗೆ ಆಶಾಕಿರಣವಾಗಿವೆ. ಹತ್ತಕ್ಕೂ ಹೆಚ್ಚು ತೃತೀಯ ಲಿಂಗಿಗಳಿಗೆ ಶಸ್ತ್ರಚಿಕಿತ್ಸೆ ಮಾಡಿದ ಎ. ಜೆ. ಆಸ್ಪತ್ರೆಯ ಡಾ॥ ದಿನೇಶ್ ಕದಂ ಹಾಗೂ ತಜ್ಞರ ಬಳಗ ಗಂಡು ಹೆಣ್ಣಾಗುವ ಶಸ್ತ್ರಕ್ರಿಯೆಯ ಜೊತೆಗೆ ಹೆಣ್ಣು ಗಂಡಾಗುವ ಶಸ್ತ್ರಚಿಕಿತ್ಸೆಯನ್ನೂ ಯಶಸ್ವಿಯಾಗಿ ಪೂರೈಸಿದ್ದಾರೆ.

ಹೆಣ್ಣೊಬ್ಬಳು ಮಗುವಿಗೆ ಜನ್ಮ ನೀಡಿದ ಬಳಿಕ ಅನುಸರಿಸುವ ಹಾಗೆ ತೃತೀಯ ಲಿಂಗಿಗಳೂ ನಿರ್ವಾಣದ ಬಳಿಕ ಕೆಲ ಪಥ್ಯಗಳನ್ನು ಅನುಸರಿಸುತ್ತಾರೆ. ಬೆಲ್ಲದಲ್ಲಿ ಮಾಡಿದ ಟೀ ಜೊತೆಗೆ ಸ್ವಲ್ಪ ತುಪ್ಪವನ್ನೂ ಹಾಕಿ ಕೊಡುತ್ತಾರೆ. ಮೂರೂ ಹೊತ್ತು ಚಪಾತಿ ಹಾಗೂ ಮಾಂಸಾಹಾರಿ, ಹಾಗಲಕಾಯಿ ಪದಾರ್ಥವನ್ನು ಹೆಚ್ಚಾಗಿ

ನೀಡುತ್ತಾರೆ. ಶಸ್ತ್ರಕ್ರಿಯೆಯ ಸಂದರ್ಭ ಕಳೆದುಹೋದ ರಕ್ತ ಹಾಗೂ ದೇಹ ಸಾಮರ್ಥ್ಯವನ್ನು ಮತ್ತೆ ಪಡೆಯುವುದಕ್ಕಾಗಿ ಈ ಪಥ್ಯಗಳನ್ನು ಅನುಸರಿಸಲಾಗುತ್ತದೆ. ನಂಜು ವಸ್ತುಗಳನ್ನು ತಿನ್ನಲು ಬಿಡುವುದಿಲ್ಲ. ಯಾವುದೇ ಕಾರಣಕ್ಕೂ ಕೋಳಿ ಪದಾರ್ಥ ನೀಡುವುದಿಲ್ಲ. ತಮ್ಮ ದೇವರು ಪೇತ್ರಾಜಿ ಮಾತಾ ಹುಂಜದಲ್ಲಿ ಕೂತಿರುವುದರಿಂದ ಹುಂಜ ಕೂಡ ಅವರಿಗೆ ದೇವರು. ಈ ಕಾರಣಕ್ಕಾಗಿಯೇ ಅವರು ಇಂದಿಗೂ ಹುಂಜವನ್ನು ಪದಾರ್ಥವಾಗಿ ಸೇವಿಸುವುದಿಲ್ಲ.

ನಿರ್ವಾಣದ ಬಳಿಕ ಯಾವುದೇ ಗಂಡಸಿನ ಮುಖವನ್ನು ನೋಡುವ ಹಾಗಿಲ್ಲ. ಅಷ್ಟೇ ಏಕೆ, ಕನ್ನಡಿಯಲ್ಲೂ ತಮ್ಮ ಮುಖವನ್ನು ನೋಡುವಂತಿಲ್ಲ. ಈ ಸಂದರ್ಭ ಲಚ್ಚ ಎಂಬ ಐದು ಗುಂಡುಗಳ ಸರವನ್ನು ಕುತ್ತಿಗೆಗೆ ಕಟ್ಟಿಕೊಳ್ಳಲಾಗುತ್ತದೆ. ಮೂರು ತಿಂಗಳ ಬಳಿಕ ಅಥವಾ ನಿರ್ವಾಣದ ಬಳಿಕ ನಡೆಯುವ ಕಾರ್ಯಕ್ರಮ ಸಂದರ್ಭ ದೇವರ ಸನ್ನಿಧಿಯಲ್ಲಿ ಈ ಸರವನ್ನು ತೆಗೆಯಲಾಗುತ್ತದೆ. ನಿರ್ವಾಣ ಆಗಿ ಹನ್ನೊಂದನೇ ದಿನ, ೨೧ನೇ ದಿನ ಮತ್ತು ೪೧ನೇ ದಿನಕ್ಕೆ ಕಾರ್ಯಕ್ರಮ ಮಾಡಲಾಗುತ್ತದೆ. ಈ ಸಂದರ್ಭ ಹೆಣ್ಮಕ್ಕಳು ಋತುಮತಿಯಾದಾಗ ಯಾವ ರೀತಿ ಶಾಸ್ತ್ರಗಳನ್ನು ಮಾಡುತ್ತಾರೋ ಅದೇ ರೀತಿ ಮೈಗೆ ಅರಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ಬಳಿಕ ಗುರುಗಳು ಮೂಗುತ್ತಿ, ಬೊಟ್ಟು, ಬಳೆ, ಕಾಲುಂಗುರವನ್ನು ತೊಡಿಸುತ್ತಾರೆ. ಇದನ್ನೆಲ್ಲಾ ಮದುವೆ ಸಂದರ್ಭ ಹೆಣ್ಮಕ್ಕಳಿಗೆ ಮುತ್ತೈದೆ ಭಾಗ್ಯವನ್ನು ಕೊಡುವುದು ಗಂಡ ಎಂಬುದು ಸಂಪ್ರದಾಯ. ಆದರೆ, ತೃತೀಯ ಲಿಂಗಿಗಳಲ್ಲಿ ಗಂಡ ಎಂಬ ಪರಿಕಲ್ಪನೆಗಿಂತ ಮನೆಯ ಯಜಮಾನ, ಅವರ ಎಲ್ಲಾ ಆಗು ಹೋಗುಗಳಿಗೆ ಗುರುವೇ ಜವಾಬ್ದಾರರು ಎಂಬ ನಂಬಿಕೆ ಇದೆ ಎಂಬುದನ್ನು ಪಯಣ ಸಂಸ್ಥೆಯ ಸವಿತಾ ಹಾಗೂ ಉಡುಪಿಯಲ್ಲಿರುವ ಕಾಜಲ್, ನಗ್ಮಾ ಹೇಳುತ್ತಾರೆ. ಇನ್ನು ನಿರ್ವಾಣ ಎಂಬುದೇ ತೃತೀಯ ಲಿಂಗಿಗಳಿಗೆ ಪುನರ್ಜನ್ಮದ ಹಾಗೆ. ಈ ಕಾರ್ಯಕ್ರಮವೂ ಪುನರ್ಜನ್ಮದ ಸೆಲೆಬ್ರೇಷನ್. ಸಾಮಾನ್ಯವಾಗಿ ಈ ಆಚರಣೆ ಸೋಮವಾರ ರಾತ್ರಿ ಅಥವಾ ಗುರುವಾರ ರಾತ್ರಿ ಮಾಡುತ್ತಾರೆ. ಕಾರಣವೇನೆಂದರೆ ತೃತೀಯ ಲಿಂಗಿಗಳಿಗೆ ಮಂಗಳವಾರ ಹಾಗೂ ಶುಕ್ರವಾರ ಶುಭದಿನಗಳು. ಕಾರ್ಯಕ್ರಮ ಮುಗಿಯುವ ಹೊತ್ತಿಗೆ ಮಧ್ಯರಾತ್ರಿ ಕಳೆದಿರುತ್ತದೆ. ಹಾಲಿನ ಕೊಡಗಳನ್ನು ತಲೆ ಮೇಲೆ ಇಟ್ಟು ನದಿ ಅಥವಾ ಸಮುದ್ರಕ್ಕೆ ಬಿಡುವುದು ಒಂದು ಸಂಪ್ರದಾಯ. ಆದರೆ, ಈಗ ನದಿಗಳು ಬತ್ತಿಹೋಗಿವೆ. ನಗರದಲ್ಲಿ ಸಾರ್ವಜನಿಕ ಪೈಪ್‌ಗಳಿರುವ ಸ್ಥಳದಲ್ಲಿ ನೀರನ್ನು ಇಟ್ಟು ಈ ಪೂಜೆಯನ್ನು ಮಾಡುತ್ತಾರೆ.

ನೀರಿಗೆ ಹಾಲು ಸುರಿಯುವ ಸಂಪ್ರದಾಯಕ್ಕೂ ಅದರದ್ದೇ ಆದ ನಂಬಿಕೆಯಿದೆ. ನಿರ್ವಾಣದ ಬಳಿಕ ಗಂಡಸಿನ ಶಿಶ್ನವನ್ನು ತೆಗೆಯುತ್ತಾರೆ. ಆದರೆ ಆಗ ಮೂತ್ರ ಹೋಗುವ ಜಾಗದಲ್ಲಿ ಯಾವುದೇ ಸಮಸ್ಯೆಗಳು ಬಾರದೆ ದೇಹದಿಂದ ಸರಾಗವಾಗಿ ಮೂತ್ರ ಹೋಗಲಿ ಎಂಬ ಆಶಯದೊಂದಿಗೆ ಈ ಸಂಪ್ರದಾಯವನ್ನು ಪಾಲಿಸಲಾಗುತ್ತದೆ. ರಾತ್ರಿ ಹೊತ್ತು ನಿರ್ವಾಣದ ಕಾರ್ಯಕ್ರಮ ಮಾಡುವುದಕ್ಕೆ ಇನ್ನೊಂದು ಕಾರಣವೆಂದರೆ ನಿರ್ವಾಣ ಮಾಡಿಸಿಕೊಂಡು ಹೆಣ್ಣಾಗಿದ್ದೇವೆ



ನೀರಿಗೆ ಹಾಲು ಸುರಿಯುವ ಸಂಪ್ರದಾಯ

ಎಂಬುದನ್ನು ಇಡೀ ಜಗತ್ತಿಗೆ ಸಾರುವ ಸಂದರ್ಭವದು. ಆಗ ತೆಂಗಿನಮರ, ಕಪ್ಪು ನಾಯಿ ಅಥವಾ ಇನ್ಯಾವುದೋ ಮರಕ್ಕೆ ತಾವು ಉಟ್ಟಿರುವ ವಸ್ತ್ರವನ್ನು ಎತ್ತಿ ನಿರ್ವಾಣವಾಗಿರುವುದನ್ನು ತೋರಿಸುತ್ತಾರೆ. ಹಾಗೆ ಎತ್ತಿ ತೋರಿಸಿದ ಮರಗಳು ಸತ್ತುಹೋಗುತ್ತವೆ, ಅದರ ಸಂಪೂರ್ಣ ಸತ್ತ್ವವನ್ನು ಇವರು ಹೀರಿಕೊಳ್ಳುವುದರಿಂದ ಹಾಗಾಗುತ್ತದೆ ಎಂಬ ನಂಬಿಕೆಯಿದೆ. 'ಅದಕ್ಕಾಗಿಯೇ ಅಂಗಡಿ ಕೇಳಲು ಹೋದಾಗ (ಭಿಕ್ಷಾಟನೆಗೆ ಇವರು ಅಂಗಡಿ ಕೇಳುವುದು ಎನ್ನುತ್ತಾರೆ) ದುಡ್ಡು ಕೊಡದೆ ಹೋದರೆ, ನಾವು ವಸ್ತ್ರ ಮೇಲೆತ್ತುತ್ತೇವೆ ಅನ್ನುವಾಗ ಅವರು ಅದನ್ನು ತಡೆದು ದುಡ್ಡು ಕೊಟ್ಟು ಕಳುಹಿಸುತ್ತಾರೆ. ಸಾಮಾನ್ಯವಾಗಿ ನಾವು ಹಾಗೆ ಮಾಡುವುದಿಲ್ಲ. ನಮಗೂ ಸಮಾಜ ತುಂಬ ಅನ್ಯಾಯ ಮಾಡುತ್ತದೆ. ಆರ್ಥಿಕವಾಗಿ, ಮಾನಸಿಕವಾಗಿ ಕುಗ್ಗಿ ಹೋಗಿರುವುದರಿಂದ ವಿಧಿಯಿಲ್ಲದೆ ಅಂಗಡಿ ಕೇಳುತ್ತೇವೆ. ಆದರೂ ಅವರು ದುಡ್ಡು ಕೊಡಲು ಸತಾಯಿಸಿದರೆ ಹೀಗೆ ಮಾಡುತ್ತೇವೆ. ಇಲ್ಲಿಯವರಿಗಿಂತ ಮುಂಬಯಿ, ಪುಣೆ, ಪಂಜಾಬ್, ಹರಿಯಾಣ, ಹೈದರಾಬಾದ್ ಕಡೆಗಳಲ್ಲಿ ತಲತಲಾಂತರದಿಂದ ನಾವು ಅಂಗಡಿ ಕೇಳಿಕೊಂಡು ಜೀವನ ಮಾಡುತ್ತೇವೆ. ಅವರೂ ನಮಗೆ ದುಡ್ಡು ಕೊಡುತ್ತಾರೆ' ಎನ್ನುತ್ತಾರೆ ಲಾವಣ್ಯ, ಪ್ರೇಮಾಕೃಷ್ಣ ಹಾಗೂ ಸವಿತಾ. ಇನ್ನು ಬೈದಾಡಿದರೆ ಎಲ್ಲರಿಗೂ ಕೆಟ್ಟದ್ದಾಗುತ್ತದೆ ಎಂದೇನೂ ಇಲ್ಲ. ಕೆಲವರಿಗೆ ನಾವು ಬೈದು, ಬಟ್ಟೆ ಎತ್ತಿ ತೋರಿಸಿದರೆ ಅವರಿಗೆ ಒಳ್ಳೆಯದಾಗುತ್ತದೆ, ವ್ಯಾಪಾರ ಹೆಚ್ಚುತ್ತದೆ ಎಂಬ ನಂಬಿಕೆಯಿದೆ. ಕೊಡಗಿನಲ್ಲಿ ಒಂದು ಆಚರಣೆಯಿದೆ. ಅವರ ಗದ್ದೆಯಿಂದ, ತೋಟದಿಂದ ಯಾರಾದರೂ, ಏನಾದರೂ ಕದ್ದುಕೊಂಡು ಹೋದರೆ, ಬೈದಾಡಿದರೆ ಒಳ್ಳೆಯದು ಎಂಬಂತೆ. ಅದೇ ರೀತಿಯ ನಂಬಿಕೆ ಇದು. ಅಂಥವರು ತಮ್ಮಿಂದ ಹೆಚ್ಚು ಹೆಚ್ಚು ಬೈಸಿಕೊಳ್ಳುತ್ತಾರೆ ಎನ್ನುತ್ತಾರೆ ಸವಿತಾ.

ನಿರ್ವಾಣವಾಗಿ ಸುಮಾರು ನಲ್ವತ್ತು ದಿನಗಳವರೆಗೆ ಗಂಡಸರ ಮುಖವನ್ನೇ ನೋಡದ ತೃತೀಯ ಲಿಂಗಿಗಳು ಮೊದಲು ಲೈಂಗಿಕ ಕ್ರಿಯೆ ನಡೆಸುವುದು ಚಮ್ಮಾರರ ಬಳಿ. ಆದರೆ ಇಲ್ಲಿ ಸೆಕ್ಸ್ ಅನ್ನೋದು ಬರೀ ಸಂಕೇತ. ಇಲ್ಲಿ ನಿಜವಾಗಿ ಆಗಬೇಕಾಗಿರುವುದು ಬೋಣಿ. ಸುಮ್ಮಸುಮ್ಮನೆ ಯಾರೂ ದುಡ್ಡು ಕೊಡಲ್ಲ. ಆ ಕಾರಣಕ್ಕೆ ಪ್ರತಿಯಾಗಿ ಅವರ ಜೊತೆಗೆ ಸೆಕ್ಸ್ ಮಾಡಿ ಹಣ ಪಡೆಯುತ್ತಾರೆ. ಅದರಿಂದ ಸಂಪತ್ತು ಹೆಚ್ಚುತ್ತದೆ ಎಂಬ ನಂಬಿಕೆ ತೃತೀಯ ಲಿಂಗಿಗಳದ್ದು ಎಂಬ ಮಾಹಿತಿಯನ್ನು ಕ್ಷೇತ್ರಕಾರ್ಯಗಳಲ್ಲಿ ತೃತೀಯ ಲಿಂಗಿಗಳು ಹಂಚಿಕೊಂಡಿದ್ದಾರೆ.

ತೃತೀಯ ಲಿಂಗಿಗಳ ದೇವರು ಪೇತ್ರಾಜ್ ಮಾತಾ ಆಗಿರುವುದರಿಂದ ನಿರ್ವಾಣದ ಬಳಿಕ ನಡೆಯುವ ಪೂಜೆ ಪುನಸ್ಕಾರಗಳು ಹಿಂದೂ ಸಂಪ್ರದಾಯದಂತಿರುತ್ತದೆ. ಹಾಗಂತ ಅವರಲ್ಲಿ ಎಲ್ಲ ಧರ್ಮದವರೂ ಇದ್ದಾರೆ. ಯಾವತ್ತೂ ಬೇರೆ ಬೇರೆ ಧರ್ಮದವರು ಎನ್ನುವುದಕ್ಕಿಂತ ಎಲ್ಲರೂ ಎಲ್ಲ ಧರ್ಮದ ಆಚಾರ ವಿಚಾರಗಳನ್ನು ಗೌರವಿಸುತ್ತಾರೆ. ನಿರ್ವಾಣಕ್ಕೂ, ಮುಸ್ಲಿಮರ ಮುಂಜಿ ಅಥವಾ ಸುನ್ನತ್‌ಗೂ ಸಾಮ್ಯತೆ ಇರುವುದರಿಂದ (ಎರಡು ಕಡೆಯಲ್ಲೂ ಜನನೇಂದ್ರಿಯಗಳನ್ನು ಕತ್ತರಿಸುವ ಸಂಪ್ರದಾಯವಿದೆ) ಮುಸ್ಲಿಂ ಧರ್ಮದ ಸಂಪ್ರದಾಯವನ್ನು ಅನುಸರಿಸಿದಂತೆಯೇ ಅಂದುಕೊಂಡು ಕೆಲವರು ಆ ಧರ್ಮದ ರೀತಿ ರಿವಾಜುಗಳನ್ನು ಪಾಲಿಸುವವರೂ ಇದ್ದಾರೆ. ಭಾಂಗ್ ಕೇಳಿದಾಕ್ಷಣ ರಸ್ತೆಯಲ್ಲಿದ್ದರೂ ತಲೆಯನ್ನು ದುಪ್ಪಟದಿಂದ ಕವರ್ ಮಾಡಿಕೊಳ್ಳಬೇಕು. ಐದು ಬಾರಿ ನಮಾಜ಼್ ಮಾಡುವವರೂ ಇದ್ದಾರೆ ಅನ್ನೋದು ಬಹುಜನರಿಗೆ ಗೊತ್ತಿರಲಿಕ್ಕಿಲ್ಲ. ತೃತೀಯ ಲಿಂಗಿಗಳು ತಮ್ಮದೇ ಸಮುದಾಯವನ್ನು ಸೇರುವ ಸಂದರ್ಭ ಕೂಡ ತಲೆಯನ್ನು ದುಪ್ಪಟದಲ್ಲಿ ಮುಚ್ಚಬೇಕಾದುದು ಸಂಪ್ರದಾಯ. ಗುರುವಿನ ಮುಂದೆ ಬಂದಾಗಲೂ ತಲೆಗೆ ಶಾಲು ಹೊದ್ದುಕೊಂಡು ನಿಲ್ಲಬೇಕೆನ್ನುವುದು ಇವರಲ್ಲಿರುವ ಕಟ್ಟುಪಾಡು ಎನ್ನುತ್ತಾರೆ ತೃತೀಯ ಲಿಂಗಿ ನಿಖಿಲಾ. ಇವರಿಗೆ ದೀಪಾವಳಿ, ದಸರಾ ದೊಡ್ಡ ಹಬ್ಬ. ಅದೇ ರೀತಿ ರಂಜಾನ್ ಹಬ್ಬಕ್ಕೂ ಹೊಸ ಉಡುಪು ಖರೀದಿಸಿ ಸಂಭ್ರಮಿಸುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸ್ವಾತಂತ್ರ್ಯ ಪೂರ್ವದ ಇತಿಹಾಸ ತೃತೀಯ ಲಿಂಗಿಗಳು ಕೂಡ ಸಾಮಾಜಿಕ ಸ್ಥಾನಮಾನವನ್ನು ಹೊಂದಿದ್ದರು. ಆಗಿನ ಹಿಂದೂ ಹಾಗೂ ಮುಸ್ಲಿಂ ರಾಜರ ಆಡಳಿತದ ಕಾಲದಲ್ಲಿದ್ದ ಎರಡೂ ಸಂಪ್ರದಾಯಗಳನ್ನು ಇವರು ಇಂದಿಗೂ ಪಾಲಿಸಿಕೊಂಡು ಬರುತ್ತಾರೆ ಎಂಬುದಕ್ಕೆ ಅವರ ಆಚರಣೆಗಳು ಸಾಕ್ಷಿಯಾಗಿವೆ. ತೃತೀಯ ಲಿಂಗಿಗಳದ್ದು ಲಿಂಗತ್ವ ವೈವಿಧ್ಯತೆಯ ಸಮುದಾಯ ಎಂದರೆ ತಪ್ಪಾಗಲಾರದು.

## ಅಭಿನಂದನೆ...

ಚಿಕ್ಕಮಗಳೂರಿನ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ 'ಗೊರುಚ ದತ್ತಿ ನಿಧಿ' ವತಿಯಿಂದ ನೀಡುವ 'ಗೊರುಚ ಶರಣ ಪ್ರಶಸ್ತಿ'ಯು ಡಾ॥ ಗುರುಲಿಂಗ ಕಾಪಸೆ ಹಾಗೂ 'ಗೊರುಚ ಜಾನಪದ ಪ್ರಶಸ್ತಿ'ಯು ಡಾ॥ ಬಸವರಾಜ ನೆಲ್ಲಿಸರ ಅವರಿಗೆ ಲಭಿಸಿದೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

**ಬದಾಯಿ, ಬಸ್ತಿ**

ಬದಾಯಿ ಹಾಗೂ ಬಸ್ತಿ ತೃತೀಯ ಲಿಂಗಿಗಳಲ್ಲಿರುವ ಸಂಪ್ರದಾಯ. ಹೊಸ ಅಂಗಡಿ ತೆರೆದರೆ ಅಲ್ಲಿ ಅಂಗಡಿ ಕೇಳುವುದನ್ನು ಬಸ್ತಿ ಎನ್ನುತ್ತಾರೆ. ಮನೆಗಳಲ್ಲಿ ನಡೆಯುವ ಶುಭ ಕಾರ್ಯಕ್ರಮ, ಅಂಗಡಿಗಳಲ್ಲಿ ನಡೆಯುವ ಶುಭ ಕಾರ್ಯಗಳಲ್ಲಿ ತೃತೀಯ ಲಿಂಗಿಗಳನ್ನು ಕರೆದು ಹಾಡಿಸಿ, ಕುಣಿಸಿದ ಮೇಲೆ ನೀಡುವ ಕೊಡುಗೆಗೆ ಬದಾಯಿ ಎನ್ನುತ್ತಾರೆ. ಊರಿನಲ್ಲಿ ನಡೆಯುವ ಜಾತ್ರೆ, ಹಬ್ಬ ಹರಿದಿನಗಳಲ್ಲೂ ಬದಾಯಿ ನೀಡುವ ಸಂಪ್ರದಾಯವಿದೆ. ಅಲ್ಲಿ ತೃತೀಯ ಲಿಂಗಿಗಳು ಹಣ, ದವಸಧಾನ್ಯಗಳನ್ನು ಕಾಣಿಕೆಯಾಗಿ ಪಡೆಯುತ್ತಾರೆ. ಅದರಿಂದಲೇ ತೃತೀಯ ಲಿಂಗಿಗಳ ಜೀವನ ಸಾಗಬೇಕು. ಆದರೆ, ಈಗ ಇಷ್ಟರಲ್ಲೇ ಜೀವನ ಸಾಗಿಸುವ ಸ್ಥಿತಿ ತೃತೀಯ ಲಿಂಗಿಗಳಲ್ಲಿಲ್ಲ. ಬದುಕಿಗಾಗಿ ಹಣ ಗಳಿಕೆಯ ದಾರಿಗಳನ್ನು ಹುಡುಕುತ್ತಿದ್ದಾರೆ. ಅಂಗಡಿ ಕೇಳುವುದನ್ನೂ ಖಾಯಂ ಮಾಡಿಕೊಂಡಿದ್ದಾರೆ. ವೇಶ್ಯಾವಾಟಿಕೆಯಲ್ಲಿ ತೊಡಗುವವರ ಸಂಖ್ಯೆಯೂ ಬೆಳೆಯುತ್ತಿದೆ. ಸಂಪ್ರದಾಯಗಳೇ ಇಲ್ಲಿ ಜೀವನಕ್ಕೊಂದು ಕಸುಬಾಗಿ ಮಾರ್ಪಟ್ಟ ನಿದರ್ಶನವಿದು. ಉತ್ತರ ಭಾರತೀಯರಲ್ಲಿ ಮಂಗಳಮುಖಿಯರ ಬಗ್ಗೆ ಹೆಚ್ಚು ಗೌರವ ಇದೆ. ಅವರ ಯಾವುದೇ ಶುಭ ಕಾರ್ಯಗಳಲ್ಲಿ ಪಾಲ್ಗೊಳ್ಳಲು ತಮಗೆ ಆಹ್ವಾನವಿದೆ. 'ಮೌಸಿ ಇದರ್ ಆವೊ ಲಿಂಬೊ ಕಡ್‌ಕರೆ' ಎನ್ನುತ್ತಾರೆ. ಮಂಗಳೂರಿನಲ್ಲಿ ಅನೇಕ ರಾಜಸ್ತಾನಿ ಮಂದಿ ಈಗಲೂ ತಮಗೆ ಈ ಮರ್ಯಾದೆ ನೀಡುತ್ತಿದ್ದಾರೆ. ಆದರೆ, ಕರಾವಳಿ ಜನ ಮಾತ್ರ ಈ ತೆರನಾದ ಸಂಪ್ರದಾಯಗಳಿಗೆ ಹೆಚ್ಚು ಮಣೆ ಹಾಕುವುದಿಲ್ಲ. ಅಂತಹ ಮಂಗಳಮುಖಿ ಪ್ರೇಮಾ ಕೃಷ್ಣ ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಾರೆ.

ಸರಕಾರ ಭಿಕ್ಷೆ ಬೇಡುವುದನ್ನು ನಿಷೇಧಿಸಿದಾಗ ಮೊತ್ತ ಮೊದಲ ಬಾರಿಗೆ ವಿರೋಧ ವ್ಯಕ್ತಪಡಿಸಿದವರಲ್ಲಿ ತೃತೀಯ ಲಿಂಗಿಗಳು ಪ್ರಮುಖರು. ನಾವು ಕೇಳುವುದು ಭಿಕ್ಷೆಯಲ್ಲ. ಬದಾಯಿ, ಬಸ್ತಿ ನಮ್ಮ ಸಂಪ್ರದಾಯವೇ ಹೊರತು ಇನ್ನೊಬ್ಬರ ಹಂಗಲ್ಲ ಎಂಬುದು ಇವರ ವಾದ. ಇನ್ನು ಬದಾಯಿ ನೀಡುವುದರಿಂದಲೂ ಅವರಿಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆಯನ್ನು ಸರಕಾರ ನಿಗ್ರಹಿಸುವುದು ಸರಿಯಲ್ಲ ಎಂಬ ಆಕ್ರೋಶ ಒಂದೆಡೆಯಾದರೆ, ನಿಕೃಷ್ಟವಾಗಿ ಕಾಣುವ ಸಮಾಜ, ಅಸಮಾನತೆಯನ್ನು ಸೃಷ್ಟಿಸುವ ಸಮಾಜ ತೃತೀಯ ಲಿಂಗಿಗಳಿಗೆ ಕರೆದು ಉದ್ಯೋಗ ಅಥವಾ ಆಶ್ರಯ ನೀಡಲು ನಿರಾಕರಿಸುವ ಸಮಾಜ ಭಿಕ್ಷಾಟನೆಯ ಹೆಸರಿನಲ್ಲಿ ತಮ್ಮ ಬದುಕಿನ ಹಕ್ಕನ್ನು ಕಸಿಯುತ್ತಿದೆ ಎಂಬ ನೋವು, ಹತಾಶೆಯನ್ನು ಅವರು ವ್ಯಕ್ತಪಡಿಸುತ್ತಾರೆ. ಮತ್ತೊಂದೆಡೆ ಭಿಕ್ಷೆ ಅನ್ನುವುದು ಮಾನವೀಯ ಮೌಲ್ಯಕ್ಕೆ ವಿರೋಧವಾದದ್ದು. ವ್ಯಕ್ತಿಯ ಘನತೆಯನ್ನು ಕುಗ್ಗಿಸುವಂಥದ್ದು. ಆದರೆ, ತೃತೀಯ ಲಿಂಗಿಗಳಿಗೆ ಉದ್ಯೋಗಕ್ಕೆ ಪರ್ಯಾಯ ವ್ಯವಸ್ಥೆಯಿಲ್ಲ. ಅದನ್ನು ಸಮಾಜ ಈಗಾಗಲೇ ಕಸಿದುಕೊಂಡಿದ್ದು, ಇದಕ್ಕಾಗಿ ಸಮಾಜಕ್ಕೆ ಒಮ್ಮತವಲ್ಲದ ಬದುಕನ್ನು ಅವರು ಬಾಳುವಂತಾಗಿದೆ. ಇವರಲ್ಲಿ ಅನೇಕ ಮಂದಿ ಪದವಿ ಶಿಕ್ಷಣ ಪಡೆದವರಿದ್ದಾರೆ. ಅವರೂ ಭಿಕ್ಷಾಟನೆ, ವೇಶ್ಯಾವೃತ್ತಿಯಲ್ಲಿರುವುದು ಇಡೀ ವ್ಯವಸ್ಥೆಯನ್ನೇ ಅಪಹಾಸ್ಯ ಮಾಡುವಂತಿದೆ.

**ಸಾವಿನ ಬಳಿಕದ ವಿಧಿ ವಿಧಾನಗಳು**

ಹುಟ್ಟು-ಸಾವಿನ ಬಗ್ಗೆ ಪ್ರತೀ ಧರ್ಮದಲ್ಲೂ ಅದರದ್ದೇ ಆದ ವಿಧಿ ವಿಧಾನಗಳಿರುವ ಹಾಗೆ ತೃತೀಯ ಲಿಂಗಿಗಳ ಮರಣದ ನಂತರ ವಿಶಿಷ್ಟ ವಿಧಿಗಳಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ತೃತೀಯ ಲಿಂಗಿಗಳ ಬಹುತೇಕ ವಿಧಿವಿಧಾನಗಳು ಮಧ್ಯರಾತ್ರಿಯೇ ನಡೆಯುತ್ತವೆ. ಹಾಗಾಗಿ ಹೊರಜಗತ್ತಿಗೆ ಇದೆಲ್ಲಾ ರಹಸ್ಯವಾಗಿಯೇ ಉಳಿದಿದೆ. ಹೆತ್ತವರನ್ನು ತೊರೆದು ಗುರುಗಳೇ ತಮ್ಮ ಸರ್ವಸ್ವ ಎಂದು ಬದುಕುವ ತೃತೀಯ ಲಿಂಗಿಗಳು ಸತ್ತ ಬಳಿಕ ಮಧ್ಯರಾತ್ರಿಯೇ ಅವರ ಶವಯಾತ್ರೆ ನಡೆಯುತ್ತದೆ. ಸಾಮಾನ್ಯವಾಗಿ ಶವಗಳನ್ನು ಮಲಗಿಸಿ ಕೊಂಡೊಯ್ಯುವ ಸಂಪ್ರದಾಯವಾದರೆ, ತೃತೀಯ ಲಿಂಗಿಯ ಶವವನ್ನು ಅವರ ಸಹವರ್ತಿಗಳು ಜೊತೆಯಲ್ಲಿಯೇ ತೆಗೆದುಕೊಂಡು ಹೋಗಿ ಹೊಂಡದಲ್ಲಿ ಹೂತು ಬಿಡುತ್ತಾರೆ. ಆದರೆ, ಕರಾವಳಿಯಲ್ಲಿ ಇಂತಹ ಘಟನೆಗಳು ಈವರೆಗೆ ನಡೆದಿಲ್ಲ. ಯಾಕೆಂದರೆ ಸಾಮಾನ್ಯವಾಗಿ ಇವರು ಸತ್ತರೆ ಅವರ ಮನೆಯವರಿಗೆ ವಿಷಯ ತಿಳಿಸಲಾಗುತ್ತದೆ. ಅವರೇ ಬಂದು ಅವರ ಸಂಪ್ರದಾಯದ ಪ್ರಕಾರ ಅಂತ್ಯಕ್ರಿಯೆ ನಡೆಸುತ್ತಾರೆ.

**ಆರಾಧನೆ: ಹೆಣ್ಣು ದೈವಗಳ ಆರಾಧಕರು**

ಸಾಮಾನ್ಯವಾಗಿ ಕರಾವಳಿ ಭಾಗದಲ್ಲಿ ನೆಲೆಸಿರುವ ತೃತೀಯ ಲಿಂಗಿಗಳು ಸ್ಥಳೀಯ ದೇವರು, ದೈವಾರಾಧನೆಗಳಲ್ಲಿ ತೊಡಗಿದ್ದಾರೆ. ಆದರೆ, ತಮ್ಮ ವಾಸಸ್ಥಾನಗಳಲ್ಲಿ ಮಾತ್ರ ಪೇತ್ರಾಜ್ ಮಾತೆಯ ಭಾವಚಿತ್ರ ಇರಲೇಬೇಕು. ಇವರು ಹೆಣ್ಣು ದೇವತೆಗಳ ಆರಾಧಕರು ಎಂಬುದನ್ನು ಮರೆಯುವ ಹಾಗಿಲ್ಲ. ಉತ್ತರ ಕರ್ನಾಟಕದಲ್ಲಿ ಸವದತ್ತಿ ಎಲ್ಲಮ್ಮ, ಗುಳಿಗವ್ವ (ಇದು ಅರ್ಧನಾರೀಶ್ವರ ಪರಿಕಲ್ಪನೆಯ ದೇವರು. ಈ ದೇವರಿಗೆ ಮೀಸೆಯೂ ಇದೆ) ಮುಂತಾದ ದೇವರನ್ನು ಆರಾಧಿಸಿದರೆ, ದಕ್ಷಿಣ ಕನ್ನಡ ಉಡುಪಿಯಲ್ಲಿ ಇಲ್ಲಿನ ಪ್ರಮುಖ ಸ್ತ್ರೀ ದೇವರಿಗೆ ಪೂಜೆ ಸಲ್ಲಿಸುತ್ತಾರೆ. ಮಂಗಳವಾರ ಹಾಗೂ ಶುಕ್ರವಾರ ಇವರೂ ದೇವಸ್ಥಾನಗಳಿಗೆ ಹೋಗಿ ಪೂಜೆ ಸಲ್ಲಿಸುವ ಪರಿಪಾಠವನ್ನು ಹೊಂದಿದ್ದಾರೆ.

ಮಂಗಳಮುಖಿಯರು ಎಲ್ಲಾ ದೇವಸ್ಥಾನಗಳಿಗೆ ಹೋಗಬೇಕು. ಆದರೆ, ಜೀವನದಲ್ಲೊಮ್ಮೆಯಾದರೂ ಪೇತ್ರಾಜ್ ಮಾತೆ (ಹುಂಜದ ಮೇಲೆ ಕೂತಿರುವ ದೇವಿ. ಇದು ಮಂಗಳಮುಖಿಯರ ದೇವಿಯೆಂದೇ ಪರಿಗಣಿಸಲಾಗಿದೆ)ಯ ದರ್ಶನ ಪಡೆಯಲೇಬೇಕು. ಆ ದೇವಿಗೆ ಮುತ್ತೈದೆಯರ ಆಭರಣಗಳಾದ ಕಿವಿಯೋಲೆ, ಮೂಗುತಿ, ಬಳೆ, ಕಾಲುಂಗುರ, ಅರಶಿನ ಕುಂಕುಮ ಇದೇ ಮೊದಲಾದ ವಸ್ತುಗಳನ್ನು ಹರಕೆಯ ರೂಪದಲ್ಲಿ ನೀಡುವ ಮಹದಾಸೆಯನ್ನು ಬಹುತೇಕ ಮಂಗಳಮುಖಿಯರು ವ್ಯಕ್ತಪಡಿಸಿದ್ದಾರೆ. ಇಲ್ಲಿ ಮಂಗಳಮುಖಿಯರೇ ಪೂಜೆ ಸಲ್ಲಿಸುತ್ತಾರೆ. ಗುಜರಾತ್‌ನಲ್ಲಿರುವ ಈ ದೇವಸ್ಥಾನಕ್ಕೆ ಭೇಟಿ ನೀಡಿದರೆ ನಮಗೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇದೆ. ಇದಲ್ಲದೆ, ಮಂಗಳಮುಖಿಯರಿಗೆಂದೇ ಕೆಲವು ದೇವಸ್ಥಾನಗಳಿವೆ. ಕೊಲ್ಲಾಪುರದಲ್ಲಿರುವ ದೇವಸ್ಥಾನದಲ್ಲಿ ರಾಜರ ಕಾಲದಿಂದಲೂ ಮಂಗಳಮುಖಿಯರೇ ಪೂಜೆ ಸಲ್ಲಿಸುತ್ತಿದ್ದರು. ಈಗಲೂ ಈ ಪದ್ಧತಿ ಮುಂದುವರಿದಿದೆ. ಸವದತ್ತಿಯಲ್ಲಿರುವ ಜೋಗತಿಯರ ದೇವಸ್ಥಾನ, ಕೊಪ್ಪಳ ದಲ್ಲಿರುವ ಹುಲಿಗೆಮ್ಮ, ತಮಿಳುನಾಡಿನ ವೆಳ್ಳಿಪುರಂ ದೇವಸ್ಥಾನಗಳಲ್ಲಿ ಮಂಗಳಮುಖಿಯರೇ ಪೂಜೆ ಸಲ್ಲಿಸುತ್ತಾರೆ. ಸವದತ್ತಿಯಲ್ಲಿರುವ ದೇವಸ್ಥಾನದ ವಿಶೇಷ ವೆಂದರೆ ಕೆಳಜಾತಿಗಳಲ್ಲಿ ಆಚರಿಸುವ ಸಂಪ್ರದಾಯದ ಪ್ರಕಾರ ಹಲವು ವರ್ಷಗಳ ನಂತರ ಸಂತಾನಭಾಗ್ಯ ಪಡೆದರೆ, ಹರಕೆಯ ರೂಪದಲ್ಲಿ ಮಕ್ಕಳನ್ನು (ಆ ಮಗು ಗಂಡಾಗಲಿ, ಹೆಣ್ಣಾಗಲಿ) ದೇವರಿಗೆ ಬಿಡುತ್ತಾರೆ. ಅಲ್ಲಿ ಯಾವುದಾದರೂ ಗಂಡಿನ ಜೊತೆಗೆ ಅದ್ದೂರಿಯಾಗಿಯೇ ಮದುವೆ ಮಾಡುತ್ತಾರೆ. ಆದರೆ ಈ ಸಮಾರಂಭ ಒಂದೇ ರಾತ್ರಿಗೆ ಕೊನೆಗೊಳ್ಳುತ್ತದೆ. ಮದುಮಗ ಬಿಟ್ಟುಹೋಗುತ್ತಾನೆ.

### ಕಾಡುಪಾಲು

ಮದುವೆಗೆ ಮುನ್ನ ಹೆಣ್ಣು
ಋತು'ಮತಿ'ಯಾದರೆ,
ಕಣ್ಣು ಕಟ್ಟಿ ಕಾಡಿಗೆ
ಬಿಡುತ್ತಿದ್ದರಂತೆ, ಹಿಂದೆ!
(ಎಂಥ ನೈಚ್ಯ, ತಂದೆ!)
ಇಂದಿಲ್ಲ ಆ ಪದ್ಧತಿ;
ಆದರೆ 'ಮತಿ'ಯ ಕಣ್ಣುಕಟ್ಟಿ,
ಕಾಡಿಗಟ್ಟಿದ್ದೇವಲ್ಲ!

ಸಿ.ಪಿ.ಕೆ.
ಮೈಸೂರು

ಮರುದಿನ ವಿಧವೆಯಾಗುತ್ತಾಳೆ. ಸುಮಾರು ಎರಡು ತಿಂಗಳವರೆಗೆ ಹೀಗೆಯೇ ಇರುತ್ತಾರೆ. ನಂತರ ತಮ್ಮಂಥವರು ಕೊಡುವ ಸೀರೆ, ಮುತ್ತೈದೆಯರ ಸಾಂಕೇತಿಕ ವಸ್ತುಗಳನ್ನು ನೀಡಿದ ಮೇಲೆ ಅವರು ಸುಮಂಗಲಿಯರಾಗಿರುತ್ತಾರೆ. ಪುರಾಣಗಳಲ್ಲಿ ಬರುವ ಜಮದಗ್ನಿ ಋಷಿಯ ಪತ್ನಿ ರೇಣುಕಾದೇವಿ ತನ್ನ ಗಂಡನನ್ನು ತೊರೆಯುವ ಸಂದರ್ಭದ ಕಥೆಯನ್ನು ನೆನಪಿಸುವ ಸನ್ನಿವೇಶವಿದು. ರಂಡೆ ಹುಣ್ಣಿಮೆಗೆ ರಂಡೆಯರಾಗುತ್ತಾರೆ. ಭಾರತ ಹುಣ್ಣಿಮೆಗೆ ಭಾಗ್ಯವಂತರಾಗುತ್ತಾರೆ. ಮುತ್ತೈದೆ ಹುಣ್ಣಿಮೆಗೆ ಮುತ್ತೈದೆಯರಾಗುತ್ತಾರೆ. ಅವರನ್ನು ಜೋಗಪ್ಪ, ಜೋಗತಿಯರು ಎಂದು ಕರೆಯುತ್ತಾರೆ ಎಂದು ಮಂಗಳೂರು, ಉಡುಪಿಯಲ್ಲಿ ಅನೇಕ ಶಿಷ್ಯವರ್ಗವನ್ನು ಹೊಂದಿದ್ದ ರಾಣಿ ತಾನು ಸಾಯುವ ಐದು ತಿಂಗಳ ಮೊದಲು ನೀಡಿದ ಸಂದರ್ಶನದ ಮಾಹಿತಿಯನ್ನು ಉಲ್ಲೇಖಿಸುತ್ತಿದ್ದೇನೆ.

ಹೆಣ್ಣು ದೇವರನ್ನು ಆರಾಧಿಸುವ ತೃತೀಯ ಲಿಂಗಿಗಳು ಪೇತ್ರಾಜ್ ಮಾತೆಯ ವಾಹನವಾದ ಹುಂಜಕ್ಕೂ ಅತೀವ ಗೌರವ ನೀಡುತ್ತಾರೆ. ಜೊತೆಗೆ ಹುಲಿ, ಜಿಂಕೆ, ನವಿಲು, ಬಸವ (ದನ) ಮುಂತಾದ ಪ್ರಾಣಿಗಳಿಗೂ ಇದೇ ಗೌರವ ಸಲ್ಲುತ್ತದೆ. ಅವುಗಳನ್ನೂ ದೇವರ ಸ್ಥಾನದಲ್ಲಿಟ್ಟು ಪೂಜೆ ಮಾಡುತ್ತಾರೆ.

**ತೃತೀಯ ಲಿಂಗಿಗಳ ವಿಶಿಷ್ಟ ಭಾಷೆ, ಸಂಕೇತಗಳು**

ತೃತೀಯ ಲಿಂಗಿಗಳು ತಮ್ಮ ಮಾತೃಭಾಷೆಯನ್ನು ಹೊರತುಪಡಿಸಿ ತಮ್ಮದೇ ಆದ ಭಾಷೆ, ಪದ ಸಂಕೇತಗಳನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ಭಾರತದಲ್ಲಿ ರೂಪಾಯಿ, ನಾಣ್ಯಗಳ ಲೆಕ್ಕವನ್ನು ಪೈಸೆಗಳಲ್ಲಿ ಅಳೆದರೆ, ತೃತೀಯ ಲಿಂಗಿಗಳು ಇದಕ್ಕೆ ಪರ್ಯಾಯ ಪದಗಳನ್ನು ಕಂಡುಹಿಡಿದಿದ್ದಾರೆ. ಹಣಕ್ಕೆ ಇವರು ಟಪ್ಪರ್ ಎಂದರೆ, ಚಿಲ್ಲರೆ ಹಣಕ್ಕೆ ಬಿಜ್ಮ ಎನ್ನುತ್ತಾರೆ. ೧೦ ರೂ.ಗೆ ದಸ್ ಪಾನ್‌ಕೆ, ೨೦ ರೂ.ಗೆ ಬೀಸ್ ಪಾನ್‌ಕೆ, ೧೦೦ ರೂ.ಗೆ ಡಿಗ್ರಿ, ೫೦೦ ರೂ.ಗೆ ಪಾಂಚ್ ಡಿಗ್ರಿ, ೧೦೦೦ ರೂ.ಗೆ ಏಕ್ ಬಡ್ಮ ಎನ್ನುತ್ತಾರೆ.

ಆಡು ಭಾಷೆಯ ಮಧ್ಯೆ ತಮ್ಮದೇ ಪದಗಳನ್ನು ಸೇರಿಸುವ ಮೂಲಕ ಉಳಿದವರಿಗಿಂತ ಭಿನ್ನವಾಗಿ ಸಂಭಾಷಣೆ ಮಾಡುವ ಕಲೆ ತೃತೀಯ ಲಿಂಗಿಗಳಿಗೆ ಕರತಲಾಮಲಕವಾಗಿದೆ. ಅನೇಕ ಸಂದರ್ಭಗಳಲ್ಲಿ ತಮ್ಮ ಸಂಭಾಷಣೆ ಉಳಿದವರಿಗೆ ಅರ್ಥವಾಗಬಾರದು ಎಂಬ ಕಾರಣಕ್ಕೇ ಇರುತ್ತದೆ. ಉಳಿದವರಿಗೆ ಅರ್ಥವಾದರೆ ಅವರಿಗೇ ಅಪಾಯ. ಹಾಗಾಗಿ ಇಲ್ಲಿ ಎಲ್ಲವನ್ನೂ ಉಲ್ಲೇಖಿಸುವುದು ಅವರ ಸುರಕ್ಷತೆಯ ದೃಷ್ಟಿಯಿಂದ ಸರಿಯಲ್ಲ ಎಂಬ ಕಾರಣಕ್ಕೆ ಕೆಲವೊಂದು ಪದಗಳನ್ನಷ್ಟೇ ನೀಡಲಾಗಿದೆ.

ಪಾಮ್ ಪಡುತಿ ಅಂದರೆ ಗುರುಗಳಿಗೆ ನಮಸ್ಕರಿಸುವುದು, 'ನಿಮ್ಮ ಕಾಲಿಗೆ ಬಿದ್ದೆ' ಎಂಬುದನ್ನು ಇದು ಧ್ವನಿಸುತ್ತದೆ. ಜಮಾತ್ ಎಂದರೆ ಸಭೆ, ತೃತೀಯ ಲಿಂಗಿಗಳ ಸಮುದಾಯಕ್ಕೆ ಸೇರ್ಪಡೆಯಾಗುವ ಸಂದರ್ಭ ಗುರುವನ್ನು ಆಯ್ಕೆ ಮಾಡುವುದು ಇಲ್ಲಿನ ಸಂಪ್ರದಾಯ. ಜಮಾತ್ ಬಳಿಕ ಗುರು ಯಾರೆಂಬುದು ನಿರ್ಧಾರವಾಗುತ್ತದೆ. ಆಗ ಗುರುವಿಗೆ ೫ ರೂ. ನೀಡಿ ಸದಸ್ಯತ್ವ ಪಡೆದುಕೊಳ್ಳಬೇಕು. ಇದಕ್ಕೆ ರೀತ್ ಹಾಕುವುದು ಎನ್ನುತ್ತಾರೆ. ಸೀರೆ ಅಥವಾ ಹೆಣ್ಮಕ್ಕಳ ಉಡುಪಿಗೆ ಸಾಟ್ಲ ಎಂದು ಕರೆದರೆ, ಗಂಡಸರ ಉಡುಪಿಗೆ ಪಂತಿ ಸಾಟ್ಲ ಎನ್ನುತ್ತಾರೆ. ಕೂದಲಿಗೆ ಜೋಗ್, ಸ್ತನಗಳಿಗೆ ದಾವಣಿ, ಶಿಶ್ನ-ಲೀಕಂ, ಯೋನಿ- ಚಪ್‌ಡಿ, ಗುದದ್ವಾರ-ವಾಟ್ಲ, ಸಿಸನಾಟ್ ಎಂದರೆ ಅಪಾಯ ಅಥವಾ ಒಳ್ಳೆಯದಲ್ಲ ಎಂದು ಸೂಚಿಸುವ ಪದ. ಅಲಗ್ನ ಎಂದರೆ ಪರಾರಿಯಾಗು ಅಥವಾ ಕಳಚು ಹೀಗೆ ನೂರಾರು ಪದಗಳು ಅವರ ಆಡುಭಾಷೆಯಲ್ಲಿ ಬಂದು ಹೋಗುತ್ತವೆ. ಜನಸಾಮಾನ್ಯರಿಗೆ ಈ ಭಾಷೆಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾದರೂ ಭಾಷಾ ಸಂಸ್ಕೃತಿಗೆ ತೃತೀಯ ಲಿಂಗಿಗಳ ಭಾಷಾ ಸಂಕೇತಗಳು ಹೊಸ ಸೇರ್ಪಡೆ ಎಂದರೆ ತಪ್ಪಾಗಲಾರದು.

ಗುರು-ಶಿಷ್ಯ ಮಾತ್ರವಲ್ಲದೆ ತೃತೀಯ ಲಿಂಗಿಗಳ ಲೋಕದಲ್ಲಿ ವಿವಿಧ ಸಂಬಂಧಗಳಿವೆ. ಗುರುವಿನ ಮೂಲಕ ಆರಂಭವಾಗುವ ಸಂಬಂಧಗಳು ಮುಂದೆ ಅದೇ ಶಿಷ್ಯನಿಗೆ ಗುರುವಿನ ಗುರು ನಾನಿಯಾಗುತ್ತಾರೆ. ನಾನಿಯ ಗುರು ದಾದಿ, ದಾದಿಯ ಗುರು ಬಡಾ ದಾದಿ. ನಾಯಕ್ ಎಂದರೆ ಇವರೆಲ್ಲರಕ್ಕಿಂತಲೂ ಮಿಗಿಲಾದವರು ಎಂದರ್ಥ. ಆದರೆ, ಆಧುನಿಕ ಕಾಲದಲ್ಲಿ ಗುರುವನ್ನೇ ನಾಯಕ್ ಎಂದು ಕರೆಯುವವರೂ ಇದ್ದಾರೆ. ಇನ್ನು ಶಿಷ್ಯನನ್ನು ಚೇಲಾ ಎಂದು ಕರೆಯಲಾಗುತ್ತದೆ. ಚೇಲನ ಚೇಲ ನಾತಿ ಚೇಲ, ನಾತಿ ಚೇಲನ ಚೇಲ ಸಂಧಿ ಚೇಲ, ಸಂಧಿ ಚೇಲನ ಚೇಲ ಪಡ್‌ಸಂಧಿ, ಅಕ್ಕ ತಂಗಿ ಸಂಬಂಧಗಳಾದರೆ (ಅಂದರೆ ಒಂದೇ ಗುರುವಿನ ಇಬ್ಬರು ಚೇಲಾಗಳು) ಭಾಯ್ ಆಗುತ್ತಾರೆ. ಹೀಗೆ ಸಾಗುತ್ತದೆ ಅವರ ಸಂಬಂಧಗಳು. ವಿಶೇಷವೆಂದರೆ ಗುರು ಹಾಗೂ ಅವರಿಗಿಂತ ಹಿರಿಯರನ್ನು ಬಹುವಚನದಲ್ಲಿ ಕರೆಯುವ ತೃತೀಯ ಲಿಂಗಿಗಳು ತಮ್ಮತಮ್ಮೊಳಗೆ ಹೋಗೆ, ಬಾರೆ ಎಂದೇ ಸಂಭಾಷಿಸುತ್ತಾರೆ. ಯಾವುದೇ ಕಾರಣಕ್ಕೂ ಇವರು ಹೋಗೊ ಬಾರೊ ಅನ್ನುವುದಿಲ್ಲ. ಇದು ಅವರಲ್ಲಿ ಬೇರೂರಿರುವ ಸ್ತ್ರೀತ್ವದ ಭಾವವನ್ನು ಎತ್ತಿತೋರಿಸುತ್ತದೆ.

**ತೃತೀಯ ಲಿಂಗಿಗಳ ಮನೆ ಅಥವಾ ಪರಿವಾರಗಳು**

ಕರಾವಳಿಯಲ್ಲಿರುವ ತೃತೀಯ ಲಿಂಗಿಗಳ ಸಂದರ್ಶನದ ವೇಳೆ ಇಡೀ ಭಾರತದಲ್ಲಿ ತೃತೀಯ ಲಿಂಗಿಗಳ ಏಳು ಪರಿವಾರಗಳು ಅಥವಾ ಮನೆಗಳು ಇರುವುದನ್ನು ತಿಳಿಸಿದ್ದಾರೆ. ಪ್ರತಿಯೊಬ್ಬ ಚೇಲಾ, ಗುರು, ನಾನಿ, ದಾದಿ ಹೀಗೆ ಅವರ ಇಡೀ ಸಮುದಾಯವೇ ಒಂದೊಂದು ಮನೆಗೆ ಸೇರಲ್ಪಡುತ್ತಾರೆ. ಗುರು ಚೇಲ ಪದ್ಧತಿಯನ್ನು ಹೊರತುಪಡಿಸಿ ಆಯಾ ಪ್ರದೇಶ, ಆಯಾ ಪರಿವಾರಗಳಿಗೆ ಸಂಬಂಧಿಸಿದಂತೆ ಕೆಲವೊಂದು ಬದಲಾವಣೆಗಳನ್ನು ಮಾಡಲಾಗಿದೆಯಾದರೂ ಅಂತಹ ವ್ಯತ್ಯಾಸವಿಲ್ಲ. ಹಿಜಡಾ ಹಾಗೂ ಅವರ ಸಂಸ್ಕೃತಿಗಳ ಬಗ್ಗೆ ೧೯೯೯ರಲ್ಲಿ ಅಧ್ಯಯನ ಮಾಡಿದ ಸೆರನಾನಂದ ಹಿಜಡಾಗಳ ಗುರಮಾ ಮನೆಗಳ ಬಗ್ಗೆ ಪ್ರಸ್ತಾಪಿಸುತ್ತಾರೆ. ಹಿಜಡಾಗಳ ಇಡೀ ಜೀವನ ಗುರು ಅಥವಾ ಗುರುಮಾಗಳ ಆಶ್ರಯದಲ್ಲಿ, ಪೋಷಣೆಯಲ್ಲಿ, ಅವರ ನಿಯಂತ್ರಣದಲ್ಲಿ ಕಳೆದುಹೋಗುತ್ತದೆ. ಬೆಂಡಿಬಝಾರ್ ಮನೆ, ಪೂನಾ ಮನೆ, ಹೈದರಾಬಾದ್ ಮನೆ, ಡೋಂಗ್ರಿ ಮನೆ, ಲಾಲಾನ್ ಮನೆ, ಬಡಾ ಹವೇಲಿ, ಚೋಟಾ ಹವೇಲಿ ಹಾಗೂ ಚಕ್ಲಾ ಮನೆ. ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿರುವ ತೃತೀಯ ಲಿಂಗಿಗಳು ಚೋಟಾ ಹವೇಲಿ ಪರಿವಾರಕ್ಕೆ ಸೇರಿದವರು. ಬೇರೆ ಮನೆಗಳಿಂದ ಬಂದವರೊಡನೆ ಇನ್ನೊಂದು ಮನೆಯವರು ಇರಲು ಬಯಸುವುದಿಲ್ಲ. ಇಲ್ಲವಾದರೆ ಅವರೇ ಅಲ್ಲಿರುವ ಪರಿವಾರಕ್ಕೆ ಸೇರ್ಪಡೆಯಾಗಬೇಕು.

ತೃತೀಯ ಲಿಂಗಿಗಳ ಕುರಿತ ಅಧ್ಯಯನ ಯಾವುದೇ ಜನಾಂಗದ ಅಧ್ಯಯನಕ್ಕೆ ಕಮ್ಮಿಯೇನಿಲ್ಲ. ವಿವಿಧ ಧರ್ಮಗಳಲ್ಲಿರುವ ತೃತೀಯ ಲಿಂಗಿಗಳು ಒಂದೇ ಸಮುದಾಯದಡಿ ಸೇರಿ ತಮ್ಮದೇ ಆದ ಸಂಸ್ಕೃತಿ, ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ತಮ್ಮ ಅಸ್ಮಿತೆಯನ್ನು ಉಳಿಸಿಕೊಳ್ಳಲು ಅವರು ತುಳಿದ ಹೋರಾಟದ ಹಾದಿಗಳು ಇತಿಹಾಸದಲ್ಲಿ ಗುರುತರವಾದುದು. ಆಧುನಿಕ ಯುಗದ ಅಸಮಾನತೆ, ಲಿಂಗತಾರತಮ್ಯದಂತಹ ಸಮಸ್ಯೆಗಳಿಗೆ ಇವರೂ ಬಲಿಯಾಗಿದ್ದಾರೆ. ಜನಾಂಗೀಯ ದ್ವೇಷಗಳು, ತಾರತಮ್ಯಗಳು ಇತಿಹಾಸದಲ್ಲಿ ಹೇಗೆ ಬೇರೂರಿವೆಯೋ ತೃತೀಯ ಲಿಂಗಿಗಳ ಕುರಿತು ಇದೇ ತೆರನಾದ ಪೂರ್ವಾಗ್ರಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿವೆ. ಸಮಾಜಶಾಸ್ತ್ರಜ್ಞರ ಪ್ರಕಾರ ಅಧಿಕಾರ ರಹಿತ ಸಮುದಾಯದ ಮೇಲೆ ಅಧಿಕಾರಿಶಾಹಿಗಳ ದಬ್ಬಾಳಿಕೆ ಹೇಗೆ ನಡೆದಿದೆಯೋ ಭಾರತದಂತಹ ರಾಷ್ಟ್ರಗಳಲ್ಲಿ ಅಧಿಕಾರವಿರದ, ಅಭಿವ್ಯಕ್ತಿಯ ಸ್ವಾತಂತ್ರ್ಯವನ್ನು ಕಳೆದುಕೊಂಡಿರುವ ತೃತೀಯ ಲಿಂಗಿಗಳೂ ಟಾರ್ಗೆಟ್ ಆಗುತ್ತಿರುವುದೂ ಅಷ್ಟೇ ಸತ್ಯ.

**ರೇಶ್ಮಾ ಜಿ. ಉಳ್ಳಾಲ್**
'ಅಗ್ರಜ ದಿವಾಂತ', ನಂ. ૩-೦೬, ಉರ್ವ ಮಾರುಕಟ್ಟೆ ಹಿಂಭಾಗ, ಮಂಗಳೂರು ೫೭೫೦೦೬

### ಬೇರುಗಳು

ಬಿಳಲುಗಳು
ಆಸರೆ ಪಡೆದವು
ಆಲದ ಮರದಿಂದ
ಭೂಮಿಯಲ್ಲಿ !
ಆಸರೆ ತಪ್ಪಿದ
ಬಾಂಧವ್ಯದ
ಬೇರುಗಳು
ವೃದ್ಧಾಶ್ರಮಗಳಲ್ಲಿ !

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪



## ಕಿಮ್ – ಟ್ರಂಪ್ ಶೃಂಗಸಭೆ – ಒಂದು – ಅಪೂರ್ವ ಸಮಾಗಮ

ನಿಗದಿಯಾಗಿದ್ದಂತೆ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಮತ್ತು ಉತ್ತರ ಕೊರಿಯದ ಅಧಿಪತಿ ಕಿಮ್ ಜಾಂಗ್–ಉನ್ ಸಿಂಗಪೂರ್‌ನಲ್ಲಿ ನಡೆಸಿದ ಮಾತುಕತೆಗಳು, ತೋರಿದ ಆತ್ಮೀಯತೆ ಎಲ್ಲ ಬಗೆಯಲ್ಲೂ ಐತಿಹಾಸಿಕ. ಜೂನ್ ೧೨ರಂದು ಇಬ್ಬರು ನಾಯಕರೂ ಒಪ್ಪಂದಕ್ಕೆ ಬಂದದ್ದು, ಹಳೆಯ ದ್ವೇಷವನ್ನೆಲ್ಲ ಮರೆತು ಹೊಸ ಅಧ್ಯಾಯಕ್ಕೆ ನಾಂದಿ ಹಾಕಿದ್ದು ಸ್ವಾಗತಾರ್ಹ. ಇದು ಉತ್ತರ ಕೊರಿಯದ ಏಕಾಂಗಿತನವನ್ನು ದೂರಮಾಡಿ ಜಗತ್ತಿನ ಇತರ ದೇಶಗಳ ಮಧ್ಯೆ ಸಹ ಜೀವನಕ್ಕೆ ದಾರಿ ಮಾಡಿಕೊಡುತ್ತದೆ. ಎರಡೂ ದೇಶಗಳು ಕೆಲ ತಿಂಗಳ ಹಿಂದೆ ಪರಸ್ಪರ ಬೆದರಿಕೆ ಹಾಕುವುದರಲ್ಲಿ, ನಿಂದಿಸುವುದರಲ್ಲಿ ನಿರತವಾಗಿದ್ದು ಇನ್ನೇನು ನ್ಯೂಕ್ಲಿಯರ್ ಸಮರ ಪ್ರಾರಂಭವಾದೀತೇನೋ ಎಂಬ ಸ್ಥಿತಿ ಇತ್ತು. ಸಿಂಗಪೂರ್‌ನಲ್ಲಿ ಶೃಂಗಸಭೆಯ ಯಶಸ್ಸು, ಶಾಂತಿ ಮಂತ್ರ ಜಪಿಸಿದ್ದು ನಿಜಕ್ಕೂ ಅಪೂರ್ವವಾದ ಸಂಗತಿ.

ಉತ್ತರ ಕೊರಿಯದಲ್ಲಿ ಆಡಳಿತ ನಡೆಸುತ್ತಿರುವ ಕಿಮ್ ಜಾಂಗ್–ಉನ್ ಮೂರನೇ ಸಂತತಿಯ ಯುವ ನಾಯಕ. ಅತಿಯಾದ ಮಿಲಿಟರೀಕರಣ (೧.೨ ಮಿಲಿಯ ಸೈನ್ಯದ ಪ್ರಾಬಲ್ಯ ಹೊಂದಿದೆ). ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಂಥ ದುಬಾರಿ ಸಾಹಸ, ಏಳು ದಶಕಗಳಿಂದ ಅನುಭವಿಸುತ್ತಿರುವ ಆರ್ಥಿಕ ದಿಗ್ಬಂಧನ ಜನಸಾಮಾನ್ಯರ ಜೀವನವನ್ನು ದುಸ್ತರಗೊಳಿಸಿರುವುದು ನಿಜ. ಅಮೆರಿಕದ ಸೈನ್ಯಬಲ ಇದಕ್ಕೆ ಹೋಲಿಸಿದರೆ ೧.೩ ಮಿಲಿಯ, ಆರ್ಥಿಕ ಪ್ರಾಬಲ್ಯ ೧೮ ಟ್ರಿಲಿಯನ್ ಡಾಲರು. ಉತ್ತರ ಕೊರಿಯದ ವಹಿವಾಟು ೪೦ ಬಿಲಿಯನ್ ಡಾಲರುಗಳು. ಹಾಗಾಗಿ, ತನ್ನ ಪುಟ್ಟ ದೇಶದ ಜನಜೀವನವನ್ನು ಉತ್ತಮಗೊಳಿಸಲು ಮಾರ್ಗವನ್ನು ಕಿಮ್ ಅನುಸರಿಸುತ್ತಿರುವುದು ಸಮಂಜಸ. ಇದು ಪ್ರಾರಂಭವಾದ್ದು, ಕೆಲವು ತಿಂಗಳುಗಳ ಹಿಂದೆ, ನೆರೆಯ ದಕ್ಷಿಣ ಕೊರಿಯದ ಜೊತೆ ಸಂಬಂಧಗಳನ್ನು ಉತ್ತಮಗೊಳಿಸುವ ಕ್ರಮದೊಂದಿಗೆ. ಸಂದರ್ಭ ಚಳಿಗಾಲದ ಒಲಂಪಿಕ್ಸ್ ಪಂದ್ಯ ದಕ್ಷಿಣ ಕೊರಿಯದಲ್ಲಿ. ಎರಡೂ ಕೊರಿಯಗಳು ಕೈ ಜೋಡಿಸಿದುವಷ್ಟೇ ಅಲ್ಲ, ರಾಜಕೀಯ ಸಂಬಂಧಗಳೂ ಬೆಳೆದುವು. ಎರಡೂ ದೇಶಗಳ ನಾಯಕರುಗಳ ಶೃಂಗ ಸಭೆಯೂ ಜರುಗಿತು ಈಚೆಗೆ. ಮತ್ತೆ ದಕ್ಷಿಣ ಕೊರಿಯ ಅಮೆರಿಕದೊಂದಿಗೆ ಶೃಂಗ ಸಮಾವೇಶದಲ್ಲಿ ಪ್ರಮುಖ ಪಾತ್ರವಹಿಸಿದ್ದು ನೆನಪಿಸಿಕೊಳ್ಳಬೇಕಾದ ಸಂಗತಿ.

ಉತ್ತರ–ದಕ್ಷಿಣ ಕೊರಿಯಗಳು ಶೀತಯುದ್ಧದ ಬಲಿಪಶುಗಳು. ಅಮೆರಿಕದ ೨೮,೫೦೦ ಮಂದಿ ಸೈನಿಕರನ್ನು ಸಾಕುತ್ತಿರುವ ದಕ್ಷಿಣ ಕೊರಿಯ ಆರ್ಥಿಕವಾಗಿ ಮುಂದುವರಿದಿದೆ ಅಮೆರಿಕದ ಬಂಡವಾಳದ ಹರಿವಿನಿಂದ. ಎರಡೂ ಕೊರಿಯ ದೇಶಗಳ ಮಧ್ಯೆ ಯುದ್ಧವೂ ನಡೆದಿತ್ತು ಐವತ್ತರ ದಶಕದ ಪ್ರಾರಂಭದಲ್ಲಿ. ಎರಡನೇ ಮಹಾಯುದ್ಧ ಕಾಲದಲ್ಲಿ ಉತ್ತರ ಕೊರಿಯ ಸೋವಿಯತ್ ಒಕ್ಕೂಟದ ವಶವಾದರೆ, ದಕ್ಷಿಣ ಕೊರಿಯ ಅಮೆರಿಕದ ತೆಕ್ಕೆಗೆ ಬಂದಿತು. ಅಂದಿನಿಂದ ಎರಡೂ ಕೊರಿಯಗಳು ಮುಖಾಮುಖಿಯಾಗಿಯೇ ಇವೆ. ೨೦೧೮ ಈ ಕೊರಿಯ ಪರ್ಯಾಯ ದ್ವೀಪ ನವೋದಯಕ್ಕೆ ಮಾರ್ಗವಾದೀತು.

ಅಮೆರಿಕ ಮತ್ತು ಉತ್ತರ ಕೊರಿಯಗಳ ಮಧ್ಯೆ ರಾಯಭಾರಿ ಸಂಬಂಧಗಳ ಸ್ಥಾಪನೆ ಮತ್ತು ಉತ್ತರ ಕೊರಿಯಾದ ನ್ಯೂಕ್ಲಿಯರ್ ಅಸ್ತ್ರ ರಾಹಿತ್ಯ ಆಶ್ವಾಸನೆ ಶೃಂಗಸಭೆಯ ಫಲಶೃತಿಗಳಲ್ಲಿ ಬಹುಮುಖ್ಯವಾದ್ದು. ಇದುವರೆಗೆ ಉತ್ತರ ಕೊರಿಯದ ಎಲ್ಲ ವಾಣಿಜ್ಯ ಸಂಬಂಧಗಳೂ ಚೀಣ ಮತ್ತು ರಷ್ಯಾಗಳ ಜೊತೆ ಮಾತ್ರವಾಗಿತ್ತು. ಮುಂದಿನ ದಿನಗಳಲ್ಲಿ ಅದು ಜಾಗತಿಕ ಸಮೂಹದೊಂದಿಗೆ ಹೆಜ್ಜೆ ಇರಿಸಲು ಅಮೆರಿಕದೊಂದಿಗೆ ಒಪ್ಪಂದ ಅನುವಾಗಲಿದೆ. ಉತ್ತರ ಕೊರಿಯದ ಆರ್ಥಿಕ ಬೆಳವಣಿಗೆಗೆ ಸಹಾಯಕವಾಗಲಿದೆ. ದಕ್ಷಿಣ ಕೊರಿಯದೊಂದಿಗೆ ಅಮೆರಿಕ ನಡೆಸುತ್ತಿದ್ದ ಸಮರಾಭ್ಯಾಸವನ್ನು ಡೊನಾಲ್ಡ್ ಟ್ರಂಪ್ ಮಧ್ಯದಲ್ಲೇ ನಿಲ್ಲಿಸಲು ಆದೇಶಿಸಿದ್ದು ಶುಭ ಸೂಚನೆ. ಅಮೆರಿಕ ಹಿಂದೆ ಮಾಡಿಕೊಂಡಿದ್ದ ಒಪ್ಪಂದಗಳನ್ನು ಮುರಿಯುವುದರಲ್ಲಿ ನಿರತವಾಗಿರುವ ಟ್ರಂಪ್ ಕೊರಿಯ ವಿಷಯದಲ್ಲಿ ಸಂಯಮದಿಂದ ನಡೆದುಕೊಳ್ಳುವರೆಂದು ಆಶಿಸೋಣ. ಹೆಚ್ಚು ಜವಾಬ್ದಾರಿಯುತವಾಗಿ ವರ್ತಿಸುವರೆಂದು ಭಾವಿಸೋಣ. ಉತ್ತರ ಕೊರಿಯ ಕೂಡ ನ್ಯೂಕ್ಲಿಯರ್ ಅಸ್ತ್ರಗಳ ವಿಸರ್ಜನೆಯ ಕಾರ್ಯಕ್ರಮವನ್ನು ಯಥಾವತ್ತಾಗಿ ಜರುಗಿಸಬೇಕಾದ ಅನಿವಾರ್ಯತೆ ಇದೆ.

* * *

## ಇಸ್ರೇಲಿನಿಂದ ಪ್ಯಾಲಸ್ತೀನಿಯನ್ನರ ಕಗ್ಗೊಲೆ

ಏಳು ದಶಕಗಳಿಂದ ವ್ಯವಸ್ಥಿತವಾಗಿ ಇಸ್ರೇಲ್ ಪ್ಯಾಲಸ್ತೀನ್ ಅರಬ್ಬರ ಹತ್ಯೆ ನಡೆಸುತ್ತ ಬಂದಿದೆ. ವಿಶ್ವಸಂಸ್ಥೆಯ ಆದೇಶಗಳನ್ನು ಉಲ್ಲಂಘಿಸಿ ಉದ್ಧಟತನ ತೋರುತ್ತಿದೆ. ಇಸ್ರೇಲ್ ಸ್ಥಾಪನೆಯಾದಾಗಲೇ ಪ್ಯಾಲಸ್ತೈನ್ ರಾಜ್ಯ ಕೂಡ ಸ್ಥಾಪನೆಯಾಗಿದ್ದರೆ ತಕರಾರೇ ಇರುತ್ತಿರಲಿಲ್ಲ. ಆದರೆ ಬ್ರಿಟನ್–ಅಮೆರಿಕಗಳ ಸಂಚು ಫಲಿಸಿದ್ದು ಮಧ್ಯ ಪ್ರಾಚ್ಯದಲ್ಲಿ ಅಶಾಂತಿಗೆ ಕಾರಣ. ಇಸ್ರೇಲ್ ಸಾಮ್ರಾಜ್ಯಶಾಹಿಗಳ ಕೈಗೂಸಾಗಿದೆ ಮತ್ತು ತನ್ನ ವಿಸ್ತರಣಾ ನೀತಿಯಿಂದ ಕ್ರಮಬದ್ಧವಾದ ರೀತಿಯಲ್ಲಿ ಪ್ಯಾಲಸ್ತೀನಿಯನ್ ಅರಬ್ಬರ ಶೋಷಣೆಯಲ್ಲಿ ನಿರತವಾಗಿದೆ. ಅದು ಪಶ್ಚಿಮ ಏಶಿಯದ ಭೂಭಾಗದಲ್ಲಿ ಸಾಮ್ರಾಜ್ಯಶಾಹಿಗಳ ಕುತಂತ್ರಗಳಿಗೆ, ತೈಲರಾಷ್ಟ್ರಗಳ ಮೇಲೆ ಒತ್ತಡ ಹೇರುವುದಕ್ಕೆ ಹಾರುಮಣೆಯಾಗಿದೆ.

ಪ್ರತಿ ವರ್ಷ ಮಾರ್ಚ್ ೩೦ರಂದು ಪ್ಯಾಲಸ್ತೀನಿಯನ್ನರು "ಭೂಮಿ ದಿನ" ಆಚರಿಸುತ್ತಾರೆ. ೪೨ ವರ್ಷಗಳ ಹಿಂದೆ ತಮ್ಮ ವಾಸಸ್ಥಳವನ್ನು ಅತಿಕ್ರಮಿಸಿದ ಇಸ್ರೇಲಿನ ವಿರುದ್ಧ ಪ್ಯಾಲಸ್ತೀನಿಯನ್ನರು ಪ್ರತಿಭಟನೆ ನಡೆಸುತ್ತಿದ್ದರು. ಆಗ ಇಸ್ರೇಲಿ ಪಡೆಗಳು ಗೋಲಿಬಾರು ಮಾಡಿ ಆರು ಮಂದಿಯನ್ನು ಹತ್ಯೆಗೈದಿತ್ತು. ಅದೇ ಬಗೆಯಲ್ಲಿ ಏಪ್ರಿಲ್ ೧೯೪೮ರಂದು ಇಸ್ರೇಲ್ ೧೦೦ ಮಂದಿ ಪ್ಯಾಲಸ್ತೀನಿಯನ್ನರನ್ನು ಕೊಂದುಹಾಕಿತ್ತು. ಆ ದಿನವನ್ನು 'ನಕ್ಮಾ' ಎಂದು ಆಚರಿಸುತ್ತ ಬಂದಿದ್ದಾರೆ. ಈ ವರ್ಷವೂ (೨೦೧೮) ಕೂಡ ಈ ದಿನದ ಆಚರಣೆಯ ಸಂದರ್ಭದಲ್ಲಿ ಶಾಂತಿಯುತ ಪ್ರತಿಭಟನಾಕಾರರ ಮೇಲೆ ಗುಂಡು ಹಾರಿಸಿ ೪೦ ಮಂದಿಯನ್ನು ಇಸ್ರೇಲ್ ಆಹುತಿ ತೆಗೆದುಕೊಂಡಿತು. ಇವೆಲ್ಲ ಘಟನೆಗಳೂ ಸಂಭವಿಸಿದ್ದು ಗಾಜಾಪಟ್ಟಿ ಎಂಬ ವಿವಾದಿತ ಪ್ರದೇಶದಲ್ಲಿ. ಜೆರೂಸಲೆಮ್ ಇರುವುದೂ ಕೂಡ ಈ ಪ್ರದೇಶದಲ್ಲೇ. ಈಚೆಗೆ ಈ ವಿವಾದಿತ ಪ್ರದೇಶದಲ್ಲಿ ಅಮೆರಿಕ ತನ್ನ ರಾಯಭಾರಿ ಕಚೇರಿಯನ್ನು ತೆರೆಯಲು ನಿರ್ಧರಿಸಿತು. ಜೆರೂಸಲೆಮ್ ಯೆಹೂದ್ಯರಿಗೂ, ಪ್ಯಾಲಸ್ತೈನ್ ಅರಬ್ಬರಿಗೂ ಪವಿತ್ರವಾದ ಯಾತ್ರಾ ಸ್ಥಳ. ವಿವಾದಿತ ಪ್ರದೇಶ ಎರಡೂ ಕಡೆಯವರು ಈ ಪ್ರದೇಶವನ್ನು ತಮ್ಮ ರಾಜಧಾನಿ ಎಂದು ಪರಿಗಣಿಸುತ್ತಾರೆ. ಟೆಲ್‌ಅವೀವ್ ಇಸ್ರೇಲಿನ ರಾಜಧಾನಿ. ಅಮೆರಿಕದ ರಾಯಭಾರಿ ಕಚೇರಿಯೂ ಕೂಡ ಇತರ ಎಲ್ಲ ದೇಶಗಳಂತೆಯೇ ಟೆಲ್‌ಅವೀವ್‌ನಲ್ಲೇ ಇತ್ತು.

ಏಕಾಏಕಿಯಾಗಿ ಜೆರೂಸಲೆಮ್‌ಗೆ ರಾಯಭಾರಿ ಕಚೇರಿಯನ್ನು ವರ್ಗಾಯಿಸಲು ಟ್ರಂಪ್ ನಿರ್ಧರಿಸಿದರು. ಇದು ಬೇಕೆಂತಲೇ ಪ್ರಚೋದನಕಾರಿ ನಿರ್ಧಾರ. ೨೦೧೮ರ ಮೇ ೧೫ರಂದು ಅಧಿಕೃತವಾಗಿ ಅಮೆರಿಕ ರಾಯಭಾರಿ ಕಚೇರಿಯನ್ನು ಜೆರೂಸಲೆಮ್‌ನಲ್ಲಿ ತೆರೆಯಿತು. ಅದರ ವಿರುದ್ಧ ಪ್ರತಿಭಟನೆಯಲ್ಲಿ ನಿರತರಾಗಿದ್ದ ಪ್ಯಾಲಸ್ತೀನಿಯನ್ನರ ಮೇಲೆ ಗುಂಡುಹಾರಿಸಿ ಹತ್ತಾರು ಮಂದಿಯನ್ನು ಕೊಲೆಗೈದಿತು. ವಿಶ್ವ ಸಂಸ್ಥೆಯ ಮಾನವ ಹಕ್ಕುಗಳ ಆಯೋಗ ಈ ಗೋಲಿಬಾರನ್ನು ತೀವ್ರವಾಗಿ ಖಂಡಿಸಿದೆ. ವಿಶ್ವಸಂಸ್ಥೆಯೂ ಕೂಡ ಆಕ್ಷೇಪಿಸಿದೆ. ಆದರೂ ಇಸ್ರೇಲ್ ತನ್ನ ವಿಸ್ತರಣಾ ನೀತಿಯನ್ನು ಮುಂದುವರಿಸುತ್ತಿದೆ. ಪ್ಯಾಲಸ್ತೀನಿಯನ್ನರ ಮೇಲೆ ದಬ್ಬಾಳಿಕೆ ನಡೆಸುತ್ತಿದೆ. ಪ್ಯಾಲಸ್ತೀನಿಯನ್ನರ ರಾಜ್ಯ ಸ್ಥಾಪನೆಯ ಕನಸು ಹಾಗೆಯೇ ಮುಂದುವರಿಯುತ್ತಿದೆ ಏಳು ದಶಕಗಳಿಂದ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಅಂಬೇಡ್ಕರ್ ಚಿಂತನೆಯ ಹಾದಿಯಲ್ಲಿ ಮಾನವೀಕರಣದ ಪ್ರತಿಮೆಗಳು



**ಅಂಬೇಡ್ಕರ್‌ರ ನಂತರ ದಲಿತ ಚಳವಳಿ ಅಂಬೇಡ್ಕರ್‌ರ ಸುತ್ತ ಕಟ್ಟಿಕೊಂಡಿರುವ ಪ್ರತಿಮೆಗಳು ಅಂಬೇಡ್ಕರ್‌ರನ್ನು ಸಂವಿಧಾನದ ಕರ್ತೃವೆಂದು ಪ್ರಸ್ತುತ ವ್ಯವಸ್ಥೆಗೆ ಕಾರಣೀಭೂತರೆಂದು ಒಬ್ಬ ಬೋಧಿಸತ್ವನೆಂದು, ಒಬ್ಬ ಸಂವಿಧಾನವಾದಿಯೆಂದು, ಒಬ್ಬ ಅವಧೂತನೆಂದು, ಒಬ್ಬ ರಕ್ಷಕನೆಂದು, ಒಬ್ಬ ಉದಾರವಾದಿ – ಪ್ರಜಾತಂತ್ರವಾದಿ ಎಂದು, ಒಬ್ಬ ದಲಿತರ ನಾಯಕನೆಂದು, ಒಬ್ಬ ಕಡು ಕಮ್ಯುನಿಸ್ಟ್ ವಿರೋಧಿ ಎಂದು ಸುಧಾರಣವಾದದಲ್ಲಿ ನಂಬಿಕೆ ಇಟ್ಟಿದ್ದ ಮತ್ತು ಕ್ರಾಂತಿಗಳ ವಿರೋಧಿ ಎಂದು, ಬಣ್ಣಿಸುತ್ತವೆ. ಈ ಬಗೆಯ ಅಂಬೇಡ್ಕರ್‌ರ ಚಿತ್ರಣವೇ ಇಂದು ದಲಿತ ಚಳವಳಿಯನ್ನು ಆವರಿಸಿಕೊಂಡಿವೆ. ಈ ಬಗೆಯ ಬಣ್ಣನೆಗಳು ಅಂಬೇಡ್ಕರ್ ಒಳಗಿದ್ದ ಯಾವುದೇ ಬಗೆಯ ಶೋಷಣೆ, ಅನ್ಯಾಯ, ಕಪಟಗಳಿಲ್ಲದ ಮಾನವ ಸಮಾಜದ ಕನಸುಗಾರನನ್ನು ಕಟ್ಟಿಕೊಡಲು ವಿಫಲವಾಗುತ್ತವೆ.**

---

**ರಾಜೀವ ನಾಯ್ಕ ಎಸ್.**

---

**ಭಾ**ರತೀಯರ ಮನೆ ಮನಗಳಲ್ಲಿ ಜೀವಂತವಾಗಿ ಉಳಿದಿರುವ ಹಾಗೂ ಎಂದೆಂದಿಗೂ ಉಳಿಯುವ ಆದರ್ಶಪ್ರಾಯವಾದ ವ್ಯಕ್ತಿಗಳೆಂದರೆ ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಮುಂತಾದ ಪ್ರಮುಖರು. ಬಹುಶಃ ಇಡೀ ಭಾರತದಲ್ಲಿ ಬೇರಾವುದೇ ವ್ಯಕ್ತಿಗಳ ಕುರಿತು ಇಷ್ಟು ಭಾವನಾತ್ಮಕ ಸಂಬಂಧವನ್ನು ಜನತೆ ಇಟ್ಟುಕೊಂಡಿಲ್ಲ. ಅಂಬೇಡ್ಕರ್ ನಿಧನರಾದ ನಂತರ ವರ್ಷಗಳು ಕಳೆದಂತೆ ಅವರು ಜನರಿಗೆ ಹತ್ತಿರವಾಗುವುದು ಹೆಚ್ಚುತ್ತಲೇ ಇದೆ ಹಾಗೂ ಅವರ ವಿಚಾರಧಾರೆಗಳಿಂದಾಗಿ ಸದಾ ಜೀವಂತವಾಗಿ ನಮ್ಮಗಳ ನಡುವೆಯೇ ಇದ್ದಾರೆ. ಕೆಳ ಸಮುದಾಯಗಳಲ್ಲಿ, ಅದರಲ್ಲೂ ಪರಿಶಿಷ್ಟ ಜಾತಿ ವರ್ಗಗಳಲ್ಲಿ ಅಂಬೇಡ್ಕರ್ ಪ್ರಭಾವ ಗಾಢವಾಗುತ್ತಲೇ ಇದೆ. ಆದರೆ ಶ್ರೇಷ್ಠ ಮಾನವತಾವಾದಿಯಾದ ಅಂಬೇಡ್ಕರ್ ಕೆಲವೇ ಕೆಲವು ಸಮುದಾಯಕ್ಕೆ ಮಾತ್ರವಲ್ಲ ಎಂಬ ಮಾತು ಸತ್ಯ.

ಒಂದು ರೀತಿಯಿಂದ ನೋಡಿದರೆ ಅಂಬೇಡ್ಕರ್ ಅವರ ಇಂತಹ ಪ್ರಭಾವದಿಂದ ದಲಿತ ಜನ ಸಮುದಾಯದಲ್ಲಿ ಜಾಗೃತಿ ಮೂಡುತ್ತಿದ್ದರೂ ಅದಕ್ಕೆ ಸರಿಸಮನಾಗಿ ದಲಿತರ ಮೇಲಿನ ದೌರ್ಜನ್ಯಗಳು ಹೆಚ್ಚುತ್ತಲೇ ಇವೆ. ದಲಿತರಿಗೆ ರಾಜಕೀಯ, ಶೈಕ್ಷಣಿಕ ಹಾಗೂ ಉದ್ಯೋಗಗಳಲ್ಲಿ ಪ್ರಾತಿನಿಧ್ಯ ಸಿಕ್ಕಿ ದೇಶದ ಮಧ್ಯಮ ವರ್ಗದವರೊಂದಿಗೆ ಅವರು ಗುರುತಿಸಿಕೊಳ್ಳುವುದಕ್ಕೆ ಆರಂಭಿಸಿದಾಗಿನಿಂದ ದಲಿತರ ಮೇಲಿನ ಸಾಂಪ್ರದಾಯಿಕ ದೌರ್ಜನ್ಯಗಳೊಂದಿಗೆ ಹೊಸ ಬಗೆಯ ಅಸಹನೆ ಕೂಡ ಹೆಚ್ಚಾಗತೊಡಗಿದೆ. ಇಂತಹ ಸಂದರ್ಭದಲ್ಲಿ ದಲಿತ ಸಮುದಾಯಗಳಲ್ಲಿ ಐಕ್ಯತೆಯ

ಸೈದ್ಧಾಂತಿಕ ಜಾಗೃತಿಗಳು ಮತ್ತಷ್ಟು ಸದೃಢವಾಗಬೇಕಾಗಿತ್ತು. ಆದರೆ ಇಡೀ ದಲಿತ ಸಮುದಾಯಗಳು ವಿಘಟನೆಯತ್ತ ಮುಖ ಮಾಡಿವೆಯೇ ಹೊರತು ಐಕ್ಯ ಹೋರಾಟ ಕಟ್ಟುವತ್ತ ಮನಸ್ಸು ಮಾಡುತ್ತಿಲ್ಲ. ಇದು ಒಂದು ರೀತಿಯ ವಿಚಿತ್ರ ನಡವಳಿಕೆಯಾದರೂ ಜಾಗತೀಕರಣದ ಕ್ಷಣಿಕ ಲಾಭದ ಲಾಲಸೆಗೆ ಜನಸಮುದಾಯವೆಲ್ಲಾ ಒಳಗಾಗಿರುವಾಗ ತಾವೇಕೆ ಅದರಿಂದ ಹೊರಗಿರಬೇಕೆಂದು ಒಳ ಆಸೆ ದಲಿತ ಸಮುದಾಯಗಳ ಇಂತಹ ವರ್ತನೆಗೆ ಕಾರಣವಿರಬಹುದೇ? ಎಲ್ಲವನ್ನೂ ಸ್ವಂತ ಲಾಭಕ್ಕಾಗಿ ಹೇಗೆ ಬಳಸಿಕೊಳ್ಳಬಹುದೆಂಬ ಲೆಕ್ಕಾಚಾರವೇ ಇಂದು ಮುಖ್ಯವಾಗುತ್ತಿದೆ.

ದಲಿತ ಸಂಘಟನೆಗಳ ಹೆಸರಿನಲ್ಲಿ ಸಾವಿರಾರು ಮಂದಿ ನಗರ, ಪಟ್ಟಣ ಪ್ರದೇಶಗಳಲ್ಲಿ ಜೀವನ ನಡೆಸುತ್ತಿದ್ದರೆ ನೂರಾರು ಮಂದಿ ನಾಯಕರು ರಾಜ್ಯಮಟ್ಟದಲ್ಲಿ ಜೀವನ ನಡೆಸುತ್ತಿದ್ದಾರೆ. ಕೆಲವರಿಗಂತೂ ಅದೇ ಉದ್ಯೋಗವಾಗಿದೆ. ದೊಡ್ಡ ದೊಡ್ಡ ನಗರಗಳಲ್ಲಿರುವ ಒಂದಷ್ಟು ಜನರು ದೊಡ್ಡ ಸಂಘಟನೆಗಳ ಹೆಸರಿನಲ್ಲಿ ರಿಯಲ್ ಎಸ್ಟೇಟ್ ದಂಧೆಗೆ ಇಳಿದಿದ್ದಾರೆ. ಆದರೆ ಅಂಬೇಡ್ಕರ್ ಹೆಸರಲ್ಲೇ ಹುಟ್ಟಿಕೊಳ್ಳುವ ಸಂಘ ಸಂಸ್ಥೆಗಳು, ಸಂಘಟನೆಗಳು, ಬಡಾವಣೆಗಳು, ನಾಮಫಲಕಗಳು, ವೃತ್ತಗಳು ಅವರ ಚಿಂತನೆಗಳನ್ನು ಎಷ್ಟು ಫಲಪ್ರದವಾಗಿಸಿವೆ ಎಂಬುದು ಮುಖ್ಯ. ಅಂಬೇಡ್ಕರ್ ಜಯಂತಿ ನೆಪದಲ್ಲಾದರೂ ದಲಿತ ಸಂಘಟನೆಗಳು ಅವುಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬೇಕು. ಅಂಬೇಡ್ಕರ್ ನಿರಂತರ ಪರಿವರ್ತನೆಗೆ ತಮ್ಮನ್ನು ತಾವು ಒಡ್ಡಿಕೊಳ್ಳುತ್ತಿದ್ದರು. ತಮ್ಮ ಗುರಿ ಸಾಧಿಸಲು ಕಾಲಕಾಲಕ್ಕೆ ಅನುಸರಿಸಬೇಕಾದ ಮಾರ್ಗೋಪಾಯಗಳನ್ನು ಗುರುತಿಸಿಕೊಳ್ಳುತ್ತಾ ಹೋರಾಟವನ್ನು ಮುಂದುವರಿಸುತ್ತಿದ್ದರು. ಅವರ ಪ್ರತಿ ಕಾರ್ಯಕ್ರಮವೂ ತಮ್ಮ ಗುರಿಗಾಗಿ ನಡೆಸುತ್ತಿರುವ ಹೋರಾಟದ ಮುಂದುವರೆದ ಭಾಗವೇ ಆಗಿರುತ್ತಿತ್ತು. ಅವರೆಂದೂ ನಿಂತ ನೀರಾಗಿರಲಿಲ್ಲ. ಒಂದೇ ಕಾರ್ಯಕ್ರಮಕ್ಕೆ, ಆಲೋಚನೆಗೆ ಜೋತುಬೀಳುತ್ತಿರಲಿಲ್ಲ.

ಅವರು ರಾಜಕಾರಣದೊಳಗಿದ್ದು ಅದಕ್ಕಾಗಿ ತಮ್ಮ ತತ್ತ್ವ ಸಿದ್ಧಾಂತಗಳನ್ನು ಬಿಟ್ಟುಕೊಡಲಿಲ್ಲ. ಹಿಂದೂ ಕೋಡ್ ಬಿಲ್‌ಗೆ ಪ್ರಧಾನಿ ನೆಹರು ಒಪ್ಪದಿದ್ದಾಗ ಕಾನೂನು ಮಂತ್ರಿಗಿರಿಗೆ ರಾಜೀನಾಮೆ ಎಸೆದು ಬಂದರು. ಆದರೆ ಅಂಬೇಡ್ಕರ್ ಅನುಯಾಯಿಗಳೆಂದು ನಿತ್ಯ ಕರೆದುಕೊಳ್ಳುವ ಬಹುತೇಕ ದಲಿತ ಯುವಕರಿಗೇಕೆ ಇದು ಸಾಧ್ಯವಾಗುತ್ತಿಲ್ಲ? ಅಂಬೇಡ್ಕರ್ ಕಟ್ಟಿ ಬೆಳೆಸಿದ ಚಳವಳಿಯನ್ನೇಕೆ ಮುನ್ನಡೆಸಲಾಗುತ್ತಿಲ್ಲ? ತನಗಾಗಿ ಎಂದೂ ಬದುಕದ ಅಂಬೇಡ್ಕರ್ ಯಾಕೆ ಇವರಿಗೆಲ್ಲಾ ಆದರ್ಶವಾಗುತ್ತಿಲ್ಲ? ಯಾಕೆ ಇವರೆಲ್ಲಾ ಕುಬ್ಜರಾಗಿ ತಮ್ಮ ತಮ್ಮ ಜಾತಿಗಳೊಳಗೆ ಕಳೆದುಹೋಗುತ್ತಿದ್ದಾರೆ? – ಎಂಬ ಹತಾಶೆಯ ಪ್ರಶ್ನೆಗಳಿಲ್ಲಿ ಸಹಜವಾಗಿ ಒಡಮೂಡುತ್ತವೆ. ಬದಲಿಗೆ ಇಂದಿನ ಪ್ರತಿಯೊಬ್ಬ ದಲಿತ ನಾಯಕನು ನಿಜವಾದ ಅರ್ಥದಲ್ಲಿ ಅಂಬೇಡ್ಕರ್ ಅವರ ಸೈದ್ಧಾಂತಿಕ ವಾರಸುದಾರನಾಗಬೇಕೆಂಬ ಅದಮ್ಯ ತುಡಿತದಿಂದ ಎದ್ದ ಪ್ರಶ್ನೆಗಳು ಇಡೀ ಸಾಮಾಜಿಕ ಹಾಗೂ ರಾಜಕೀಯ ಬದುಕೇ ಭ್ರಷ್ಟಗೊಂಡಿರುವಾಗ ದಲಿತ ನಾಯಕರನ್ನೇಕೆ ಪ್ರತ್ಯೇಕಿಸಿ ನೋಡಬೇಕೆಂಬ ಪ್ರಶ್ನೆಯೂ ಎದುರಾಗಿಬಿಡುತ್ತದೆ. ಆದರೆ ನಮ್ಮಲ್ಲಿ ಕನಿಷ್ಠ ಆದರ್ಶಕ್ಕಾದರೂ ಕೆಲವರು ಬದುಕಬಾರದೇ ಎಂಬ ಕೊರಗು ನಾಳಿನ ಜನಾಂಗಕ್ಕೆ ಆದರ್ಶಪ್ರಾಯರೆಂದು ತೋರಿಸಲು ಅಂಬೇಡ್ಕರ್ ಅವರ ನಂತರ ಯಾರಿದ್ದಾರೆ? ಅಂಬೇಡ್ಕರ್ ಅವರಷ್ಟು ಎತ್ತರಕ್ಕೆ ಏರದಿದ್ದರೂ ಅವರ ಆದರ್ಶ ಹೋರಾಟಗಳ ನೈಜ ವಾರಸುದಾರರಾಗಿಯಾದರೂ ಕೆಲವರು ಇರಬೇಕಲ್ಲವೇ? ಅಥವಾ ಹಾಗೆ ಬದುಕಬೇಕಾದ ಜನರು ಪ್ರತಿಯೊಬ್ಬ ದಮನಿತನಿಗೂ ಅಗತ್ಯವಿದೆ.

ಅಂಬೇಡ್ಕರ್‌ರ ನಂತರ ದಲಿತ ಚಳವಳಿ ಅಂಬೇಡ್ಕರ್‌ರ ಸುತ್ತ ಕಟ್ಟಿಕೊಂಡಿರುವ ಪ್ರತಿಮೆಗಳು ಅಂಬೇಡ್ಕರ್‌ರನ್ನು ಸಂವಿಧಾನದ ಕರ್ತೃವೆಂದು ಪ್ರಸ್ತುತ ವ್ಯವಸ್ಥೆಗೆ ಕಾರಣೀಭೂತರೆಂದು ಒಬ್ಬ ಬೋಧಿಸತ್ವನೆಂದು, ಒಬ್ಬ ಸಂವಿಧಾನವಾದಿಯೆಂದು, ಒಬ್ಬ ಅವಧೂತನೆಂದು, ಒಬ್ಬ ರಕ್ಷಕನೆಂದು, ಒಬ್ಬ ಉದಾರವಾದಿ – ಪ್ರಜಾತಂತ್ರವಾದಿ ಎಂದು, ಒಬ್ಬ ದಲಿತರ ನಾಯಕನೆಂದು, ಒಬ್ಬ ಕಡು ಕಮ್ಯುನಿಸ್ಟ್ ವಿರೋಧಿ ಎಂದು ಸುಧಾರಣವಾದದಲ್ಲಿ ನಂಬಿಕೆ ಇಟ್ಟಿದ್ದ ಮತ್ತು ಕ್ರಾಂತಿಗಳ ವಿರೋಧಿ ಎಂದು, ಬಣ್ಣಿಸುತ್ತವೆ. ಈ ಬಗೆಯ ಅಂಬೇಡ್ಕರ್‌ರ ಚಿತ್ರಣವೇ ಇಂದು ದಲಿತ ಚಳವಳಿಯನ್ನು ಆವರಿಸಿಕೊಂಡಿವೆ. ಈ ಬಗೆಯ ಬಣ್ಣನೆಗಳು ಅಂಬೇಡ್ಕರ್ ಒಳಗಿದ್ದ ಯಾವುದೇ ಬಗೆಯ ಶೋಷಣೆ, ಅನ್ಯಾಯ, ಕಪಟಗಳಿಲ್ಲದ ಮಾನವ ಸಮಾಜದ ಕನಸುಗಾರನನ್ನು ಕಟ್ಟಿಕೊಡಲು ವಿಫಲವಾಗುತ್ತವೆ.

ಅಂಬೇಡ್ಕರ್‌ರವರ ವಿಷಯದಲ್ಲಿ ಅವರೊಂದು ಪ್ರತಿಮೆಯಾಗಿಬಿಡುವುದು ಅನಿವಾರ್ಯವೇ ಆಗಿತ್ತು. ಅವರ ಉನ್ನತ ಸ್ಥಾನಮಾನ ತನ್ನ ಜನರ ಬಗ್ಗೆ ಅವರಿಗಿದ್ದ ಬದ್ಧತೆ, ಅವರಿದ್ದ ಚಾರಿತ್ರಿಕ ಸನ್ನಿವೇಶ, ಜನತೆಯ ಅನಕ್ಷರತೆ ಹಾಗೂ ಕಡಿಮೆ ಮಟ್ಟದ ರಾಜಕೀಯ ತಿಳುವಳಿಕೆ ಮತ್ತು ಒಳಗಿನ ಹಾಗೂ ಹೊರಗಿನ ಜನರ ಪಟ್ಟಭದ್ರ ಹಿತಾಸಕ್ತಿಗಳ ಸಂಗತಿಗಳೇ ಇದಕ್ಕೆ ಕಾರಣ. ಸಮಸ್ಯೆ ಇರುವುದು ಪ್ರತಿಮೀಕರಣದಲ್ಲಲ್ಲ, ಬದಲಿಗೆ ಅದರ ಬಹು ಪುನರುತ್ಪಾದನೆಯಲ್ಲಿ. ಆದರೆ ಇಲ್ಲಿಯೂ ಒಂದು ಪ್ರಶ್ನೆಯನ್ನು ಕೇಳಿಕೊಳ್ಳಬಹುದು.

ಒಂದು ರಾಷ್ಟ್ರ ಅನೇಕ ವಿಷಯಗಳ ಸುತ್ತ ವಿಕಾಸ ಹೊಂದುತ್ತದೆ. ಪ್ರತಿಮೆಗಳು ರಾಷ್ಟ್ರ ಕಟ್ಟುವ ಪ್ರಕ್ರಿಯೆಯ ಭಾಗ. ಎಲ್ಲಾ ಸಮಾಜಗಳು ಸಾಮಾಜಿಕ ವರ್ಗಗಳು ತಮ್ಮ ಹೆಮ್ಮೆಯ ಪ್ರತಿಮೆಗಳನ್ನು ಹೊಂದುವುದು ಅವಶ್ಯಕ. ಮುಂದಿನ ಪೀಳಿಗೆಗಳನ್ನು ಪ್ರೋತ್ಸಾಹಿಸಲು ಆ ಪ್ರತಿಮೆಗಳ ಬುದ್ಧಿಮತ್ತೆ, ಹೋರಾಟ, ಕೊಡುಗೆ ಮುಂತಾದವುಗಳನ್ನು ಆ ಜನಾಂಗಗಳು ಮತ್ತೆ ಮತ್ತೆ ಹೆಮ್ಮೆಯಿಂದ ನೆನಪಿಸಿಕೊಳ್ಳುತ್ತವೆ. ಆದರೆ ಈ ಸಂದರ್ಭದಲ್ಲಿ ಮುಖ್ಯವಾಹಿನಿಯ ವಿದ್ವಾಂಸರು ಸಮಾಜದ ಪ್ರತಿಮೆಗಳನ್ನು ಗುರುತಿಸುವುದರಲ್ಲಿ ನಿಜವಾಗಿಯೂ ಹಿಂದುಳಿದಿರುತ್ತಾರೆ.

ತನ್ನ ಚರಿತ್ರೆಯ ಈ ಹಂತದಲ್ಲಿ ಭಾರತ ಬಹಳ ವೇಗವಾಗಿ ಬದಲಾಗುತ್ತಿದೆ. ಸಮಾಜ ವಿಭಜನೆಯ ದೊಡ್ಡ ಇತಿಹಾಸವನ್ನು ಹೊಂದಿರುವ ಈ ನಾಡಿನಲ್ಲಿ ಮುಖ್ಯವಾಹಿನಿ ಮೊದಲು ತಗ್ಗಬೇಕಾಗುತ್ತದೆ. ದಲಿತರು ಪೂಜ್ಯರೆಂದುಕೊಳ್ಳುವವರ ಪ್ರತಿಮೆಗಳನ್ನು ಮುಖ್ಯವಾಹಿನಿ ಗುರುತಿಸಬೇಕಾಗುತ್ತದೆ. ಈವರೆಗೆ ಹಾಗೆ ಗುರುತಿಸಲಾಗದಿದ್ದಕ್ಕೆ ಅದು ಮುಖ್ಯವಾಹಿನಿಯ ಪರವಾಗಿ ಕ್ಷಮೆ ಯಾಚಿಸಬೇಕಾಗುತ್ತದೆ. ನೊಂದ ಜನ ಸಹಜವಾಗಿಯೇ ಕಹಿಯಾಗಿರುತ್ತಾರೆ. ಅಸ್ಪೃಶ್ಯರಾಗಿ ದಲಿತರು ಎಂತಹ ಅವಮಾನಗಳನ್ನು ಅನುಭವಿಸಿದ್ದಾರೆ ಎಂದು ಭಾರತದ ಹೊರಗಿನ ಜನ ಅರ್ಥ ಮಾಡಿಕೊಳ್ಳುವುದು ಕಷ್ಟ ಎಂದು ದಲಿತರು ಅನೇಕ ಕಡೆ ಅಂತಹದ್ದೇ ಅವಮಾನಗಳಿಂದ ನರಳುತ್ತಿದ್ದಾರೆ.

ಭಾರತ ಎಲ್ಲರಿಂದ ಪ್ರೀತಿಸಲ್ಪಡಬೇಕಾದರೆ ಅದು ಎಲ್ಲರೂ ಹರ್ಷಿಸುವ ಸಾಮಾಜಿಕ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಆ ದೃಷ್ಟಿಯಿಂದ ನಾವು ಕಟ್ಟುವ ಪ್ರತಿಮೆಗಳ ಬಗ್ಗೆ ನಾವು ಎಲ್ಲರ ಗೌರವ ಸಾಧಿಸಲಾಗದಿದ್ದಲ್ಲಿ ಸಮಾಜದಲ್ಲಿ ಒಗ್ಗಟ್ಟು ಮೂಡುವುದಿಲ್ಲ. ಪ್ರತಿಮೆಗಳ ಬಗ್ಗೆ ಒಡೆದ ಅಭಿಪ್ರಾಯವಿದ್ದಲ್ಲಿ ಅದು ಸಮಾಜವನ್ನು ಒಡೆಯಬಲ್ಲದು. ಈ ಕಾರಣದಿಂದಲೇ ಪಿ. ಲಂಕೇಶ್ ಹೇಳಿದ್ದು, 'ಇಟ್ಟಿಗೆ ಪವಿತ್ರವಲ್ಲ, ಜೀವ ಪವಿತ್ರ' ಎಂದು. ನ್ಯಾಯವನ್ನು ಗಾಳಿಗೆ ತೂರುವ ನ್ಯಾಯಯುತವಾದ ತೆರಿಗೆಯನ್ನು ಕಟ್ಟದೇ ಸರ್ಕಾರಕ್ಕೆ ವಂಚನೆಯನ್ನು ಎಸಗುತ್ತಾ, ಸಂವಿಧಾನಕ್ಕೆ ದ್ರೋಹ ಬಗೆಯುವಲ್ಲಿ ಸಕ್ರಿಯವಾಗಿದೆ.

ನಮ್ಮ ನಡುವೆ ಇವತ್ತಿಗೂ ಜ್ವಲಂತ ಸಮಸ್ಯೆಯಾಗಿರುವ ಹಸಿವು, ಬಡತನ, ನಿರುದ್ಯೋಗ ನಿವಾರಣೆ. ಹೀಗಿರುವಾಗ ಅಸಂಖ್ಯಾತ ಕೊಳೆಗೇರಿಗಳಲ್ಲಿನ ಮೂಲಭೂತ ಸೌಕರ್ಯಗಳಿಗಾಗಿ ಬಳಸಬೇಕಾದ ಸಾರ್ವಜನಿಕ ಹಣವನ್ನು ಮತ



ಮಾನ್ಯಗಳಿಗೆ ಹಂಚುವುದು ಎಷ್ಟರಮಟ್ಟಿಗೆ ಸರಿ? ಉತ್ತರ ಕರ್ನಾಟಕದಲ್ಲಿ ನೆರೆ ಹಾವಳಿ ಬಂದು, ಮನೆ ಮಠ ಬದುಕನ್ನು ಕಳೆದುಕೊಂಡವರಿಗೆ ಸಾಲ ಬಾಧೆಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತರಿಗೆ ಹಸಿವು ಬಡತನದ ಕಾರಣ ಹಳ್ಳಿಗಳಿಂದ ಗುಳೆ ಹೊರಟ ಅಸಂಖ್ಯಾತ ಬಡವರಿಗೆ, ಬಾಲ್ಯ ಕಳೆದುಕೊಂಡ ಬಾಲ ಕಾರ್ಮಿಕರಿಗೆ, ಮೈ ಮಾರಿಕೊಂಡು ಬದುಕುತ್ತಿರುವ ವೇಶ್ಯೆಯರಿಗೆ, ಬದುಕಿನ ಅಸ್ತಿತ್ವದ ಹುಡುಕಾಟದಲ್ಲಿ ಕಂಗಾಲಾಗಿರುವ ಅಸಂಖ್ಯಾತ ವಿದ್ಯಾವಂತ ನಿರುದ್ಯೋಗಿಗಳಿಗೆ ನಮ್ಮ ನಗರಗಳನ್ನು ಚಂದಗಾಣಿಸುತ್ತಾ ತಾವು ಮಾತ್ರ ಕೊಳೆಗೇರಿಗಳಲ್ಲಿ ಬದುಕುತ್ತಾ ಮ್ಯಾನ್‌ಹೋಲ್‌ಗಳಲ್ಲಿ ಉಸಿರುಕಟ್ಟಿ ಸಾಯುತ್ತಾ ಕಾಯಕಕ್ಕೆ ತಕ್ಕ ಕೂಲಿ ಸಿಗದೆ ಗುತ್ತಿಗೆದಾರರ ಶೋಷಣೆಯಿಂದ ಬಸವಳಿದ ಪೌರ ಕಾರ್ಮಿಕರಿಗೆ ಸದ್ಬಳಕೆಯಾಗಬೇಕಿದ್ದ ಸಾರ್ವಜನಿಕ ಹಣ ಮಠ ಮಾನ್ಯಗಳಿಗೆ ಹಂಚಿಕೆಯಾಗುತ್ತಿರುವುದು ಸಾಮಾಜಿಕ ಅಪರಾಧವಲ್ಲವೇ?

ಕಾರ್ಲ್ ಮಾರ್ಕ್ಸ್ ಹೇಳಿರುವ ಹಾಗೆ ಧರ್ಮವು ದಮನಿತರ ನಿಟ್ಟುಸಿರಾಗಿರುವಂತೆಯೇ ಅದು ಅಫೀಮು ಸಹ ಆಗಿರಬಲ್ಲದು, ದೇವರು ಧರ್ಮ ಮತಗಳಿಗೆ ಸಂಬಂಧಿಸಿದ ನಂಬಿಕೆ ಆಚರಣೆಗಳು ಎಲ್ಲಿಯವರೆಗೂ ಖಾಸಗಿಯಾದ ವೈಯಕ್ತಿಕ ನೆಲೆಯ ಮುಗ್ಧತೆಯ ಗೆರೆಗಳನ್ನು ದಾಟುವುದಿಲ್ಲವೋ ಅಲ್ಲಿಯವರೆಗೆ ಅವುಗಳಿಂದ ಯಾವುದೇ ಅಪಾಯವಿಲ್ಲ. ಆ ಎಲ್ಲೆಗಳನ್ನು ಮೀರಿದ್ದೇ ಆದಲ್ಲಿ ದುರಂತಗಳು ಸಂಭವಿಸುತ್ತವೆ. ಹಾಗಾಗಿ ಇವತ್ತು ಧಾರ್ಮಿಕ ನೆಲೆಯ ಮತಾಂಧತೆ ಜಾಗತಿಕ ಮಟ್ಟದ ಬಹುದೊಡ್ಡ ಸಮಸ್ಯೆಯಾಗಿದೆ. ನಮ್ಮನ್ನು ಕಾಡುತ್ತಿರುವ ಭಯೋತ್ಪಾದನೆಯ ಮೂಲ ಬೇರುಗಳು ಧಾರ್ಮಿಕ ಕೇಂದ್ರಗಳಲ್ಲಿರುವ ವಾಸ್ತವ ಹಾಗೂ ಭಯಾನಕ ಸಂಗತಿಯಾಗಿದೆ. ಇನ್ನು ನಮ್ಮ ರಾಜಕಾರಣಿಗಳು ಅಧಿಕಾರ ವಹಿಸಿಕೊಳ್ಳುವಾಗ ಯಾರ್‍ಯಾರ ಹೆಸರಿನಲ್ಲಿ ಯಾರ್‍ಯಾರ ಪಾದ ಮುಟ್ಟಿ ಯಾವ್ಯಾವುವೋ ಧರ್ಮ–ದೇವರ ಹೆಸರಿನಲ್ಲಿ ಪ್ರಮಾಣ ವಚನ ಸ್ವೀಕರಿಸುವ ಸಂದರ್ಭದ ಅವರ ನಡವಳಿಕೆಗಳು ನಾಚಿಕೆ ತರಿಸುವಂತಹವು. ಇದು ಒಂದರ್ಥದಲ್ಲಿ ಸಂವಿಧಾನ ವಿರೋಧಿ ನಿಲುವೇ ಆಗಿದೆ.

ಹಿಂದೂ ಸಮುದಾಯದಲ್ಲಿ ಕಂಡುಬರುವ ಅಸ್ವಸ್ಥತೆಗೆ ತಳಮಳಕ್ಕೆ ಸ್ವ–ಸಂರಕ್ಷಣೆಯ ಪ್ರವೃತ್ತಿಯೇ ಹೊಣೆ. ಒಂದು ಕಾಲದಲ್ಲಿ ಆ ಸಮಾಜದ ಉತ್ತಮರೆನಿಸಿಕೊಂಡವರಿಗೆ ಅದರ ಸಂರಕ್ಷಣೆಯ ಬಗ್ಗೆ ಭಯವಿರಲಿಲ್ಲ. ಅವರ ವಾದವೇನೆಂದರೆ ಹಿಂದೂ ಸಮುದಾಯ ಅನೇಕ ಅತ್ಯಂತ ಪ್ರಾಚೀನ ಸಮುದಾಯಗಳಲ್ಲಿ ಒಂದು. ಅದು ಅನೇಕ ವಿರೋಧಿ ಶಕ್ತಿಗಳನ್ನು ಎದುರಿಸುತ್ತಲೇ ಬಂದಿದೆ. ಕಾರಣ ಅದರ ಸಂಸ್ಕೃತಿ, ನಾಗರಿಕತೆ ಮತ್ತು ಸತ್ವದಲ್ಲಿ ಒಂದು ತನ್ನದೇ ಸ್ಥಳೀಯ ಶಕ್ತಿ ಇರಲೇಬೇಕು. ಆದ್ದರಿಂದಲೇ ಅದು ಸ್ಥಿರವಾಗಿ ಉಳಿದುಬಂದಿದೆ. ಈ ಕಾರಣದಿಂದ ತಮ್ಮ ಸಮುದಾಯ ಸದಾ ಜೀವಂತವಾಗಿದೆ ಎನ್ನುವುದು ಅವರ ಬಲವಾದ ನಂಬಿಕೆ. ಮಾನವ ಒಬ್ಬ ಸಾಮಾಜಿಕ ಜೀವಿ ಎಂದು ಅರಿಸ್ಟಾಟಲ್ ಹೇಳಿದ್ದಾನೆ.

ಅರಿಸ್ಟಾಟಲ್‌ನ ಹೇಳಿಕೆಯ ನಿರ್ದಿಷ್ಟತೆಯ ಸಮರ್ಥನೆಗಳು ಏನೇ ಇರಲಿ, ಇಷ್ಟು ಮಾತ್ರ ನಿಜ. ಒಬ್ಬ ವ್ಯಕ್ತಿಯನ್ನು ಅವನ ಸಮಾಜ ಬಾಂಧವರಿಂದ ಆಮೂಲಾಗ್ರವಾಗಿ ಬೇರ್ಪಡಿಸಿದರೆ ಅವನೊಬ್ಬ ವ್ಯಕ್ತಿಯಾಗಿ ಜೀವನವನ್ನು ಆರಂಭಿಸುವುದು ಅಸಾಧ್ಯ. ಅವನ ಸ್ವಪ್ರಜ್ಞೆಯ ಬೆಳವಣಿಗೆಯಲ್ಲಿಯೇ ಸಾಮಾಜಿಕ ಬಂಧ ಬೇರುಬಿಟ್ಟಿರುತ್ತದೆ, ಸ್ಥಾಪಿತಗೊಂಡಿರುತ್ತದೆ. ಪ್ರತಿಯೊಬ್ಬನ ವ್ಯಕ್ತಿತ್ವದ ಗ್ರಹಣಶಕ್ತಿ ಮತ್ತು ಆಸಕ್ತಿ ತನ್ನ ಸಹಬಾಂಧವರನ್ನು, ಅವರ ಆಸಕ್ತಿಗಳನ್ನು ಗುರುತಿಸಿ ಮನ್ನಿಸುವುದರಲ್ಲಿ ತೊಡಗಿಕೊಂಡಿರುತ್ತವೆ. ಮತ್ತು ಅವನ ಉದಾರತೆ ಅಥವಾ ಸ್ವಾರ್ಥ ಯಾವುದೇ ಬಗೆಯ ಉದ್ದೇಶಗಳ ಸಾಧನೆಗೆ ಪುಷ್ಟಿ ನೀಡುವುದಾದರೆ, ಅಷ್ಟರ ಮಟ್ಟಿಗೆ ಅದು ಇತರರ ಯತ್ನ ಸಾಧನೆಗಳಾಗಿರುತ್ತವೆ. ಎಲ್ಲಾ ಸ್ಥಿತಿ ಸಂದರ್ಭಗಳಲ್ಲಿಯೂ ಸಾಮಾಜಿಕ ಸಂಬಂಧ ವ್ಯಕ್ತಿಯ ಗುರಿ ಮತ್ತು ಆಸಕ್ತಿಗಳಿಂದೊಡಗೂಡಿದ ಬದುಕಿನ ಸಹಜ ಸಂಗತಿಯಾಗಿದೆ. ಇದರಿಂದ ತನ್ನ ಜೀವನದ ಎಲ್ಲಾ ಸಂದರ್ಭಗಳಲ್ಲಿಯೂ ಸಾಮಾಜಿಕ ಸಂಬಂಧಗಳ ಸತ್ವವನ್ನು ಗ್ರಹಿಸುತ್ತಾನೆ, ಅನುಭವಿಸುತ್ತಾನೆ. ಸಂಕ್ಷಿಪ್ತವಾಗಿ ಸಮಾಜವಿಲ್ಲದೆ ಜೀವನ ನೀರಿನಿಂದ ತೆಗೆದೊಗೆದ ಮೀನಿನಂತೆ ಅಸಾಧ್ಯ.

ಈ ವಾಸ್ತವಾಂಶದ ಹಿನ್ನೆಲೆಯಲ್ಲಿರುವ ಅಗತ್ಯತೆ ಎಂದರೆ ಇತರರನ್ನು ತನ್ನ ಧರ್ಮಕ್ಕೆ ಪರಿವರ್ತಿಸಿಕೊಳ್ಳುವ ಸಮಾಜ ಮೊದಲೇ ತನ್ನ ಸಂವಿಧಾನದಲ್ಲಿ




ಮತಾಂತರಗಳಿಗೆ ಸಹ ಸದಸ್ಯರೆಂದು ಪರಿಗಣಿತರಾಗುವ ಅವಕಾಶ ಕಲ್ಪಿಸಿರಬೇಕು ಮತ್ತು ಅದರ ಸಾಮಾಜಿಕ ಜೀವನದಲ್ಲಿ ಪಾಲ್ಗೊಳ್ಳಲು ಸಮ್ಮತಿಸಿರಬೇಕು. ಅದರಲ್ಲಿ ಮೂಲ ಧರ್ಮ, ಹುಟ್ಟಿದ ಮತ್ತು ಅದಕ್ಕೆ ಬಂದು ಸೇರಿದ ಬಳಿಕ ಹುಟ್ಟಿದ ಮಕ್ಕಳಲ್ಲಿ ಯಾವ ತಾರತಮ್ಯವನ್ನೂ ಮಾಡಕೂಡದು. ಎಲ್ಲಾ ಸಂದರ್ಭದಲ್ಲೂ ಅದು ಮುಕ್ತವಾಗಿರಬೇಕು. ಅದರ ಬದುಕಿನಲ್ಲಿ ಪ್ರವೇಶಿಸಲು ಸಮ್ಮತಿ ನೀಡಿ, ಆ ಸಮಾಜದ ಒಬ್ಬ ಸದಸ್ಯನಾಗಿ ಗೌರವದಿಂದ ಬಾಳಲು ಸಾಧ್ಯವಾಗಿರಬೇಕು. ಹಾಗಾದಲ್ಲಿ ಸಮ ಸಮಾಜದ ಕನಸು ನನಸಾಗುತ್ತದೆ. ಇಂದು ಪ್ರತಿಯೊಬ್ಬ ವ್ಯಕ್ತಿ ಒಂದು ಏರಿಯಾ, ವೃತ್ತ, ನಗರ, ಬಡಾವಣೆ, ಸಮುದಾಯ, ಸಂಘ ಸಂಸ್ಥೆಗಳಲ್ಲಿ ಗುರುತಿಸಿಕೊಳ್ಳಬೇಕಾದರೆ ತನ್ನದೇ ಆದ ಪ್ರತ್ಯೇಕತೆಯನ್ನು ಕಾಪಾಡಿಕೊಳ್ಳುವ ಸಲುವಾಗಿ ಸಮುದಾಯದ ಪ್ರಮುಖ ನಾಯಕರುಗಳ ಹೆಸರುಗಳನ್ನೇ ಇಟ್ಟು ಗುರುತಿಸಿಕೊಳ್ಳುವುದನ್ನು ಕಾಣಬಹುದು.

ಉದಾ : ಗಾಂಧಿ ನಗರ, ಅಂಬೇಡ್ಕರ್ ನಗರ, ಅಂಬೇಡ್ಕರ್ ಬಡಾವಣೆ, ಅಂಬೇಡ್ಕರ್ ಸಂಘ.... ಹೀಗೆ ಖ್ಯಾತ ವ್ಯಕ್ತಿಗಳ ಹೆಸರಿನೊಂದಿಗೆ ಗುರುತಿಸಿಕೊಳ್ಳುವ ಎಷ್ಟೋ ಜನರು ತಾವು ಹಾಗೂ ತಮ್ಮ ಮಕ್ಕಳು ಮಾತ್ರ ಅವರ ಚಿಂತನೆಯ ಹಾದಿಯಲ್ಲಿ ಒಂದಿಷ್ಟೂ ನಡೆಯುವುದಿಲ್ಲ. ಹೆಸರಿಗೆ ಮಾತ್ರ ಮಾನವತಾವಾದಿ ಸಮಾಜ ಸುಧಾರಕರ ಚಿಂತಕರ ಹೆಸರೇಳಿಕೊಂಡು ಬದುಕುವ ನಾವುಗಳೇ ಬದಲಾಗದೆ ಮತ್ತೊಬ್ಬರಿಗೆ ಉಪದೇಶ ಮಾಡುವುದರಲ್ಲಿ ಅರ್ಥವಿದೆಯೇ ? ಬೋರ್ಡು ವೃತ್ತಗಳಿಗೆ ಪ್ರತಿಮೆಗಳನ್ನು ಅಂಬೇಡ್ಕರ್‌ರ ಹೆಸರು ಇಟ್ಟ ಮಾತ್ರಕ್ಕೆ ಏನೋ ಸಾಧಿಸಿಬಿಟ್ಟೆವೆಂದು ಬೀಗುವುದರಲ್ಲಿ ಅರ್ಥವಿಲ್ಲ. ಅದಕ್ಕೆ ಪೂರಕವಾಗಿ ಶ್ರಮಿಸಬೇಕಾಗುತ್ತದೆ. ಪ್ರಸ್ತುತ ದಿನಗಳಲ್ಲಿ ಅನೇಕ ಮಹನೀಯರ ಸಮಾಜ ಸುಧಾರಕರ ಹೆಸರು ಹೇಳಿಕೊಂಡೇ ತಮ್ಮ ಸ್ವಾರ್ಥ ಸಾಧನೆ ಮಾಡಿಕೊಳ್ಳುವವರು ಹಲವರಿದ್ದಾರೆ. ಹಾಗಿದ್ದಲ್ಲಿ ಇನ್ನೆಲ್ಲಿಯ ನ್ಯಾಯ ಸಿಗುತ್ತದೆ ? ಒಬ್ಬ ಅಂಬೇಡ್ಕರ್ ಹುಟ್ಟಿ ಅವರ ಚಿಂತನೆಗಳು ಜಗತ್ತಿಗೇ ಇಷ್ಟೊಂದು ಫಲಪ್ರದವಾಗಿ ಕಾಡುತ್ತಿರುವಾಗ ಪ್ರತಿಯೊಬ್ಬರೂ ಅವರ ಚಿಂತನೆಯ ಹಾದಿಯಲ್ಲಿ ನಡೆದು ನಾವು ಬದುಕಿ ನಮ್ಮವರಿಗೂ ಬದುಕಲು ಬಿಟ್ಟು ಸಾಗಿದ್ದೇ ಆದರೆ ಶೋಷಣೆಯ ಮಾತೇ ಇರುವುದಿಲ್ಲ.

'ನಿಮ್ಮ ಜೀವನದ ಒಳಿತು ಕೆಡುಕುಗಳು ನೀವು ಹುಟ್ಟುವ ಮುನ್ನವೇ ನಿರ್ಧಾರಿತವಾಗಿ ಬಿಟ್ಟಿವೆ' ಎಂಬ ಮೂಢನಂಬಿಕೆಯನ್ನು ಕಿತ್ತೊಗೆಯಿರಿ. ನಿಮ್ಮ ಸುಖ–ದುಃಖ ದಾರಿದ್ರ್ಯಗಳಿಗೆ ದೇವರು ಕಾರಣ ಅಲ್ಲವೇ ಅಲ್ಲ, ಕಷ್ಟ ಸಂಕಷ್ಟಗಳಿಂದ ಬಿಡುಗಡೆ ಇಲ್ಲವೇ ಇಲ್ಲ ಎಂಬ ನಿರಾಶೆ ಮಾತ್ರ ಬೇಡ. ಈ ತೆರನಾದ ಅನಂತ ಮೂಢನಂಬಿಕೆಗಳೇ ನೀವು ಶಾಶ್ವತ ಗುಲಾಮರಾಗಿರಲು ಕಾರಣ ಎಂಬ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಮಾತು ಅಕ್ಷರಶಃ ಸತ್ಯವಾಗಿದ್ದು, ಇದನ್ನು ಅರ್ಥೈಸಿಕೊಂಡು ನಡೆಯಬೇಕಾಗಿದ್ದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ.

**ರಾಜೀವ ನಾಯ್ಕ ಎಸ್.**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ
ಜ್ಞಾನ ಸಹ್ಯಾದ್ರಿ, ಶಂಕರಘಟ್ಟ – ೫೭೭ ೪೫೧, ಶಿವಮೊಗ್ಗ




# ಇನ್ನೊಂದು ಚಂದ್ರಗ್ರಹಣ

**ಜ**ನವರಿ ತಿಂಗಳಲ್ಲಿ "ಸೂಪರ್ ಮೂನ್" ಎಂಬ ವಿಶೇಷಣದಿಂದ ಭಾರಿ ಪ್ರಚಾರ ಗಿಟ್ಟಿಸಿಕೊಂಡ ಗ್ರಹಣ ನೆನಪಿರಬಹುದು. ಆಗ ಸಂಜೆ ಅದರ ಕೆಂಪು ಬಣ್ಣವನ್ನು ಕಂಡು "ಬ್ಲಡ್ ರೆಡ್" ಎಂದು ಕರೆದದ್ದು ನೆನಪಿರಬೇಕಲ್ಲವೇ? ಆ ಚಿತ್ರಗಳನ್ನು ಪುನಃ ನೋಡಲು ಈಗೊಂದು ಅವಕಾಶವಿದೆ. ಈ ತಿಂಗಳಲ್ಲೂ ಗ್ರಹಣವಿದೆ. ಅದನ್ನು ಸೂಪರ್‌ಗೆ ವಿರುದ್ಧವಾಗಿ ಕಳಪೆ ಎಂದು ಕರೆಯಬಹುದೇ? ಪರೀಕ್ಷಿಸಿ ನೋಡಲು ಇದೊಂದು ಒಳ್ಳೆಯ ಅವಕಾಶ. ಮೋಡಗಳು ಅವಕಾಶ ಕೊಟ್ಟಿದ್ದ ಆದರೆ ಇದೊಂದು ಅದ್ಭುತ ದೃಶ್ಯ. ಕಳಪೆ ಖಂಡಿತ ಅಲ್ಲ. ಸಂಜೆ ಉದಯಿಸುವಾಗ ಪ್ರಕಾಶಮಾನವಾಗಿರುವ ಚಂದ್ರ ಅಕ್ಕ ಪಕ್ಕ ಇರುವ ಎಲ್ಲ ನಕ್ಷತ್ರಗಳನ್ನೂ ಮಂಕಾಗಿಸಿರುತ್ತದೆ. ಮಧ್ಯರಾತ್ರಿಗೆ ನೆತ್ತಿಯ ಮೇಲೇರುವಾಗ ಮಂಕಾಗುತ್ತದೆ. ಆಗ ಅದರ ಪಕ್ಕದಲ್ಲಿ ಮಂಕಾಗಿ ಕೆಂಪು ಚುಕ್ಕೆಯೊಂದು ಕಾಣುತ್ತದೆ. ಇದರ ಜೊತೆ ಸ್ಪರ್ಧೆಗೆ ಇಳಿಯುವಂತೆ ಚಂದ್ರ ಕೂಡ ತನ್ನ ಬಿಳುಪನ್ನು ಕಳಚುತ್ತಾ ಕೆಂಪಾಗುತ್ತದೆ. ಆಗ ಬಹುಶಃ ಚುಕ್ಕೆಯೇ ಹೆಚ್ಚು ಹೊಳಪಾಗಿ ಕಾಣಬಹುದು. ಅದೇ ಮಂಗಳ ಗ್ರಹ. ಈ ಬಣ್ಣದಾಟ ನೋಡಲು ಚೆನ್ನ. ಮಧ್ಯರಾತ್ರಿ ಒಮ್ಮೆ ಎದ್ದು ನೋಡಿದರೆ ನಿದ್ದೆ ಕೆಟ್ಟ ಶ್ರಮ ಸಾರ್ಥಕವಾಗುತ್ತದೆ. ಜನವರಿಯ ಚಂದ್ರಗ್ರಹಣದ ಚಿತ್ರದೊಡನೆ ಹೋಲಿಸಲು ಅಂದು ಬಳಸಿದ ಕ್ಯಾಮರಾ ಅಥವಾ ಸೆಲ್‌ಫೋನ್ ಬಳಸಿ, ಅದೇ ಸೆಟ್ಟಿಂಗ್ ಇಟ್ಟು ಮತ್ತೆ ಫೋಟೋ ತೆಗೆಯಿರಿ. ಆಗ ಗಾತ್ರದಲ್ಲಿನ ವ್ಯತ್ಯಾಸ ಸ್ಪಷ್ಟವಾಗಿ ತಿಳಿಯುತ್ತದೆ. ಬರಿಗಣ್ಣಿಗೆ ಬೆಳಕಿನ ಅಥವಾ ಗಾತ್ರದ ವ್ಯತ್ಯಾಸ ತಿಳಿಯುವುದಿಲ್ಲ. ಚಂದ್ರ ಮತ್ತು ಭೂಮಿಯ ಅಂತರ ಈ ಹುಣ್ಣಿಮೆಯಲ್ಲಿ ಗರಿಷ್ಠ. ಆದ್ದರಿಂದ ಅದು ಯಾವುದೇ ಹುಣ್ಣಿಮೆಗಿಂತ ಚಿಕ್ಕದಾಗಿ ಕಾಣುವುದಾದರೂ ಬರಿಗಣ್ಣಿಗೆ ಅದು ಗೋಚರಿಸುವುದಿಲ್ಲ. ಇನ್ನೊಂದು ಪಕ್ಕದಲ್ಲಿ ಕಾಣುವ ಬಿಳಿಚುಕ್ಕೆ ಶನಿ ಗ್ರಹ. ಇದನ್ನು ನೋಡಲೂ ಮಧ್ಯರಾತ್ರಿಯ ಗ್ರಹಣವೇ ಒಳ್ಳೆಯ ಅವಕಾಶ .

ಮಂಗಳ ಚಂದ್ರದ ಜೊತೆಗೆ ಅಂದು ಕಾಣುವ ಸಂದರ್ಭವು ವಿಶೇಷ. ಸೂರ್ಯ ಅಸ್ತಮಿಸುವಾಗ ಈ ಎರಡೂ ಉದಯಿಸುತ್ತವೆ. ಇದಕ್ಕೆ ವಿಯುತಿ ಎಂದು ಹೆಸರು. ಇದರ ಅರ್ಥ ಅವು ಮುಂಜಾವಿಗೆ ಪಶ್ಚಿಮದ ಅಂಚನ್ನು ಮುಟ್ಟುತ್ತವೆ ಅಂದರೆ ರಾತ್ರಿ ಇಡೀ ನೋಡಲು ಸಿಗುತ್ತವೆ ಎಂದು. ಚಂದ್ರದ ವಿಯುತಿಗೆ ನಾವು ಹುಣ್ಣಿಮೆ ಎಂಬ ಹೆಸರು ಕೊಟ್ಟಿದ್ದೇವೆ. ಇದು ಪ್ರತಿ ತಿಂಗಳೂ ನಡೆಯುತ್ತದೆ. ಆದರೆ ಮಂಗಳದ ವಿಯುತಿ ಎರಡು ವರ್ಷಕ್ಕೊಮ್ಮೆ ನಡೆಯುತ್ತದೆ. ಅಲ್ಲದೆ ಈ ಸಂದರ್ಭದಲ್ಲಿ ಅದು ಭೂಮಿಗೆ ಕನಿಷ್ಠ ದೂರದಲ್ಲಿರುತ್ತದೆ. ಆದ್ದರಿಂದ ಹೆಚ್ಚು ಪ್ರಕಾಶಮಾನವಾಗಿ ಮತ್ತು ದೂರದರ್ಶಕದಿಂದ ದೊಡ್ಡದಾಗಿ ಕಾಣುತ್ತದೆ. ೨೭ರಿಂದ ಮುಂದಕ್ಕೆ ಚಂದ್ರ ದಿನೇ ದಿನೇ ತಡವಾಗಿ ಉದಯಿಸುವುದರಿಂದ ಮಂಗಳವನ್ನು ಸಂಜೆಯೇ ಪೂರ್ವದಂಚಿನಲ್ಲಿ ಸುಲಭವಾಗಿ ಗುರುತಿಸಬಹುದು.


೨೭–೨೮ರ ಚಂದ್ರಗ್ರಹಣ : ಮಂಗಳದ ವಿಯುತಿ

ಈಗಾಗಲೇ ಸಂಜೆಯ ಆಕಾಶದಲ್ಲಿ ಶುಕ್ರ, ಗುರು ಮತ್ತು ಶನಿಗ್ರಹಗಳು ಬೆಳಗುತ್ತಿವೆ. ಇದೀಗ ಮಂಗಳಗ್ರಹವು ಸೇರ್ಪಡೆಯಾಗಿದೆ. ಐದನೆಯ ಗ್ರಹ ಬುಧ ಕೂಡ ಸಂಜೆಯಲ್ಲಿಯೇ ಇರುವುದೇ ಇನ್ನೊಂದು ವಿಶೇಷ. ೧೨ರಂದು ಬುಧ ಗ್ರಹದ ಗರಿಷ್ಠ ಕೋನೋನ್ನತಿ. ಅದನ್ನು ಪಶ್ಚಿಮದ ಅಂಚಿನಲ್ಲಿ ಗುರುತಿಸಬಹುದು. ೪ರಂದು ಅದರ ಆಸುಪಾಸಿನಲ್ಲಿ ದುರ್ಬೀನಿನಿಂದ ಹುಡುಕಿದರೆ ಪ್ರೆಸಿಪಿ ಎಂಬ ನಕ್ಷತ್ರ ಗುಚ್ಛವೂ ಕಾಣುವುದು. ತಿಂಗಳ ಕೊನೆಗೆ ಅದು ಪುನಃ ದಿಗಂತದ ಅಂಚಿಗೆ ಮರಳುವ ಮುನ್ನ ೧೪ರಂದು ರೇಖಾಚಂದ್ರದ ಪಕ್ಕ ಕಾಣುವುದು. ೧೫–೧೬ ಈ ಅವಧಿಯಲ್ಲಿ ಚಂದ್ರ, ಶುಕ್ರ ಮತ್ತು ಮಘಾ ನಕ್ಷತ್ರ – ಇವುಗಳ ಗುಂಪಿನೊಡನೆ ಬುಧವೂ ಸೇರಿಕೊಳ್ಳುವುದು. ೨೦ರಂದು ಗುರುಗ್ರಹದ ಪಕ್ಕ ಕಾಣುವ ಚಂದ್ರ ೨೫ರಂದು ಶನಿ ಗ್ರಹದ ಪಕ್ಕ ಕಾಣುವುದು. ಹುಣ್ಣಿಮೆಯ ಚಂದ್ರದ ಸಮೀಪ ಶನಿಗ್ರಹವೂ ಕಾಣುವುದು.

೧೩ರಂದು ಅಮಾವಾಸ್ಯೆ. ಅಂದು ಪಾರ್ಶ್ವ ಸೂರ್ಯ ಗ್ರಹಣವಿದೆ. ಆದರೆ ದಕ್ಷಿಣದ ಆಸ್ಟ್ರೇಲಿಯಾ ಮುಂತಾದ ಭೂ ಭಾಗಗಳಿಂದ ಮಾತ್ರ ಕಾಣುತ್ತದೆ. ಹುಣ್ಣಿಮೆಯ ಚಂದ್ರ ಅತಿ ದೂರದಲ್ಲಿರುವ ಕಾರಣ ಈ ಅಮಾವಾಸ್ಯೆಯ ಚಂದ್ರ ಕನಿಷ್ಠ ದೂರದಲ್ಲಿರುತ್ತದೆ. ಅಂದರೆ ಕಡಲಿನ ಉಬ್ಬರ – ಇಳಿತಗಳ ಎತ್ತರ ಮಾಮೂಲಿಗಿಂತ ಹೆಚ್ಚು, ೬ರಂದು ಭೂಮಿ ಸೂರ್ಯನಿಂದ ಗರಿಷ್ಠ ದೂರದಲ್ಲಿರುತ್ತದೆ. ಅದರ ಕಕ್ಷೆ ದೀರ್ಘ ವೃತ್ತ ವಾಗಿರುವುದೇ ಇದಕ್ಕೆ ಕಾರಣ.

**ಖಗೋಳ ದಿನಚರಿ**

೧ ಚಂದ್ರ – ಮಂಗಳ ಜೋಡಿ*
೪ ಬುಧ ಮತ್ತು ಪ್ರೆಸಿಪಿ ನಕ್ಷತ್ರ ಗುಚ್ಛ ಜೋಡಿ.
೬ ಭೂಮಿ–ಸೂರ್ಯ ನಡುವೆ ಗರಿಷ್ಠ ಅಂತರ ; ಚಾಂದ್ರಮಾಸದ ಕೊನೆಯ ಪಾದ
೯ ಶುಕ್ರ – ಮಘ ಜೋಡಿ*
೧೦ ಚಂದ್ರ ರೋಹಿಣಿ ಜೋಡಿ
೧೨ ಬುಧಗ್ರಹದ ಗರಿಷ್ಠ ಕೋನೋನ್ನತಿ*
೧೩ ಅಮಾವಾಸ್ಯೆ ೦೮:೧೮ಕ್ಕೆ ಪಾರ್ಶ್ವ ಸೂರ್ಯಗ್ರಹಣ ;
ಭೂಮಿ ಚಂದ್ರ ನಡುವೆ ಕನಿಷ್ಠ ಅಂತರ.
೧೫ – ೧೬ ಬುಧ, ಶುಕ್ರ, ಚಂದ್ರ ಪುಟ್ಟ ಗುಂಪು*
೨೦ ಚಾಂದ್ರಮಾಸದ ಮೊದಲ ಪಾದ ; ಗುರು ಚಂದ್ರ ಜೋಡಿ*
೨೫ ಶನಿ – ಚಂದ್ರ ಜೋಡಿ*
೨೭ ಹುಣ್ಣಿಮೆ; ಮಂಗಳದ ವಿಯುತಿ* ಚಂದ್ರಗ್ರಹಣ,
ಚಂದ್ರ ಭೂಮಿ ನಡುವೆ ಗರಿಷ್ಠ ಅಂತರ*
ಗ್ರಹಣದ ಆರಂಭ ೧೧:೫೪ ;
ಮುಕ್ತಾಯ ೦೩:೪೯ – ೨೮ರ ಮುಂಜಾವು
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ತತ್ತ್ವಶಾಸ್ತ್ರದ ದಾರಿದ್ರ್ಯ




ಮೂಲ ಲೇಖಕರು : **ಕಾರ್ಲ್ ಮಾರ್ಕ್ಸ್**
ಅನು : **ಕೆ. ಪಿ. ವಾಸುದೇವನ್**
ಪುಟ : ೨೦೮ ಬೆಲೆ : ರೂ. ೨೦೦/–
ಪ್ರಕಾಶಕರು :
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೧, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

**ಶ್ರಮವು ಒಂದು ಸರಕು ಅಲ್ಲ, ಅದಕ್ಕೆ ಯಾವುದೇ ಮೌಲ್ಯ ಇರುವುದು ಸಾಧ್ಯವಿಲ್ಲ ಎನ್ನುತ್ತಾರೆ ಪ್ರೂಧೋನ್. ಸರಕಿನ ಮೌಲ್ಯವು ದರದಲ್ಲಿ ಅಡಕವಾಗಿರುವ ಶ್ರಮಕಾಲದಲ್ಲಿದೆ ಎಂದು ಗುರುತಿಸಿದ ರಿಕಾರ್ಡೋಗೆ ಶ್ರಮವೂ ಒಂದು ಸರಕು ಮತ್ತು ಅದರ ಮೌಲ್ಯವು ಶ್ರಮಶಕ್ತಿಯ ಉತ್ಪಾದನೆಗೆ ಬಳಕೆಯಾದ ಜೀವನಾವಶ್ಯಕ ವಸ್ತುಗಳ ಮೌಲ್ಯದಿಂದ ಬರುತ್ತದೆ ಎಂಬುದು ತಿಳಿದಿರಲಿಲ್ಲ. ಮಾರ್ಕ್ಸ್ ಅದನ್ನು ಗುರುತಿಸಿದ್ದಾರೆ. ಶ್ರಮವು ಎಲ್ಲ ಸರಕುಗಳನ್ನು ಉತ್ಪಾದಿಸುವ ಮೂಲ ಸರಕು.**

**ಪ್ರೊ॥ ವಿ. ಎನ್. ಲಕ್ಷ್ಮೀನಾರಾಯಣ**

೧೮೪೭ರಲ್ಲಿ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ ಪ್ರಕಟವಾದ ಈ ಗ್ರಂಥವನ್ನು ಮಾರ್ಕ್ಸ್, ಫ್ರಾನ್ಸಿನ ಅರಾಜಕತಾವಾದಿಯಾದ ಪ್ರೂಧೋನ್‌ರ 'ದಾರಿದ್ರ್ಯದ ತತ್ತ್ವಶಾಸ್ತ್ರ'ಕ್ಕೆ ಪ್ರತಿಕ್ರಿಯೆಯಾಗಿ ರಚಿಸಿದ್ದಾರೆ. ಅವರ ಗ್ರಂಥದ ಶೀರ್ಷಿಕೆಯನ್ನು ತಿರುವು ಮುರುವು ಮಾಡಿ ತಮ್ಮ ಗ್ರಂಥಕ್ಕೆ 'ತತ್ತ್ವಶಾಸ್ತ್ರದ ದಾರಿದ್ರ್ಯ' ಎಂಬ ಹೆಸರು ಕೊಟ್ಟಿದ್ದಾರೆ. ಪುಸ್ತಕದ ತಮ್ಮ ಕಿರು ಮುನ್ನುಡಿಯಲ್ಲಿ ಪ್ರೂಧೋನ್‌ರನ್ನು ಕೆಟ್ಟ ತತ್ತ್ವಶಾಸ್ತ್ರಜ್ಞ, ಕೆಟ್ಟ ಅರ್ಥಶಾಸ್ತ್ರಜ್ಞ ಎರಡೂ ಹೌದು ಎಂದು ಮಾರ್ಕ್ಸ್ ಲೇವಡಿ ಮಾಡುತ್ತಾರೆ. ಗ್ರಂಥದುದ್ದಕ್ಕೂ ಪ್ರೂಧೋನ್‌ರ ಅಜ್ಞಾನ, ಅರೆಬೆಂದ ತಿಳುವಳಿಕೆಯಿಂದ ಹುಟ್ಟಿದ ವಿಚಾರಗಳನ್ನು ವಿಮರ್ಶಿಸುತ್ತಾ ಸಮಾಜ, ಶ್ರಮಶಕ್ತಿ ಮತ್ತು ಉತ್ಪಾದನಾ ಸಂಬಂಧಗಳು, ಕೈಗಾರಿಕಾ ಉತ್ಪಾದನೆ, ಮೌಲ್ಯ ಮತ್ತು ವಿನಿಮಯ ಮೌಲ್ಯ ಕುರಿತಾದ ವಿಚಾರಗಳಲ್ಲಿರಬೇಕಾದ ಸ್ಪಷ್ಟತೆಗಳನ್ನು ಮಾರ್ಕ್ಸ್ ಎತ್ತಿ ತೋರಿಸುತ್ತಾರೆ. ಈ ಪುಸ್ತಕದ ಪ್ರಧಾನ ವಿಚಾರಗಳನ್ನು ಮಾರ್ಕ್ಸ್ ಅವರ ಮಾತುಗಳಲ್ಲೇ ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ:

ಪ್ರೂಧೋನ್‌ನ ಪ್ರಕಾರ ಸರಕಿನ ಮೌಲ್ಯದಲ್ಲಿ ಮೂರು ಅಂಶಗಳಿವೆ:

೧. ಉಪಯೋಗ ಮೌಲ್ಯ, ಅಂದರೆ ಉಪಯೋಗವನ್ನು ದೃಷ್ಟಿಯಲ್ಲಿಟ್ಟುಕೊಂಡು ಕೊಳ್ಳುವವನು ನಿರ್ಧರಿಸುವ ಸರಕಿನ ಬೆಲೆ.

೨. ವಿನಿಮಯವಾಗಬಲ್ಲ ಮೌಲ್ಯ. ಅಂದರೆ, ಉತ್ಪಾದನಾ ವೆಚ್ಚವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾರುವವನು ಸರಕಿಗೆ ನಿರ್ಧರಿಸುವ ಬೆಲೆ. ಮತ್ತು

೩. ಸಂಯೋಜಿತ ಮೌಲ್ಯ. ಅಂದರೆ, ಕೊಳ್ಳುವವನು ಮತ್ತು ಮಾರುವವನು ಇಬ್ಬರೂ ಒಮ್ಮತಕ್ಕೆ ಬರುವ ಸರಕಿನ ಬೆಲೆ. ಸ್ಪರ್ಧೆಯು ಸರಕಿನ ಉತ್ಪಾದನಾ ವೆಚ್ಚವನ್ನು ಪ್ರಭಾವಿಸುತ್ತದೆ.

ಉಪಯೋಗ ಮೌಲ್ಯ ಮತ್ತು ವಿನಿಮಯ ಮೌಲ್ಯಗಳು ಪರಸ್ಪರ ವಿರುದ್ಧವಾಗಿವೆ. ಅವು ವಿಲೋಮ ಅನುಪಾತದ ಸಂಬಂಧವನ್ನು ಹೊಂದಿವೆ. ಅಂದರೆ ವಸ್ತುವಿನ ಉಪಯೋಗ ಮೌಲ್ಯ ಹೆಚ್ಚಿದಷ್ಟೂ ದರ ವಿನಿಮಯ ಮೌಲ್ಯ ಕಡಿಮೆಯಾಗುತ್ತದೆ. ಇದೇ ಪ್ರೂಧೋನ್ ಹೇಳುವ ವಿನಿಮಯದ ಅನುಪಾತ ನಿಯಮ.

ಮೌಲ್ಯವು ವಿನಿಮಯದಿಂದ ಹುಟ್ಟುವಂತೆ ವಿನಿಮಯ ಮೌಲ್ಯವು ಬೇಡಿಕೆಯಿಂದ ಹುಟ್ಟುತ್ತದೆ ಎಂದು ಪ್ರೂಧೋನ್ ಹೇಳುತ್ತಾರೆ. ಅರ್ಥಶಾಸ್ತ್ರಜ್ಞರು ಈ ದ್ವಂದ್ವವನ್ನು ಗುರುತಿಸಿಲ್ಲ ಎಂದು ಬೇರೆ ಹೇಳುತ್ತಾರೆ. ಆದರೆ ಸಿಸ್‌ಮೊಂದಿ, ಲಾಡರ್ಡೇಲ್ ಮೊದಲಾದ ಅರ್ಥಶಾಸ್ತ್ರಜ್ಞರು ಇದನ್ನು ಗುರುತಿಸಿದ್ದಾರೆ ಎಂಬುದು ಪ್ರೂಧೋನ್‌ಗೆ ತಿಳಿದಿಲ್ಲ. ಬೇಡಿಕೆಗೆ ಅನುಸಾರವಾಗಿ ಮತ್ತು ಒಂದು ಉತ್ಪನ್ನದ ಸಮೃದ್ಧಿ ಅಥವಾ

ಅಭಾವದಿಂದಾಗಿ ವಿನಿಮಯ ಮೌಲ್ಯವು ಬೇರೆ ಬೇರೆಯಾಗಿರುತ್ತದೆ ಎಂಬುದು ಎಲ್ಲರಿಗೂ ಗೊತ್ತಿರುವ ಸರಳ ಸಂಗತಿ. ಆದರೂ ಪ್ರೂಧೋನ್ ಹೇಳುವಂತೆ ಮೌಲ್ಯವು ವಿನಿಮಯದಿಂದ ಅಥವಾ ಬೇಡಿಕೆಯಿಂದ ಹುಟ್ಟುವುದಿಲ್ಲ.

ಮುಖ್ಯವಾಗಿ, ಉಪಯೋಗ ಮೌಲ್ಯ ಮತ್ತು ವಿನಿಮಯ ಮೌಲ್ಯಗಳ ವೈರುಧ್ಯವನ್ನು ಗುರುತಿಸುವ ಮುಂಚೆ ಮೌಲ್ಯದ ಉಗಮ ಹೇಗಾಯಿತೆಂಬುದನ್ನು ಅರ್ಥಮಾಡಿಕೊಳ್ಳಬೇಕು. ಆದರೆ ಈ ಬಗ್ಗೆ ಪ್ರೂಧೋನ್‌ರಿಗೆ ಯಾವ ತಿಳುವಳಿಕೆಯೂ ಇಲ್ಲ.

ಪ್ರೂಧೋನ್ ಶ್ರಮವಿಭಜನೆಯಿಂದ ವಿನಿಮಯ ಏರ್ಪಡುತ್ತದೆ ಮತ್ತು ವಿನಿಮಯದಿಂದಾಗಿ ಮೌಲ್ಯವು ಏರ್ಪಡುತ್ತದೆ ಎನ್ನುತ್ತಾರೆ. ಆದರೆ ವಿನಿಮಯ ಮೌಲ್ಯವು ಸರಕಿಗೆ ಪೂರ್ವಸಿದ್ಧವಾದದ್ದು ಎಂದು ಮಾರ್ಕ್ಸ್ ಹೇಳುತ್ತಾರೆ.

ಪ್ರೂಧೋನ್ ಪ್ರಕಾರ ಮನುಷ್ಯರು ರಾಬಿನ್‌ಸನ್ ಕ್ರೂಸೋವಿನಂತೆ ಸಾಮಾಜಿಕ ನಂಟಿಲ್ಲದೆ, ಕೇವಲ ಬಿಡಿ ಬಿಡಿ ವ್ಯಕ್ತಿಗಳಾಗಿ ಇರುತ್ತಾರೆ. ಆದರೆ ಮನುಷ್ಯ ಹುಟ್ಟುವಾಗಲೇ ಸಮಾಜಜೀವಿ. ಅವರು ಸಹಜೀವಿಗಳಾಗಿ, ಸಹವರ್ತಿಗಳಾಗಿ ಏರ್ಪಡಿಸಿಕೊಳ್ಳುವ ಉತ್ಪಾದನಾ ಸಂಬಂಧಗಳು, ವಿವಿಧ ಕ್ರಿಯೆಗಳು, ಶ್ರಮವಿಭಜನೆ, ವಿನಿಮಯ ಎಲ್ಲವೂ ಮೊದಲೇ ಅಸ್ತಿತ್ವದಲ್ಲಿರುತ್ತವೆ. ವಸ್ತುಗಳ ಸಮೃದ್ಧಿಯು ತನ್ನಷ್ಟಕ್ಕೆ ತಾನೇ ಆಗುವುದಿಲ್ಲ, ಉತ್ಪಾದಕರಿಂದ ಆಗುತ್ತದೆ. ವಿನಿಮಯ ಮೌಲ್ಯವು ಬೇಡಿಕೆಯನ್ನನುಸರಿಸಿ ಬದಲಾಗುತ್ತದೆಯೇ ಹೊರತು ಬೇಡಿಕೆಯಿಂದಲೇ ಹುಟ್ಟುವುದಿಲ್ಲ.


ಯುವ ಕಾರ್ಲ್ ಮಾರ್ಕ್ಸ್

ವಿನಿಮಯ ಮೌಲ್ಯದಲ್ಲಿ ಅಡಕವಾಗಿರುವ ಸಾಮಾಜಿಕ ಮತ್ತು ಆರ್ಥಿಕ ಅನಿವಾರ್ಯತೆಗಳನ್ನು ಪ್ರೂಧೋನ್‌ರು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅವರ ದೃಷ್ಟಿಕೋನ ಆಧ್ಯಾತ್ಮಿಕವಾದದ್ದು, ಸಾಮಾಜಿಕವಲ್ಲ. ಆರ್ಥಿಕವೂ ಅಲ್ಲ.

ಪ್ರೂಧೋನ್ ಹೇಳುವ ಸಂಯೋಜಿತ ಮೌಲ್ಯವು ವಾಸ್ತವವಾಗಿ ಸಂಶ್ಲೇಷಿತ ಮೌಲ್ಯ. ಅದು ಮಾರುವವನ ಮತ್ತು ಕೊಳ್ಳುವವನ ಆತ್ಮಸಂತೋಷವನ್ನು, ವ್ಯಕ್ತಿಗತವಾದ ನಿರ್ಧಾರವನ್ನು ಅವಲಂಬಿಸಿಲ್ಲ. ಅವರ ಆರ್ಥಿಕ ಸಾಮರ್ಥ್ಯವನ್ನು ಅವಲಂಬಿಸಿದೆ. ಅವರು ಬದುಕುವ ಸಾಮಾಜಿಕ ವ್ಯವಸ್ಥೆಯು ನಿರ್ಧರಿಸುವ ಸ್ತರದಿಂದ ಅದು ನಿರ್ಧಾರವಾಗುತ್ತದೆ. ಸಂಯೋಜಿತ ಮೌಲ್ಯವು ಪ್ರೂಧೋನ್‌ರ ಆವಿಷ್ಕಾರವೂ ಅಲ್ಲ. ಒಂದು ಉತ್ಪನ್ನದ ಸಂಯೋಜಿತ ಮೌಲ್ಯವು ಆ ಮೌಲ್ಯದಲ್ಲಿ ಅಂತರ್ಗತವಾಗಿರುವ ಶ್ರಮ–ಕಾಲದಿಂದ ಉಂಟಾದ ಮೌಲ್ಯವೇ ಆಗಿರುತ್ತದೆ ಎಂದು ಅಸ್ಪಷ್ಟವಾಗಿ ಆ್ಯಡಂ ಸ್ಮಿತ್ ಮತ್ತು ಸ್ಪಷ್ಟವಾಗಿ ರಿಕಾರ್ಡೋ ಹಿಂದೆಯೇ ಹೇಳಿದ್ದಾರೆ.

ರಿಕಾರ್ಡೋ ಮತ್ತು ಆ್ಯಡಂ ಸ್ಮಿತ್ ಅವರ ವಿಚಾರಗಳನ್ನು ಹಾಗೂ ಅವರ ಗ್ರಹಿಕೆ ಮತ್ತು ತೀರ್ಮಾನಗಳಲ್ಲಿನ ತಪ್ಪುಗಳನ್ನು ಮಾರ್ಕ್ಸ್ ಚರ್ಚಿಸುತ್ತಾರೆ. ರಿಕಾರ್ಡೋ ಮತ್ತು ಪ್ರೂಧೋನ್‌ರಿಗೆ ಇರುವ ಪ್ರಧಾನ ವ್ಯತ್ಯಾಸವೆಂದರೆ – ರಿಕಾರ್ಡೋ ಅವರ ಭಾಷೆ ಸರಳ, ಸ್ಪಷ್ಟ ಮತ್ತು ಕರಾರುವಾಕ್ಕಾದ್ದು. ಪ್ರೂಧೋನ್‌ರ ಭಾಷೆ ಆಲಂಕಾರಿಕವಾದ್ದು.

ಸರಕುಗಳಲ್ಲಿನ ಮೌಲ್ಯವನ್ನು ಅದರಲ್ಲಿನ ಶ್ರಮದ ಪ್ರಮಾಣದಿಂದ ಅಳೆಯುವುದು ಮತ್ತು ಸರಕುಗಳಲ್ಲಿನ ಮೌಲ್ಯವನ್ನು ಅದರಲ್ಲಿನ ಶ್ರಮದ ಮೌಲ್ಯದಿಂದ ಅಳೆಯುವುದು ಎರಡೂ ಒಂದೇ ಎನ್ನುತ್ತಾರೆ ಪ್ರೂಧೋನ್. ಆದರೆ ಎರಡೂ ಒಂದೇ ಅಲ್ಲ. ಶ್ರಮದ ಮೌಲ್ಯ, ಅಂದರೆ ಶ್ರಮಶಕ್ತಿಯ ಮೌಲ್ಯವು ಯಾವುದೇ ಸರಕಿನ ಅಳತೆಗೋಲಾಗುವುದು ಸಾಧ್ಯವಿಲ್ಲ. ಹಾಗೆಯೇ ಮೌಲ್ಯದ ಮಾಪಕವೂ ಆಗುವುದಿಲ್ಲ.

ಪ್ರೂಧೋನ್ ಶ್ರಮವು ಒಂದು ಸರಕು ಅಲ್ಲ, ಅದಕ್ಕೆ ಯಾವುದೇ ಮೌಲ್ಯ ಇರುವುದು ಸಾಧ್ಯವಿಲ್ಲ ಎನ್ನುತ್ತಾರೆ. ಸರಕಿನ ಮೌಲ್ಯವು ದರದಲ್ಲಿ ಅಡಕವಾಗಿರುವ ಶ್ರಮಕಾಲದಲ್ಲಿದೆ ಎಂದು ಗುರುತಿಸಿದ ರಿಕಾರ್ಡೋಗೆ ಶ್ರಮವೂ ಒಂದು ಸರಕು ಮತ್ತು ಅದರ ಮೌಲ್ಯವು ಶ್ರಮಶಕ್ತಿಯ ಉತ್ಪಾದನೆಗೆ ಬಳಕೆಯಾದ ಜೀವನಾವಶ್ಯಕ ವಸ್ತುಗಳ ಮೌಲ್ಯದಿಂದ ಬರುತ್ತದೆ ಎಂಬುದು ತಿಳಿದಿರಲಿಲ್ಲ. ಮಾರ್ಕ್ಸ್ ಅದನ್ನು ಗುರುತಿಸಿದ್ದಾರೆ. ಶ್ರಮವು ಎಲ್ಲ ಸರಕುಗಳನ್ನು ಉತ್ಪಾದಿಸುವ ಮೂಲ ಸರಕು.

ಪ್ರೂಧೋನ್ ತಮ್ಮ ಭಾಷಾ ವ್ಯಾಕರಣಶುದ್ಧಿಯ ಮೂಲಕ ಸಮಾಜವನ್ನು ಸಮಸ್ಯಾರಹಿತವನ್ನಾಗಿ ಮಾಡಬಹುದೆಂಬ ತಲೆಕೆಳಗಾದ ದೃಷ್ಟಿಕೋನದವರು. ವ್ಯಕ್ತಿಪಾರಮ್ಯದ, ವ್ಯಕ್ತಿಗತ ದೃಷ್ಟಿಯ ಪ್ರೂಧೋನ್ ಸಮಾಜವನ್ನು ಸಮಷ್ಟಿ ಪುರುಷ ಅಥವಾ 'ಸಾಮೂಹಿಕ ವ್ಯಕ್ತಿ' ಎಂದು ಪರಿಗಣಿಸುತ್ತಾರೆ. ಎಲ್ಲಾ ಉತ್ಪಾದಕರನ್ನು ಒಬ್ಬನೇ ಉತ್ಪಾದಕನನ್ನಾಗಿ, ಎಲ್ಲಾ ಬಳಕೆದಾರರನ್ನು ಒಬ್ಬನೇ ಬಳಕೆದಾರನನ್ನಾಗಿ ಎರಕಹೊಯ್ದು ನೋಡುತ್ತಾರೆ. ವರ್ಗ ಹಿತಾಸಕ್ತಿ, ವರ್ಗ ವೈರುಧ್ಯ ಮುಂತಾದ ಸಾಮಾಜಿಕ–ಆರ್ಥಿಕ ಮನುಷ್ಯ ಸಂಬಂಧಗಳು ಅವರಿಗೆ ಕಾಣಿಸುವುದೇ ಇಲ್ಲ.

ನಾಗರಿಕತೆಯ ಪ್ರಾರಂಭದ ಕಾಲದಲ್ಲಿ ಉತ್ಪಾದನೆಯು ವೈರುಧ್ಯಗಳ ಆಧಾರದ ಮೇಲೆ ವ್ಯವಸ್ಥಿತಗೊಳ್ಳುತ್ತದೆ. ಶ್ರೇಣಿ, ಸ್ತರ, ವರ್ಗಗಳ ವೈರುಧ್ಯಗಳಿಂದ ಆರಂಭಿಸಿ ಕಡೆಯಲ್ಲಿ ಸಂಚಿತ ಶ್ರಮ (ಬಂಡವಾಳ) ಮತ್ತು ಕ್ರಿಯಾತ್ಮಕ ಶ್ರಮ (ಜೀವಂತ ಶ್ರಮ)ಗಳ ವೈರುಧ್ಯಕ್ಕೆ ಬಂದು ಮುಟ್ಟುತ್ತದೆ. ವೈರುಧ್ಯವಿಲ್ಲದೆ ಪ್ರಗತಿಯಿಲ್ಲ. ಈ ನಿಯಮಕ್ಕೆ ಅನುಸಾರವಾಗಿಯೇ ನಾಗರಿಕತೆ ಇಂದಿನವರೆಗೆ ಬೆಳೆದು ಬಂದಿದೆ. ಇಂದಿನವರೆಗಿನ ಉತ್ಪಾದನಾ ಶಕ್ತಿಗಳು ಬೆಳೆದುಬಂದಿರುವುದೂ ಈ ವರ್ಗ ವೈರುಧ್ಯ ವ್ಯವಸ್ಥೆಯಿಂದಾಗಿಯೇ.

ಒಂದು ವಸ್ತುವು ಅಗ್ಗವಾಗಿದೆ ಎಂದರೆ ಅದರ ಉಪಯೋಗ ಮೌಲ್ಯವು ಹೆಚ್ಚಿದೆ ಎಂದು ಪ್ರೂಧೋನ್ ಪ್ರತಿಪಾದಿಸುತ್ತಾರೆ. ಮಾರ್ಕ್ಸ್, ಅದು ಹಾಗಲ್ಲ; ಅದರ ಅರ್ಥ, ಆ ಅಗ್ಗದವಸ್ತುವನ್ನು ಶ್ರಮಿಕರು, ಬಡವರು ಬಳಸುತ್ತಾರೆ ಎಂದು ಸ್ಪಷ್ಟಪಡಿಸುತ್ತಾರೆ. ಹೆಂಡವು ಧಾನ್ಯಗಳಿಗಿಂತ ಹೆಚ್ಚು ಮಾರಾಟವಾಗುತ್ತದೆ ಎಂದರೆ ಅದು ಧಾನ್ಯಕ್ಕಿಂತ ಹೆಚ್ಚು ಉಪಯುಕ್ತ, ಅಂದರೆ ಅದರ ಜೀವನಾವಶ್ಯಕ ಉಪಯುಕ್ತತೆ ಹೆಚ್ಚಿದೆ ಎಂದಲ್ಲ.

ಬಡತನದ ಅಡಿಪಾಯದ ಮೇಲೆ ನಿರ್ಮಿತವಾದ ಸಮಾಜದಲ್ಲಿ ಅಗ್ಗದ ಉತ್ಪಾದನೆಗಳು ಅತಿ ಹೆಚ್ಚು ಜನರಿಂದ ಬಳಸಲ್ಪಡುತ್ತವೆ. (ಆ ಅತಿ ಹೆಚ್ಚು ಜನರು ಶ್ರಮಿಕರೇ, ಬಡವರೇ ಆಗಿರುತ್ತಾರೆ)

ಹೆಗೆಲ್ ಪ್ರತಿಪಾದಿಸಿದ 'ವಿಧಾನ'ವನ್ನು ಪ್ರೂಧೋನ್ ಅರೆಬರೆ ತಿಳುವಳಿಕೆಯಿಂದ ರಾಜಕೀಯ ಅರ್ಥಶಾಸ್ತ್ರಕ್ಕೆ ಅನ್ವಯಿಸುವುದನ್ನು ಮಾರ್ಕ್ಸ್ ಕಟುವಾಗಿ ಟೀಕಿಸುತ್ತಾರೆ. 'ಇಂಗ್ಲಿಷ್ ಅರ್ಥಶಾಸ್ತ್ರಜ್ಞ ರಿಕಾರ್ಡೋ ಮನುಷ್ಯರನ್ನು ಹ್ಯಾಟ್‌ಗಳನ್ನಾಗಿ ಪರಿವರ್ತಿಸಿದರೆ ಜರ್ಮನ್ ತತ್ತ್ವಶಾಸ್ತ್ರಜ್ಞ ಹೆಗೆಲ್ ಹ್ಯಾಟ್‌ಗಳನ್ನು ಆಲೋಚನೆಗಳನ್ನಾಗಿ ಪರಿವರ್ತಿಸುತ್ತಾನೆ' ಎಂದು ಲೇವಡಿ ಮಾಡುವ ಮಾರ್ಕ್ಸ್, ಪ್ರೂಧೋನ್‌ರನ್ನು ರಾಜಕೀಯ ಅರ್ಥಶಾಸ್ತ್ರದಲ್ಲಿ ಪರಮಾರ್ಥವನ್ನು ಕಂಡುಕೊಳ್ಳುವ 'ಕೆಸ್ನೆ' ಎಂದು ಅಪಹಾಸ್ಯ ಮಾಡುತ್ತಾರೆ.

ಫ್ರಾನ್ಸಿನ ರಾಜಸತ್ತೆಯ ಅವನತಿಯ ಪ್ರತೀಕವಾದ ೧೫ನೆಯ ಲೂಯಿಯ ಖಾಸಾ ವೈದ್ಯ ಕೆಸ್ನೆ. ಅವನೇ 'ಫ್ರಾನ್ಸಿನ ಮೊದಲ ಅರ್ಥಶಾಸ್ತ್ರಜ್ಞ ಮತ್ತು ರಾಜಕೀಯ ಅರ್ಥಶಾಸ್ತ್ರದಲ್ಲಿ ವಿಜ್ಞಾನವನ್ನು ಕಂಡುಕೊಂಡ ಅರ್ಥಶಾಸ್ತ್ರಜ್ಞ' ಎಂದು ಮಾರ್ಕ್ಸ್ ಕಟಕಿಯಾಡುತ್ತಾರೆ. ಕೆಸ್ನೆಯ ಆರ್ಥಿಕ ಕೋಷ್ಟಕದಷ್ಟೇ ಅಸ್ಪಷ್ಟವಾಗಿರುವ ಪ್ರೂಧೋನ್‌ರ ಪರಮಾರ್ಥದಲ್ಲಿ ಅಡಕವಾಗಿರುವ 'ವೈರುಧ್ಯವಿಧಾನ'ವನ್ನು ಗ್ರಹಿಸಲು ಮಾರ್ಕ್ಸ್ ಒಟ್ಟು ಏಳು ಅವಲೋಕನಗಳ ಮೂಲಕ ಬಯಲಿಗೆಳೆದು, ಅವರ ಚಿಂತನೆಯ ತೀವ್ರ ಮಿತಿಗಳನ್ನು ಪಟ್ಟಿಮಾಡುತ್ತಾರೆ.

ಪ್ರೂಧೋನ್‌ರು ಇತಿಹಾಸವನ್ನು ಕಾಲಾನುಕ್ರಮಣಿಕೆಯಲ್ಲಿ ನೋಡದೆ

ವಿಚಾರಗಳ ಅನುಕ್ರಮದಲ್ಲಿ ನೋಡುತ್ತಾರೆ. ಶೋಷಣಾತ್ಮಕ ಉತ್ಪಾದನೆ, ಶ್ರಮವಿಭಜನೆ, ಹಣ, ಸಾಲ ಇತ್ಯಾದಿಗಳ ಸಂಬಂಧಗಳನ್ನು ಸ್ಥಿರ, ಅಚಲ ಮತ್ತು ಶಾಶ್ವತ ಪ್ರವರ್ಗಗಳೆಂದು ಅರ್ಥಶಾಸ್ತ್ರಜ್ಞರು ಗುರುತಿಸುತ್ತಾರೆ. ಅವರು ಈ ಸಂಬಂಧಗಳಲ್ಲಿ ಉತ್ಪಾದನೆಯು ಸಾಧ್ಯವಾಗುವುದು ಹೇಗೆ ಎಂದು ವಿವರಿಸುತ್ತಾರೆ. ಆದರೆ ಈ ಸಂಬಂಧಗಳು ಉಂಟಾಗಿದ್ದು ಹೇಗೆ ಎಂದು ಹೇಳುವುದಿಲ್ಲ. ಈ ಸಂಬಂಧಗಳು ಹುಟ್ಟಲು ಕಾರಣವಾದ ಐತಿಹಾಸಿಕ ಸಂದರ್ಭಗಳನ್ನು ಪರಿಗಣಿಸುವುದಿಲ್ಲ. ಪ್ರೂಧೋನ್ ಈ ಸಂಬಂಧಗಳನ್ನು ಕೇವಲ ಪ್ರವರ್ಗಗಳು, ಸಿದ್ಧಾಂತಗಳು ಮತ್ತು ಅಮೂರ್ತ ವಿಚಾರಗಳು ಎಂದು ತಪ್ಪಾಗಿ ತಿಳಿದುಕೊಂಡು ಆಲೋಚನೆಗಳನ್ನು ಒಂದು ಕ್ರಮದಲ್ಲಿ ಜೋಡಿಸುತ್ತಾರೆ. ಚೈತನ್ಯ ಮತ್ತು ಕ್ರಿಯಾತ್ಮಕವಾದ ಮನುಷ್ಯನೇ ಅರ್ಥಶಾಸ್ತ್ರದ ವಸ್ತು. ಪ್ರೂಧೋನ್ ತಾತ್ತ್ವಿಕ ನಂಬಿಕೆಗಳೇ ಅರ್ಥಶಾಸ್ತ್ರದ ವಸ್ತು ಎನ್ನುತ್ತಾರೆ.


ಹೆಗೆಲ್


ಪಿಯರ್ ಜೋಸೆಫ್ ಪ್ರೂಧೋನ್

ಭಾವನಾವಾದಿಯಾದ ಹೆಗೆಲ್ ಎಲ್ಲಾ ವಸ್ತುಗಳನ್ನೂ ಒಂದು ಪ್ರಭೇದಕ್ಕೆ ಇಳಿಸಿ ವಸ್ತುಗಳನ್ನು ಅಭೌತಿಕವಾಗಿಸಿದರು. ಪ್ರೂಧೋನ್ ರಾಜಕೀಯ ಅರ್ಥಶಾಸ್ತ್ರವನ್ನು ಹಾಗೆ ಇಳಿಸಲು ಯತ್ನಿಸಿದ್ದಾರೆ. ಹೆಗೆಲ್‌ನ ವೈರುಧ್ಯವಿಧಾನದಲ್ಲಿ ಕಥನ, ಪ್ರತಿಕಥನ ಅಥವಾ ವಿರುದ್ಧ ಕಥನ ಮತ್ತು ಸಂಶ್ಲೇಷಿತ ಕಥನಗಳ ತ್ರಿವಳಿಯಿದೆ. ಪ್ರೂಧೋನ್ ಇದನ್ನು ರಾಜಕೀಯ ಅರ್ಥಶಾಸ್ತ್ರದ ಪ್ರಭೇದಗಳಿಗೆ ಅನ್ವಯಿಸಿ ತ್ರಿವಳಿಯ ಬದಲು ದ್ವಿವಳಿ ಕ್ರಮಕ್ಕೆ ಇಳಿಸುತ್ತಾರೆ. ಅವರ ಪ್ರಕಾರ ವೈರುಧ್ಯವೆಂದರೆ ಎಲ್ಲದರಲ್ಲೂ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಇರುತ್ತವೆ ಎಂಬುದನ್ನು ಗುರುತಿಸುವುದು ಮಾತ್ರ. ಅದರಲ್ಲಿ ಒಳ್ಳೆಯದನ್ನು ಮಾತ್ರ ಆರಿಸಿಕೊಂಡು ಕೆಟ್ಟದ್ದನ್ನು ತಿರಸ್ಕರಿಸಬೇಕೆನ್ನುತ್ತಾರೆ. ಅವರ ಗ್ರಹಿಕೆಯಲ್ಲಿ, ಗತಿತಾರ್ಕಿಕ ಚಲನೆ ಎಂದರೆ ಒಳ್ಳೆಯದು ಮತ್ತು ಕೆಟ್ಟದ್ದರ ನಡುವಿನ ತಾರ್ಕಿಕ ವ್ಯತ್ಯಾಸ ಮಾತ್ರ. ಆದರೆ ವೈರುಧ್ಯವಿಲ್ಲದೆ ಪ್ರಗತಿಯಿಲ್ಲ ಎಂಬುದು ಅವರಿಗೆ ತಿಳಿಯದು.

ಯಾವುದೇ ವ್ಯವಸ್ಥೆಯ ಉತ್ಪಾದನೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಅದನ್ನು ಸಂಘರ್ಷದ ತಳಪಾಯದ ಮೇಲೆ ಕಟ್ಟಿದ ಉತ್ಪಾದನಾ ವಿಧಾನ ಎಂದೇ ಪರಿಗಣಿಸಬೇಕು. ಮಾರ್ಕ್ಸ್ ಮುಂದೆ ತಮ್ಮ 'ಬಂಡವಾಳ' ಕೃತಿಯಲ್ಲಿ ಸವಿಸ್ತಾರವಾಗಿ ಮಂಡಿಸುವ ವಿಚಾರಗಳನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಮನುಷ್ಯರು ವಿವಿಧ ಬಗೆಯ ಬಟ್ಟೆಗಳನ್ನು ಉತ್ಪಾದಿಸಿದಂತೆ ಸಾಮಾಜಿಕ ಸಂಬಂಧಗಳನ್ನೂ ಅವರೇ ಉತ್ಪಾದಿಸುತ್ತಾರೆ. ಸಾಮಾಜಿಕ ಸಂಬಂಧಗಳು ಉತ್ಪಾದನಾ ಸಂಬಂಧಗಳೊಂದಿಗೆ ತಳಕುಹಾಕಿಕೊಂಡಿವೆ. ಕೈಮಗ್ಗವು ಊಳಿಗಮಾನ್ಯ ಪ್ರಭುವನ್ನು ಕೊಡುತ್ತದೆ. ಉಗಿ ಯಂತ್ರವು ಬಂಡವಾಳಶಾಹಿಯನ್ನು ಕೊಡುತ್ತದೆ.

ಅಂದರೆ, ಭೌತಿಕ ಉತ್ಪಾದನೆಗೆ ಅನುಸಾರವಾಗಿ ಸಾಮಾಜಿಕ ಸಂಬಂಧ, ಅದಕ್ಕನುಸಾರವಾದ ಸಿದ್ಧಾಂತ, ವಿಚಾರ ಮತ್ತು ಪ್ರಭೇದಗಳನ್ನು ಮನುಷ್ಯರು ಸೃಷ್ಟಿಸಿಕೊಳ್ಳುತ್ತಾರೆ. ಇವೆಲ್ಲಾ ಅನಂತವಲ್ಲ, ಚಾರಿತ್ರಿಕ ಮತ್ತು ಬದಲಾವಣೆಗೆ ಒಳಪಡುವಂಥವು. ಆದರೆ ಪ್ರೂಧೋನ್ ಸಾಮಾಜಿಕ ಸಂಬಂಧಗಳನ್ನು ವಿಚಾರಗಳ ನಡುವಿನ ಸಂಬಂಧವನ್ನಾಗಿ ನೋಡುತ್ತಾರೆ.

ಬೂರ್ಷ್ವಾ ವರ್ಗವು ಹುಟ್ಟುಹಾಕುವ ಉತ್ಪಾದನಾ ಸಂಬಂಧಗಳು ಸರಳ ಮತ್ತು ಏಕರೂಪದ್ದಾಗಿರದೆ ದ್ವಂದ್ವಾತ್ಮಕ ಸಂಬಂಧಗಳಾಗಿರುತ್ತವೆ ಎಂದು ಮಾರ್ಕ್ಸ್ ಹೇಳುತ್ತಾರೆ. ಯಾವ ಸಂಬಂಧಗಳ ನಡುವೆ ಸಂಪತ್ತಿನ ಸೃಷ್ಟಿಯಾಗುತ್ತದೆಯೋ ಅವೇ ಸಂಬಂಧಗಳಿಂದ ಬಡತನವೂ ಉತ್ಪತ್ತಿಯಾಗುತ್ತದೆ. ಈ ಸಂಬಂಧಗಳು ಉತ್ಪಾದನಾ ಶಕ್ತಿಗಳನ್ನು ಹುಟ್ಟಿಸುತ್ತಲೇ ದಮನವನ್ನೂ ಉತ್ಪಾದಿಸುತ್ತವೆ. ಈ ಸಂಬಂಧಗಳು ಬೂರ್ಷ್ವಾ ಸಂಪತ್ತನ್ನು, ಅಂದರೆ ಬೂರ್ಷ್ವಾವರ್ಗದ ಸಂಪತ್ತನ್ನು, ಉತ್ಪಾದಿಸುತ್ತವೆ.

ಈ ವಿವಿಧ ಪಂಥಗಳ ಅರ್ಥಶಾಸ್ತ್ರಜ್ಞರಲ್ಲಿ 'ವಿಧಿವಾದೀ ಅರ್ಥಶಾಸ್ತ್ರಜ್ಞರು' ಎಂಬ ಒಂದು ಬಗೆಯಿದೆ. ಬೂರ್ಷ್ವಾ ಉತ್ಪಾದನೆಯಲ್ಲಿನ ನ್ಯೂನತೆಗಳ ಕಡೆ ಇವರು ಗಮನ ಕೊಡುವುದಿಲ್ಲ. ಸಂಪತ್ತನ್ನು ಸೃಷ್ಟಿಸುವ ಶ್ರಮಿಕರ ವ್ಯಥೆಗಳಿಗೆ ಬೂರ್ಷ್ವಾಗಳಂತೆ ಇವರೂ ಕುರುಡರು. ಈ 'ವಿಧಿವಾದೀ ಅರ್ಥಶಾಸ್ತ್ರಜ್ಞ'ರಲ್ಲಿ ಶಾಸ್ತ್ರೀಯ ಪಂಥ ಮತ್ತು ರಮ್ಯಪಂಥ ಎಂದು ಎರಡು ವಿಧಗಳಿವೆ. ರಿಕಾರ್ಡೋ ಮತ್ತು ಆ್ಯಡಂ ಸ್ಮಿತ್ ಶಾಸ್ತ್ರೀಯ ಪಂಥಕ್ಕೆ ಸೇರಿದವರು. ಇವರು ಬೂರ್ಷ್ವಾ ಆರ್ಥಿಕತೆಯ ಚರಿತ್ರಕಾರರು ಮತ್ತು ಸಮರ್ಥಕರು. ಬಡತನವನ್ನು ಕೈಗಾರಿಕೀಕರಣದ ಅನಿವಾರ್ಯ ಮತ್ತು ಸ್ವಾಭಾವಿಕ ಪರಿಣಾಮವೆಂದು ಪರಿಗಣಿಸುವವರು.

ರಮ್ಯಪಂಥದ ಅರ್ಥಶಾಸ್ತ್ರಜ್ಞರು ಸಂಪತ್ತಿನ ಜೊತೆಗೆ ಬಡತನವೂ ತೀವ್ರವಾಗಿ ಬೆಳೆದ ವರ್ತಮಾನಕ್ಕೆ ಸೇರಿದವರು. ಅವರಿಗೆ ಶ್ರಮಿಕರೆಂದರೆ ಸಂಪತ್ತನ್ನು ಉತ್ಪಾದಿಸುವ ಮಾನವ ಯಂತ್ರಗಳೆಂಬ ತಿರಸ್ಕಾರ.

ಮಾನವತಾವಾದಿ ಪಂಥದವರು ಶೋಷಕರ ನಡುವಿನ ಸ್ಪರ್ಧೆಯನ್ನು ಖಂಡಿಸುವ, ಶ್ರಮಿಕರ ಕಷ್ಟಗಳಿಗೆ ಮರುಗುವ, ವೈರುಧ್ಯಗಳನ್ನು ಸಾಧ್ಯವಾದಷ್ಟು ಕಡಿಮೆ ಮಾಡಬಯಸುವ, ಆತ್ಮಸಾಕ್ಷಿಯ ಅರ್ಥಶಾಸ್ತ್ರಜ್ಞರು.

ಮಾನವಪ್ರೇಮವಾದಿ ಅಥವಾ ದಾನಶೀಲ ಪಂಥದವರು ಮಾನವತಾವಾದಿ ಪಂಥದ ಪರಿಪೂರ್ಣ ರೂಪ. ವೈರುಧ್ಯರಹಿತವಾಗಿದ್ದು, ಬೂರ್ಷ್ವಾ ಸಂಬಂಧಗಳಲ್ಲಿನ ಪ್ರತ್ಯೇಕತೆಗಳನ್ನು ಉಳಿಸಿಕೊಂಡೂ ಬೂರ್ಷ್ವಾ ಆಗದೆ, ಆದರ್ಶ ವಾಸ್ತವವನ್ನು ಸಾಕ್ಷಾತ್ಕರಿಸಿಕೊಳ್ಳಬಯಸುವ, ಮಹಾಬೂರ್ಷ್ವಾಗಳ ಪಂಥ ಇದು. ಎಲ್ಲ ಮನುಷ್ಯರನ್ನೂ ಇಂಥ ಬೂರ್ಷ್ವಾಗಳನ್ನಾಗಿಸುವ ಯತ್ನ ಈ ಪಂಥದ್ದು.

ಅರ್ಥಶಾಸ್ತ್ರಜ್ಞರು ಬೂರ್ಷ್ವಾವರ್ಗದ ವೈಜ್ಞಾನಿಕ ಪ್ರತಿನಿಧಿಗಳಾದರೆ, ಸಮಾಜವಾದಿ ಮತ್ತು ಸಮತಾವಾದಿ ಪಂಥಗಳ ಜನರು ಶ್ರಮಿಕ ವರ್ಗದ ಸಿದ್ಧಾಂತಿಗಳು. ಇವರು ಬಡವರಲ್ಲಿನ ಬಡತನವನ್ನು ಮಾತ್ರ ನೋಡಿದರೆ ಹುಸಿ ಆದರ್ಶವಾದಿಗಳು. ಅದರ ಕ್ರಾಂತಿಕಾರಕ ಮತ್ತು ವಿಸ್ಫೋಟಕ ಗುಣವನ್ನು ಗುರುತಿಸುವ ಹಂತವನ್ನು ಮುಟ್ಟಿದಾಗ ಮಾತ್ರ ಅವರ ಸಿದ್ಧಾಂತಗಳು ಕೇವಲ ತಾತ್ತ್ವಿಕವಾಗಿ ಉಳಿಯದೆ ಕ್ರಾಂತಿಕಾರಿಯಾಗುತ್ತವೆ.

ಪ್ರೂಧೋನ್ ಬೂರ್ಷ್ವಾ ಅರ್ಥಶಾಸ್ತ್ರಜ್ಞರು ಮತ್ತು ಸಮಾಜವಾದಿಗಳಿಂದ ತಮಗೆ ಬೇಕಾದುದನ್ನು ಮಾತ್ರ ಬಳಸಿಕೊಂಡು ಒಂದು ಸೂತ್ರವನ್ನು ರೂಪಿಸಲು ವಿಜ್ಞಾನವನ್ನು ಬಳಸಿಕೊಳ್ಳುತ್ತಾರೆ. ಅವರಿಗಿಂತ ಉನ್ನತ ಸ್ಥಾನದಲ್ಲಿರಲು ಹೋಗಿ ಕೆಟ್ಟ ಅರ್ಥಶಾಸ್ತ್ರಜ್ಞರಾಗಿ, ಕೆಟ್ಟ ತತ್ತ್ವಶಾಸ್ತ್ರಜ್ಞರಾಗಿ,

ಕೆಳಸ್ತರಕ್ಕೆ ಕುಸಿದು ಒಬ್ಬ ವ್ಯಕ್ತಿವಾದಿ, ಅಧ್ಯಾತ್ಮವಾದಿ ಪೆಟಿ ಬೂರ್ಶ್ವಾ ಆಗಿ ಉಳಿಯುತ್ತಾರೆ.

ಶ್ರಮವಿಭಜನೆಯನ್ನು ಕುರಿತಂತೆ ಪ್ರೂಧೋನ್‌ರಿಗೆ ತಪ್ಪುಗ್ರಹಿಕೆ ಇದೆ. ಅದು ಒಂದು ಚಿರಂತನ ನಿಯಮ, ಸರಳ ಅಮೂರ್ತ ಪ್ರಭೇದ ಎಂದು ಪ್ರೂಧೋನ್ ಸರಳ ಗೊಳಿಸುತ್ತಾರೆ. ಅವರ ಪ್ರಕಾರ ಶ್ರಮವಿಭಜನೆಗೆ ಸಂಬಂಧಿಸಿದ ಎಲ್ಲವನ್ನೂ ವಿಭಜನೆ ಎಂಬ ಪದದ ವ್ಯಾಖ್ಯಾನದ ಮೂಲಕ ವಿಶದೀಕರಿಸಬಹುದು. ಆದರೆ ನಾನಾ ಯುಗಗಳನ್ನು ದಾಟಿಕೊಂಡು ಬಂದಿರುವ ಶ್ರಮ ವಿಭಜನೆ ಸರಳ ವಿವರಣೆ, ವಿಶ್ಲೇಷಣೆಗಳಿಗೆ ದಕ್ಕುವಂಥದ್ದಲ್ಲ.

ಶ್ರಮವಿಭಜನೆಯಿಂದಾದ ಅನುಕೂಲ–ಪ್ರತಿಕೂಲ ಗಳನ್ನು ಗಮನಿಸಿದ ಬೂರ್ಶ್ವಾ ಅರ್ಥಶಾಸ್ತ್ರಜ್ಞರು ಅದರ ಅನುಕೂಲಗಳನ್ನು ಎತ್ತಿಹಿಡಿದಿದ್ದಾರೆ ಎಂದು ಪ್ರೂಧೋನ್ ಹೇಳುತ್ತಾರೆ. ಇದು ಸತ್ಯವಲ್ಲ ಎಂದು ಮಾರ್ಕ್ಸ್ ಸಿಸ್‌ಮೋಂದಿಯ ಉದಾಹರಣೆಯೊಂದಿಗೆ ಹೇಳುತ್ತಾರೆ. ಶ್ರಮವಿಭಜನೆಯು ಜಾತಿ, ಶ್ರೇಣೀಕೃತ ವ್ಯವಸ್ಥೆ ಮತ್ತು ಅನುಕೂಲವಂತರನ್ನು ಸೃಷ್ಟಿಸಿದೆ ಎಂದು ಪ್ರೂಧೋನ್ ಹೇಳುತ್ತಾರೆ. ಅವರಿಗೆ ಶ್ರಮವಿಭಜನೆಯ ಚಾರಿತ್ರಿಕ ಅನಿವಾರ್ಯತೆಯು ಕಾಣಿಸುವುದಿಲ್ಲ. ಏಕೆಂದರೆ ಅವರು ಶ್ರಮವಿಭಜನೆಯನ್ನು ತತ್ತ್ವಶಾಸ್ತ್ರದ ಚೌಕಟ್ಟಿನಲ್ಲಿ ಅರ್ಥಮಾಡಿಕೊಳ್ಳಲು ಯತ್ನಿಸುತ್ತಾರೆ.

ಯಂತ್ರಗಳು ಶ್ರಮವಿಭಜನೆಯನ್ನು ಒಂದುಗೂಡಿಸಿದವು ಎಂದು ಪ್ರೂಧೋನ್ ಹೇಳುತ್ತಾರೆ. ಆದರೆ ಯಂತ್ರಗಳು ಸಲಕರಣೆಗಳನ್ನು ಒಟ್ಟುಗೂಡಿಸಿದವು, ಶ್ರಮವಿಭಜನೆಯನ್ನಲ್ಲ ಎಂದು ಮಾರ್ಕ್ಸ್ ಸ್ಪಷ್ಟಪಡಿಸುತ್ತಾರೆ. ಪ್ರೂಧೋನ್ ಹೇಳುವಂತೆ ಯಂತ್ರ ಒಂದು ಆರ್ಥಿಕ ಪ್ರಭೇದವಲ್ಲ. ಅದು ನೇಗಿಲನ್ನು ಎಳೆಯುವ ಎತ್ತಿನ ಹಾಗೆ ಒಂದು ಸಾಧನ.

ಮಾರುಕಟ್ಟೆಯ ಬೆಳವಣಿಗೆ, ಬಂಡವಾಳದ ಶೇಖರಣೆ, ವರ್ಗಗಳ ಸಾಮಾಜಿಕ ಸ್ಥಾನಗಳ ಬದಲಾವಣೆ ಮತ್ತು ಆದಾಯದ ಮೂಲವನ್ನು ಕಳೆದುಕೊಂಡ ಬೃಹತ್ ಸಂಖ್ಯೆಯ ಜನ ಇವೆಲ್ಲವೂ 'ತಯಾರಿಕಾ ಕೈಗಾರಿಕೆ'ಯ ಪೂರ್ವಾಗತ್ಯಗಳು. ಆಧುನಿಕ ಕಾರ್ಯಾಗಾರದೊಳಕ್ಕೆ ಜನರು ಕೆಲಸಕ್ಕೆ ಬರುವಂತೆ ಮಾಡಿದ್ದು ವ್ಯಾಪಾರಿ, ಪ್ರೂಧೋನ್ ಹೇಳುವಂತೆ ಸಮಾನರ ನಡುವಿನ ಸ್ನೇಹ–ಒಪ್ಪಂದಗಳಲ್ಲ.

ಉತ್ಪಾದನೆಯ ಉಪಕರಣಗಳ ಕೇಂದ್ರೀಕರಣ ಮತ್ತು ಶ್ರಮವಿಭಜನೆ ಇವು ಒಂದನ್ನೊಂದು ಬಿಟ್ಟಿರಲಾಗದ ಅಂಶಗಳು, ರಾಜಕೀಯ ಕ್ಷೇತ್ರದಲ್ಲಿ ಸಾರ್ವಜನಿಕ ಅಧಿಕಾರದ ಕೇಂದ್ರೀಕರಣ ಮತ್ತು ಖಾಸಗೀ ಆಸ್ತಿಗಳ ವಿಭಜನೆ ಇದ್ದ ಹಾಗೆ.

ಯಂತ್ರ ಮತ್ತು ಉಗಿಯ ಬಳಕೆಯಿಂದ ಶ್ರಮವಿಭಜನೆಯ ಆಯಾಮವು ಬದಲಾಯಿತು. ಇದರಿಂದ ಬೃಹತ್ ಕೈಗಾರಿಕೆಗಳು ರಾಷ್ಟ್ರದ ಮಣ್ಣಿನಿಂದ ಬಿಡುಗಡೆ ಪಡೆದು ಜಾಗತಿಕ ಮಾರುಕಟ್ಟೆಯ ಮೇಲೆ ಅವಲಂಬಿತವಾಗಿವೆ. ಅಲ್ಲದೆ ಅಂತರರಾಷ್ಟ್ರೀಯ ವಿನಿಮಯ ಮತ್ತು ಅಂತರರಾಷ್ಟ್ರೀಯ ಶ್ರಮವಿಭಜನೆಯನ್ನು ಅವಲಂಬಿಸಿವೆ.

ಆಧುನಿಕ ಸಮಾಜದ ಒಳಗಿನ ಶ್ರಮವಿಭಜನೆಯ ಲಕ್ಷಣಗಳೆಂದರೆ, ಅದು ತಜ್ಞರನ್ನು, ತಜ್ಞತೆಯನ್ನು ಮತ್ತು ಅವುಗಳ ಜೊತೆಗೆ ಕಸುಬು–ಪೆದ್ದುತನವನ್ನೂ ಸೃಷ್ಟಿಸುತ್ತದೆ. ಸ್ವಯಂಚಾಲಿತ ಯಂತ್ರ ಕಾರ್ಯಾಗಾರಗಳು ವಿಶೇಷ ತಜ್ಞರನ್ನು ಮತ್ತು ಕಸುಬು–ಪೆದ್ದುತನವನ್ನು ಅಳಿಸಿಹಾಕುತ್ತವೆ. ಪ್ರೂಧೋನ್‌ರು ಸ್ವಯಂಚಾಲಿತ ಯಂತ್ರ ಕಾರ್ಯಾಗಾರಗಳ ಈ ಒಂದು ಕ್ರಾಂತಿಕಾರಿ ಭಾಗವನ್ನು ಅರ್ಥಮಾಡಿಕೊಂಡಿಲ್ಲ.

ಪ್ರೂಧೋನ್‌ರಿಗೆ ತಿಳಿಯದಿರುವ ಸಂಗತಿ ಎಂದರೆ ಎಲ್ಲ ಚರಿತ್ರೆಯೂ ಮಾನವ ಸ್ವಭಾವದ ನಿರಂತರ ಪರಿವರ್ತನೆ ಎಂಬುದು. ಸ್ಪರ್ಧೆಯು ಕೈಗಾರಿಕಾ ಪೈಪೋಟಿಯಲ್ಲ, ವಾಣಿಜ್ಯ ಪೈಪೋಟಿ. ನಮ್ಮ ಕಾಲದ ಕೈಗಾರಿಕಾ ಪೈಪೋಟಿಯು ವಾಣಿಜ್ಯಕ್ಕಾಗಿ ಮಾತ್ರ. ಬೂರ್ಶ್ವಾ ಆಸ್ತಿಯನ್ನು ನಿರ್ವಚಿಸುವುದು ಎಂದರೆ ಬೂರ್ಶ್ವಾ ಉತ್ಪಾದನೆಯ ಸಾಮಾಜಿಕ ಸಂಬಂಧಗಳನ್ನು ವಿಶದಗೊಳಿಸುವುದೇ ಆಗಿದೆ. ಆಸ್ತಿಯನ್ನು ಒಂದು ಸ್ವತಂತ್ರ ಸಾಮಾಜಿಕ ಸಂಬಂಧವೆಂದು, ಪ್ರತ್ಯೇಕ ಪ್ರಭೇದ ಎಂದು, ಅಮೂರ್ತ ಮತ್ತು ಚಿರಂತನ ವಿಚಾರ ಎಂದು ನಿರ್ವಚಿಸುವುದು ಕೇವಲ ಆಧ್ಯಾತಿಕ ಅಥವಾ ನ್ಯಾಯಶಾಸ್ತ್ರದ ಭ್ರಮೆ ಮಾತ್ರ.

## ಆಸ್ತಿ ಗಳಿಕೆ

ಚುನಾವಣಾ
ಸ್ಪರ್ಧಿಗಳ
ಆಸ್ತಿಯು
ಏರಿದೆ ಕೋಟಿ ಕೋಟಿ
ಬಡ ಪ್ರಜೆಗೆ
ಉಳಿದಿರುವ
ಆಸ್ತಿ ಎಂದರೆ ಲಂಗೋಟಿ

**ಶಿವಮೊಗ್ಗ ಗೀತಾಶಾಸ್ತ್ರಿ**
ಬೆಂಗಳೂರು – ೫೬೦ ೦೨೮

ಮಾರ್ಕ್ಸ್ ಭೂಮಿ ಮತ್ತು ಬಾಡಿಗೆಯ ಬಗ್ಗೆ ಹೇಳುವುದೇನೆಂದರೆ, ಬಾಡಿಗೆಯನ್ನು ಆಧರಿಸಿ ಯಾವುದೇ ಭೂಮಿಯ ಮೌಲ್ಯವನ್ನು ನಿರ್ಧರಿಸುವಾಗ ಅದು ವ್ಯವಹಾರಯೋಗ್ಯ ಮೌಲ್ಯವಾಗಿರಬೇಕೆಂದರೆ, ಪ್ರಸಕ್ತ ಸಮಾಜ ಇರುವ ಸ್ಥಿತಿಯಿಂದ ದೂರ ಹೋಗಬಾರದು. ಭೂಮಿಯನ್ನು ಉತ್ಪಾದನಾ ಸಾಧನವನ್ನಾಗಿ ಬಳಸದೇ ಇರುವವರೆಗೆ ಅದು ಬಂಡವಾಳ ಅಲ್ಲ. ಭೂಮಿಯು ಬಂಡವಾಳವಾಗಿ ಒಂದು ಸ್ಥಿರಬಂಡವಾಳ. ಆದರೆ ಈ ಸ್ಥಿರಬಂಡವಾಳವೂ ಸಹ ಚರಬಂಡವಾಳದಂತೆ ಬಳಸುತ್ತಾ ಹೋದಂತೆ ಬರಿದಾಗುತ್ತದೆ.

ಗ್ರಂಥದ ಕೊನೆಯ ಭಾಗದಲ್ಲಿ, ಕೂಲಿ, ಬೆಲೆ, ಲಾಭ ಮತ್ತು ಮುಖ್ಯವಾಗಿ ಮಿಗುತಾಯ ಮೌಲ್ಯಗಳ ಅಂತರ್‌ಸಂಬಂಧಗಳ ಬಗ್ಗೆ ಪ್ರೂಧೋನ್‌ರಿಗಿರುವ ಅಜ್ಞಾನವನ್ನು ಮಾರ್ಕ್ಸ್ ಬಿಡಿಸಿ ತೋರಿಸುತ್ತಾರೆ. ಬೇಡಿಕೆ ಮತ್ತು ಪೂರೈಕೆಗಳು ಸರಕು ಉತ್ಪಾದಕರ ನಿಯಂತ್ರಣದಲ್ಲಿಲ್ಲ. ಅವು ಮಾರುಕಟ್ಟೆಯ ನಿಯಂತ್ರಣದಲ್ಲಿರುತ್ತವೆ. ಹೀಗಾಗಿ ಪ್ರೂಧೋನ್‌ರ ಸಂಯೋಜಿತ ಬೆಲೆಗೆ ಯಾವ ಬೆಲೆಯೂ ಇಲ್ಲ. ಮುಷ್ಕರಗಳಿಂದಾಗಿ ಬಂಡವಳಿಗರ ಲಾಭದಲ್ಲಿ ಕಡಿತವಾಗುತ್ತದೆಯೇ ಹೊರತು ಸರಕುಗಳ ಬೆಲೆ ಹೆಚ್ಚಾಗುವುದಿಲ್ಲ. ಮುಷ್ಕರಗಳು ಸರಕುಗಳ ಅಭಾವವನ್ನು ಸೃಷ್ಟಿಸುವ ಬದಲು ಯಂತ್ರಗಳ ಆವಿಷ್ಕಾರಕ್ಕೆ ಕಾರಣವಾಗಿವೆ. ತಜ್ಞ ಶ್ರಮದ ದಂಗೆಯನ್ನು ಹಿಮ್ಮೆಟ್ಟಿಸಲು ಬಂಡವಳಿಗರು ಬಳಸಿದ ಆಯುಧವೇ ಯಂತ್ರ ಎಂದು ಹೇಳಬಹುದು. ಆಧುನಿಕ ಕೈಗಾರಿಕೆಯ ಅತ್ಯಂತ ಶ್ರೇಷ್ಠ ಆವಿಷ್ಕಾರವಾದ 'ಸ್ವಯಂಚಾಲಿತ ಹೇಸರಗತ್ತೆ'ಯು ದಂಗೆಯೆದ್ದ ನೂಲುವವರಿಗೆ ಉದ್ಯೋಗವಿಲ್ಲದಂತೆ ಮಾಡಿತು. ಇಂಗ್ಲೆಂಡಿನಲ್ಲಿ ಮುಷ್ಕರಗಳು ಹೊಸ ಯಂತ್ರಗಳ ಆವಿಷ್ಕಾರ ಮತ್ತು ಅನ್ವಯಕ್ಕೆ ನಿಯಮಿತವಾಗಿ ಕಾರಣವಾದವು.

'ಬಡವರ ಹಿತ ಕಾಯುವ ಕಾಲ್ಪನಿಕ ಸಮಾಜವಾದ'ವನ್ನು ಪ್ರತಿಪಾದಿಸುವ ಪ್ರೂಧೋನ್ ಮುಷ್ಕರಗಳ ಕಟ್ಟಾ ವಿರೋಧಿ. ಅವರ ಪ್ರಕಾರ ಮುಷ್ಕರವು ದಂಡಸಂಹಿತೆ ಮತ್ತು ಆರ್ಥಿಕ ವ್ಯವಸ್ಥೆ ಎರಡೂ ದೃಷ್ಟಿಯಲ್ಲಿ ಕಾನೂನಿಗೆ ವಿರುದ್ಧವಾದುದು. ಕಾರ್ಮಿಕರು ಸಂಘಟಿತರಾಗಿ ಏಕಸ್ವಾಮ್ಯಕ್ಕೆ ಧಕ್ಕೆ ತಂದರೆ ಸಮಾಜ ಅದನ್ನು ಸಹಿಸುವುದಿಲ್ಲ ಎನ್ನುತ್ತಾರೆ. ಹಣದ ಪ್ರಶ್ನೆಯಲ್ಲದೆ, ಎಂದೆಂದಿಗೂ ಶ್ರಮಿಕರು ಶ್ರಮಿಕರಾಗಿಯೇ, ಮಾಲೀಕರು ಮಾಲೀಕರಾಗಿಯೇ ಉಳಿದಿರುತ್ತಾರೆ. ಆದ್ದರಿಂದ ಶ್ರಮಿಕರು ಒಂದುಗೂಡಬಾರದು. ರಾಜಕೀಯ ಮಾಡಬಾರದು. ಸಂಘಟಿತರಾಗುವುದೆಂದರೆ ರಾಜಕೀಯ ಮಾಡಿದಂತೆಯೇ ಎಂದು ಪ್ರೂಧೋನ್‌ರಂಥ ಸಮಾಜವಾದಿಗಳು ಹೇಳುತ್ತಾರೆ. ಒಂದು ದೇಶದಲ್ಲಿ ಶ್ರಮಿಕ ಸಂಘಟನೆಯು ಬೆಳೆದಿರುವ ಮಟ್ಟವನ್ನು ಆಧರಿಸಿ ಜಾಗತಿಕ ಮಾರುಕಟ್ಟೆಯ ಶ್ರೇಣಿಯಲ್ಲಿ ಆ ದೇಶದ ಸ್ಥಾನವನ್ನು ಗುರುತಿಸಬಹುದು.

ವರ್ಗವೈರುಧ್ಯಗಳನ್ನು ಆಧರಿಸಿರುವ ಪ್ರತೀ ಸಮಾಜದಲ್ಲೂ ಒಂದು ದಮನಿತ ವರ್ಗದ ಅಸ್ತಿತ್ವವು ಆ ಸಮಾಜದ ಜೀವಾಳವಾಗಿರಲೇಬೇಕು. ಹೀಗಾಗಿ ದಮನಿತ ವರ್ಗದ ವಿಮೋಚನೆಯು ಹೊಸ ಸಮಾಜದ ಸೃಷ್ಟಿಯ ಅನಿವಾರ್ಯತೆಯನ್ನು ಸೂಚಿಸುತ್ತದೆ. ಎಲ್ಲಾ ಉತ್ಪಾದನಾ ಸಲಕರಣೆಗಳಲ್ಲಿನ ಅತ್ಯಂತ ಶ್ರೇಷ್ಠವಾದ ಶಕ್ತಿಯೆಂದರೆ ಸ್ವತಃ ಕ್ರಾಂತಿಕಾರಿ ವರ್ಗವೇ ಆಗಿದೆ.

**ಪ್ರೊ॥ ವಿ. ಎಸ್. ಲಕ್ಷ್ಮೀನಾರಾಯಣ**
ಎಂ. ೧೨೩೭, ೨ನೇ ಮುಖ್ಯರಸ್ತೆ, ವಿಶ್ವಧಾರ್ತಿ ರಸ್ತೆ, ವಿವೇಕಾನಂದ ನಗರ, ಮೈಸೂರು – ೨೩




# ಅಳಿವಿನಂಚಿನ ಭಾಷೆಯ ಕಥನದ 'ಐ ಡ್ರೀಂ ಇನ್ ಅನದರ್ ಲ್ಯಾಂಗ್ವೇಜ್'

**"ಪ್ರಾರಂಭದಲ್ಲಿ ಹೆಣ್ಣು ಪಕ್ಷಿ ಭೂಮಿಯಲ್ಲಿ ನಡೆದಾಡಿದ ಪ್ರಥಮ ಪುರುಷನನ್ನು ಪ್ರೀತಿಸುತ್ತಾಳೆ. ಆದರೆ ಅವರ ಭಾಷೆ ಒಂದೇ ಆಗಿರುವುದಿಲ್ಲ. ಆದ್ದರಿಂದ ಅವರ ನಡುವೆ ಪ್ರೀತಿ ಅರಳುವುದಿಲ್ಲ. ನಂತರ ಹೆಣ್ಣು ಪಕ್ಷಿ ಆತನಿಗೆ ಝಿಕ್ರಿಲ್ ಭಾಷೆಯನ್ನು ಹೇಳಿಕೊಡುತ್ತಾಳೆ. ನಂತರ ಅವರ ಸಮಾಗಮದಿಂದ ನಾವೆಲ್ಲ ಹುಟ್ಟಿದೆವು... ಅಲ್ಲಿಂದಾಚೆಗೆ ಮಾನವರು (ಪ್ರಾಣಿಗಳು ಕೂಡ) ಈ ಭಾಷೆಯನ್ನು ಬಳಸಲು ತೊಡಗಿದರು..." ಎಂದು ಝಿಕ್ರಿಲ್ ಭಾಷೆಯ ಉಗಮದ ಜನಪದೀಯ ವೃತ್ತಾಂತವನ್ನು ತಿಳಿಸುತ್ತಾನೆ!**

ಪ್ರಪಂಚದಲ್ಲಿ ಪ್ರಥಮ ಭಾಷೆ ಉಗಮವಾದ ಸಮಯ ಮತ್ತು ಸ್ಥಳವನ್ನು ನಿಖರವಾಗಿ ತಿಳಿಯುವ ನಿಟ್ಟಿನಲ್ಲಿ ಅನೇಕ ಪ್ರಯತ್ನಗಳು ಜರುಗಿವೆ. ಮಾನವರು ಏಕೆ ಮತ್ತು ಹೇಗೆ ಭಾಷೆಯನ್ನು ಬೆಳೆಸಿದರು ಎನ್ನುವುದರ ಬಗೆಗೆ ಭಾಷಾಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಪ್ರಾಗ್ಜೀವಶಾಸ್ತ್ರಜ್ಞರು ತಮ್ಮ ಪರಿಕಲ್ಪನೆಯನ್ನು ಹರಿಬಿಡುತ್ತ ಬಂದಿರುವುದು ಗಮನಾರ್ಹ ಸಂಗತಿ. ಸುಮಾರು ಒಂದು ಲಕ್ಷ ಇಪ್ಪತ್ತು ಸಾವಿರ ವರ್ಷಗಳ ಹಿಂದೆ ನಿಯಾಂಡರ್ತಾಲರು (Neanderthals–ಪ್ರಾಚೀನ ಶಿಲಾಯುಗದ ಆಫ್ರಿಕಾದ ಮೂಲದವರು ಎನ್ನಲಾದ, ಯೂರೋಪ್‌ನಲ್ಲಿಯೂ ಜೀವಿಸಿದ್ದ, ದಪ್ಪನಾದ ಹುಬ್ಬು ಮತ್ತು ಹಿಂದಕ್ಕೆ ಓಲುವ ಹಣೆವುಳ್ಳ ಈಗಿನ ಮಾನವರ ಪೂರ್ವಜರು) ಆಫ್ರಿಕಾದಿಂದ ವಲಸೆ ಹೋಗುವುದನ್ನು ಪ್ರಾರಂಭಿಸಿದಾಗ ಅವರಿಗೆ ಭಾಷೆಯೊಂದರ ಅರಿವಿತ್ತು ಎಂದು ಹೇಳಲಾಗುತ್ತದೆ. ಆದುದರಿಂದ ಒಂದು ಅಂದಾಜಿನ ಅನ್ವಯ ಜಗತ್ತಿನ ಮೊದಲನೆಯ ಭಾಷೆ ಆಫ್ರಿಕಾದಲ್ಲಿ ಹುಟ್ಟಿತು. ಆದರೆ ಮೆಸೊಪೊಟೋಮಿಯಾದಲ್ಲಿ ಕ್ಯೂನಿಫಾರಂ ಟ್ಯಾಬ್ಲೆಟ್ಟುಗಳ ಮೇಲೆ ಬರೆದದ್ದು ಸುಮಾರು ಕ್ರಿಸ್ತ ಪೂರ್ವ ೮೦೦೦ರಲ್ಲಿ ಎಂದು ಅಂದಾಜಿಸಲಾಗಿದೆ. ಹೀಗೆ ಭಾಷೆಯ ಬಗೆಗೆ ಉತ್ಖನನ ನಡೆಸಿದರೆ ಅದರ ಆಳ, ವಿಸ್ತಾರ ಕುರಿತು ನಿಬ್ಬೆರಗಾಗುವುದು ಖಂಡಿತ.

'ಐ ಡ್ರೀಂ ಇನ್ ಅನದರ್ ಲ್ಯಾಂಗ್ವೇಜ್' ಎಂಬ ಸ್ಪ್ಯಾನಿಶ್ ಭಾಷೆಯ ಚಲನಚಿತ್ರ ಬೆಂಗಳೂರಿನ ೧೧ನೇ ಅಂತರರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪ್ರದರ್ಶಿಸಲ್ಪಟ್ಟಿತು. ಇದು ವೀಕ್ಷಕರ ಗಮನವನ್ನು ಸೆಳೆಯುವುದರ ಜೊತೆಗೆ ಮನ್ನಣೆಯನ್ನು ಗಳಿಸಿತು.

ಬನ್ನಿ... ಈ ಚಲನಚಿತ್ರದ ಪರಿಚಯವನ್ನು ಮಾಡಿಕೊಳ್ಳೋಣ. ಮಾರ್ಟಿನ್ (ನಟ ಫರ್ನಾಂಡೊ ಅಲ್ವರೆಝ್ ರೇಬಿಲ್) ಒಬ್ಬ ಯುವ ಭಾಷಾಶಾಸ್ತ್ರಜ್ಞ. ಆತ ಮೆಕ್ಸಿಕೋದ ದಟ್ಟ ಕಾಡುಗಳ ನಡುವೆಯಿರುವ ಸಣ್ಣ ಗ್ರಾಮಕ್ಕೆ ತೆರಳುತ್ತಾನೆ. ಅಲ್ಲಿ 'ಝಿಕ್ರಿಲ್' (ಕಾಲ್ಪನಿಕ) ಎಂಬ ಅವನತಿಗೆ ಹತ್ತಿರದಲ್ಲಿರುವ ಭಾಷೆಯನ್ನು ಕಾಪಿಡುವ/ದಾಖಲಿಸುವ ಉದ್ದೇಶವನ್ನು ಆತ ಹೊಂದಿರುತ್ತಾನೆ. ಆ ಭಾಷೆಯನ್ನು ಮಾತನಾಡುವವರು ಮೂವರು ಮಾತ್ರ ಉಳಿದಿರುತ್ತಾರೆ. ಅವರಲ್ಲಿ ಒಬ್ಬ ವೃದ್ಧ ಮಹಿಳೆಯಿರುತ್ತಾಳೆ. ಮಾರ್ಟಿನ್ ಆ ಗ್ರಾಮಕ್ಕೆ ಭೇಟಿ ನೀಡಿದ ಅಲ್ಪ ಕಾಲದಲ್ಲೇ ಆಕೆ ಅಸು ನೀಗುತ್ತಾಳೆ. ಇನ್ನಿಬ್ಬರು ವೃದ್ಧರು– ಇಸೌರೋ (ನಟ ಮ್ಯಾನೆಯುಲ್ ಪಾನ್ಸಿಲಿಸ್) ಮತ್ತು ಗಂಟುಮುಖದ ಎವರಿಸ್ಟೊ (ನಟ ಎಲಿಜಿಯೊ ಮೆಲೆನ್ಡೆಝ್). ಇವರೀರ್ವರೂ ಪರಸ್ಪರ ಮಾತನಾಡಿಯೇ ಐವತ್ತು ವರ್ಷಗಳಾಗಿರುತ್ತವೆ. ಇವರನ್ನು ಮುಖಾಮುಖಿಯಾಗಿಸಿ ಮಾತನಾಡುವಂತೆ ಮಾಡುವುದು ಮಾರ್ಟಿನ್‌ಗೆ ಪ್ರಬಲ ಸವಾಲಾಗುತ್ತದೆ. ಈ ನಿಟ್ಟಿನಲ್ಲಿ ಒಂದು ಮಾರ್ಗೋಪಾಯದ ಮೂಲಕ ಆತ ಮುಂದೆ ಸಾಗುತ್ತಾನೆ. ಎವರಿಸ್ಟೊಗೆ ಲುವಿಯಾ (ನಟಿ ಫತೀಮ ಮೊಲೀನ) ಎಂಬ ಮೊಮ್ಮಗಳಿರುತ್ತಾಳೆ. ಆಕೆಯ ಮೂಲಕ ಝಿಕ್ರಿಲ್ ಭಾಷೆಯ ಕೊನೆಯ ಭಾಷಿಕರನ್ನು ಪರಸ್ಪರ ಭೇಟಿ ಮಾಡಿಸಲು ಯತ್ನಿಸುತ್ತಾನೆ. ಆಕೆ ರೇಡಿಯೊ ಮೂಲಕ ಆಂಗ್ಲ ಭಾಷೆಯನ್ನು ಹೇಳಿಕೊಡುತ್ತಿರುತ್ತಾಳೆ. ಅಮೆರಿಕಾದಲ್ಲಿ ನೆಲೆಸಬೇಕೆಂಬುದು ಆಕೆಯ ಮಹದಾಸೆಯಾಗಿರುತ್ತದೆ.

ಇಬ್ಬರು ವೃದ್ಧರ ನಡುವೆ ಇರುವ ಗಾಢ ಮೌನಕ್ಕೆ ಒಂದು ಹಿನ್ನೆಲೆಯಿರುತ್ತದೆ. ತಮ್ಮ ಯೌವನದಲ್ಲಿ ಒಬ್ಬ ಸುಂದರ ಯುವತಿಯ ಮೇಲೆ ಅವರು ಮೋಹಗೊಂಡಿರುತ್ತಾರೆ. ಅವರ ನಡುವೆ ಸಲಿಂಗ ಪ್ರೇಮದ ಎಳೆಯೂ ಇರುತ್ತದೆ. ಆ ಯುವತಿ ಎವರಿಸ್ಟೊನನ್ನು ಪ್ರೀತಿಸುತ್ತಾಳೆ; ನಂತರ ಆತನನ್ನು

**ಮ. ಶ್ರೀ. ಮುರಳಿ ಕೃಷ್ಣ**

ವರಿಸುತ್ತಾಳೆ (ಫ್ಲಾಶ್‌ಬ್ಯಾಕ್ ಮೂಲಕ ಇದರ ವೃತ್ತಾಂತವನ್ನು ಬಿಂಬಿಸಲಾಗಿದೆ). ಲುವಿಯಾ ತನ್ನ ಅಜ್ಜನಿಗೆ ಟಿವಿಯ ಬಗೆಗೆ ತುಂಬ ಸೆಳೆತವಿದೆಯೆಂಬ ವಿಷಯವನ್ನು ಮಾರ್ಟಿನ್‌ನೊಡನೆ ಮಾತನಾಡುತ್ತ ಬಹಿರಂಗಗೊಳಿಸುತ್ತಾಳೆ. ಸರಿ, ಮಾರ್ಟಿನ್ ಅದಕ್ಕೆ ಸೂಕ್ತ ಏರ್ಪಾಡನ್ನು ಮಾಡುತ್ತಾನೆ. ಆದರೆ ಸದಾ ಸಿಡಿಮಿಡಿಗೊಳ್ಳುವ ಎವರಿಸ್ಟೊನನ್ನು ಅಷ್ಟು ಬೇಗ ಬಗ್ಗಿಸಲು ಮಾರ್ಟಿನ್‌ಗೆ ಸಾಧ್ಯವಾಗುವುದಿಲ್ಲ. ನಂತರ ಅವರಿಬ್ಬರೂ ಕಡಲ ಕಿನಾರೆಯಲ್ಲಿ ಕುಳಿತು ತಮ್ಮ ಗತಜೀವನದ ಪ್ರೇಮ ವೃತ್ತಾಂತವನ್ನು ಮೆಲುಕು ಹಾಕುತ್ತಾರೆ.

ಇಸೌರೋ ಹಳೆಯದನ್ನೆಲ್ಲ ಮರೆತು ಎವರಿಸ್ಟೊನತ್ತ ಸ್ನೇಹದ ಹಸ್ತ ಚಾಚಿದರೂ, ಎವರಿಸ್ಟೊ ಇನ್ನೂ ಲಾವಾರಸದಂತಿರುತ್ತಾನೆ. ಆತ ಇಸೌರೋ ವಾಸವಾಗಿದ್ದ ಗುಡಿಸಲಿಗೆ ಬೆಂಕಿ ಹಚ್ಚುತ್ತಾನೆ. ಮಾರ್ಟಿನ್ ಧಾವಿಸಿ ಇಸೌರೋ ಅಗ್ನಿಗೆ ಆಹುತಿಯಾಗದಂತೆ ಮಧ್ಯಪ್ರವೇಶ ಮಾಡುತ್ತಾನೆ. ಕೊನೆಗೆ ಇಸೌರೋ ಕೊನೆಯುಸಿರೆಳೆಯುತ್ತಾನೆ. ಇದಕ್ಕೆ ಸಿನಿಮಾದ ಕೊನೆಯ ದೃಶ್ಯದಲ್ಲಿದೆ ಎವರಿಸ್ಟೊನ ಸ್ಪಂದನ!

ಈ ಚಲನಚಿತ್ರದಾದ್ಯಂತ ಭಾಷೆಯನ್ನು ಒಂದು ಮೆಟಾಫರ್‌ನಂತೆ ಬಳಸಲಾಗಿದೆ. ಝಿಕ್ರಿಲ್ ಭಾಷೆಯನ್ನು ಅಲ್ಲಿನ ಜನರ ನಡುವಿನ ಸಂವಹನಾ ಮಾಧ್ಯಮವನ್ನಾಗಿ ಮಾತ್ರ ತೋರಿಸಲಾಗಿಲ್ಲ. ಆ ಪ್ರಾಂತ್ಯದ ಪಕ್ಷಿಗಳಿಗೆ ಮತ್ತು ಮರಗಳಿಗೂ ಅದು ಅರ್ಥವಾಗುತ್ತದೆ ಎಂಬುವುದರ ಮೂಲಕ ಅದರ ವಿಶಾಲ ವ್ಯಾಪ್ತಿಯನ್ನು ಮನೋಜ್ಞವಾಗಿ ದಾಟಿಸಲಾಗಿದೆ. ಸಮುದಾಯವೊಂದರ ಆಗು–ಹೋಗುಗಳು, ದಿಕ್ಕುದೆಸೆಗಳು ಇತ್ಯಾದಿಗಳ ಸಾಂಸ್ಕೃತಿಕ ಆಯಾಮವಲ್ಲದೆ ಇತರ ಆಯಾಮಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ಭಾಷೆಯ ಪಾತ್ರ ಮಹತ್ತರವಾದದ್ದು. ಒಂದು ಭಾಷೆಯ ಅಳಿವಿನ ಜೊತೆ ಅದರ ಭಾಷಿಕರ ಪ್ರಜ್ಞಾವಲಯದ ವಿಭಿನ್ನ ಲೋಕದೃಷ್ಟಿ ಹೇಳಹೆಸರಿಲ್ಲದಂತೆ ಅವಸಾನ ಹೊಂದುತ್ತದೆ. ಜಾಗತೀಕರಣದ ಈ ಕಾಲಮಾನದಲ್ಲಿ ಇಂತಹ ಅವನತಿ ಹೊಂದುವ ಭಾಷೆಗಳು ಯಾಜಮಾನ್ಯ ಶಕ್ತಿಗಳ (ಅವುಗಳ ಭಾಷೆಗಳನ್ನೂ ಒಳಗೊಂಡು) ಕಬಂಧ ಬಾಹುಗಳ ಬಲಾಢ್ಯತನವನ್ನು ಸೂಚಿಸುತ್ತವೆ. ಅಳಿವಿನ ಅಂಚಿನಲ್ಲಿರುವ ಭಾಷೆಗಳನ್ನು ಸಂರಕ್ಷಣಾ ಪ್ರಕ್ರಿಯೆಗಳಿಗೆ ಒಳಪಡಿಸದಿದ್ದರೇ, ಮುಂಬರುವ ಜನಾಂಗಗಳಿಗೆ ಆಗುವ ಸಾಂಸ್ಕೃತಿಕ (ವಿಶಾಲಾರ್ಥದಲ್ಲಿ) ಲುಕ್ಸಾನು ಎಷ್ಟು? ಇಂತಹ ಹಲವು ಸಂಗತಿಗಳ ಬಗೆಗೆ ಮನನ ಮಾಡುವಂತೆ ಮಾಡುತ್ತದೆ ಈ ಸಿನಿಮಾ.

ಮಾರ್ಟಿನ್ ಝಿಕ್ರಿಲ್ ಭಾಷೆಯನ್ನು ಅರಿತಿರುವ ವೃದ್ಧೆಯನ್ನು ಭೇಟಿ ಮಾಡಿದಾಗ, ಆಕೆ "ನೀನು ಈ ಭಾಷೆಯನ್ನು ಕಲಿತು, ಮಾತನಾಡುತ್ತೀಯ... ಅಲ್ಲವೇ?" ಎಂದು ಕೇಳುತ್ತಾಳೆ. "ಹೌದು... ನಾನು ಪ್ರಯತ್ನಿಸುತ್ತೇನೆ" ಎಂದು ಆತ ಉತ್ತರಿಸುತ್ತಾನೆ. "ಝಿಕ್ರಿಲ್ ಒಂದು ಶಕ್ತಿಯುತ ಭಾಷೆ... ನಮಗೆ ಅದು ಸಾಯುವುದು ಬೇಕಾಗಿಲ್ಲ...ಹಾಗೆಯೇ ಅದು ತಪ್ಪಾದ ವ್ಯಕ್ತಿಗಳ ಪಾಲಾಗಬಾರದು..." ಎಂದು ನೇರವಾಗಿ, ಕಡ್ಡಿ ತುಂಡು ಮಾಡಿದಂತೆ ಆಡುವ ಆ ವೃದ್ಧೆಯ ಮಾತಿನಲ್ಲಿ ಎಷ್ಟು ಆಳವಾದ ಅರ್ಥಗಳಿವೆ, ಅಲ್ಲವೇ?



ಈ ಚಲನಚಿತ್ರದಲ್ಲಿ, ನಿರ್ದೇಶಕರು ನಿಸರ್ಗವನ್ನು ದುಡಿಸಿಕೊಂಡಿರುವ ಪರಿ ಗಮನಾರ್ಹ. ವೀಕ್ಷಕರ ಕಣ್ಮನಗಳನ್ನು ಸೆಳೆಯುತ್ತದೆ ಕಥಾನಕ ಅನಾವರಣಗೊಳ್ಳುವ ಪ್ರದೇಶದ ಹಸಿರಿನ ಐಸಿರಿ. ಮಾರ್ದನಿಸುವ ಹಕ್ಕಿಗಳ ಇಂಚರ, ಬೆಳಕಿನ ಕಿರಣಗಳ ಮುದಗೊಳಿಸುವ ಪಥಗಳು, ಇವುಗಳ ಸಂಪರ್ಕವನ್ನು ಪಡೆದು ರಾರಾಜಿಸುವ ವೃಕ್ಷಗಳು, ನಿಸರ್ಗದ ಸ್ವಭಾವಸಿದ್ಧ ಆಯಾಮವನ್ನು ಹೊರಗೆಡಹುತ್ತವೆ. ಗುಹೆಯೊಂದರಲ್ಲಿ ಗತಿಸಿದ ಝಿಕ್ರಿಲ್ ಭಾಷಿಕರೊಡನೆಯ ಸಂವಾದ, ಸಿನಿಮಾದ ಒಟ್ಟಂದಕ್ಕೆ ಮ್ಯಾಜಿಕ್ ರಿಯಲಿಸಂನ ಸ್ಪರ್ಶ ನೀಡಿದೆ.

ಚಲನಚಿತ್ರದಲ್ಲಿ ಇಸೌರೋ ಮತ್ತು ಎವರಿಸ್ಟೊ ಝಿಕ್ರಿಲ್ ಭಾಷೆಯಲ್ಲಿ ಸಂವಾದಿಸುವ ಸಂದರ್ಭದಲ್ಲಿ ಸಬ್‌ಟೈಟಲ್ಸ್‌ಗಳನ್ನು ಬಳಸಿಲ್ಲ. ನಿರ್ದೇಶಕರು ಪ್ರಜ್ಞಾಪೂರ್ವಕವಾಗಿ ಈ ಕ್ರಮವನ್ನು ಕೈಗೊಂಡಿದ್ದಾರೆ. ಏಕೆಂದರೆ ಈ ಭಾಷೆಯನ್ನು ಅರಿತವರು ಅವರಿಬ್ಬರೇ ಆಗಿರುತ್ತಾರೆ! ಒಂದು ಸಂದರ್ಭದಲ್ಲಿ ಮಾರ್ಟಿನ್ ಜೊತೆ ಅರಣ್ಯದಲ್ಲಿ ಪಾದ ಬೆಳೆಸುತ್ತಿರುವಾಗ ಇಸೌರೋ "ಪ್ರಾರಂಭದಲ್ಲಿ ಹೆಣ್ಣು ಪಕ್ಷಿ ಭೂಮಿಯಲ್ಲಿ ನಡೆದಾಡಿದ ಪ್ರಥಮ ಪುರುಷನನ್ನು ಪ್ರೀತಿಸುತ್ತಾಳೆ. ಆದರೆ ಅವರ ಭಾಷೆ ಒಂದೇ ಆಗಿರುವುದಿಲ್ಲ. ಆದ್ದರಿಂದ ಅವರ ನಡುವೆ ಪ್ರೀತಿ ಅರಳುವುದಿಲ್ಲ. ನಂತರ ಹೆಣ್ಣು ಪಕ್ಷಿ ಆತನಿಗೆ ಝಿಕ್ರಿಲ್ ಭಾಷೆಯನ್ನು ಹೇಳಿಕೊಡುತ್ತಾಳೆ. ನಂತರ ಅವರ ಸಮಾಗಮದಿಂದ ನಾವೆಲ್ಲ ಹುಟ್ಟಿದೆವು... ಅಲ್ಲಿಂದಾಚೆಗೆ ಮಾನವರು (ಪ್ರಾಣಿಗಳು ಕೂಡ) ಈ ಭಾಷೆಯನ್ನು ಬಳಸಲು ತೊಡಗಿದರು..." ಎಂದು ಝಿಕ್ರಿಲ್ ಭಾಷೆಯ ಉಗಮದ ಜನಪದೀಯ ವೃತ್ತಾಂತವನ್ನು ತಿಳಿಸುತ್ತಾನೆ! ಇದು ಆ್ಯಡಂ ಮತ್ತು ಈವ್ ಜೊತೆ ಹೆಣೆದುಕೊಂಡಿರುವ ಕಥೆಗಿಂತ ಭಿನ್ನವಾಗಿದೆ.



ಹೀಗೊಂದು ಪೌರಾಣಿಕ, ಅನುಭಾವಿಕ ಮತ್ತು ಕಾವ್ಯಾತ್ಮಕ ಚಲನಚಿತ್ರದ ಸಿನಿಮಟೋಗ್ರಾಫರ್ ಟೊನಟಿಉ ಮಾರ್ಟಿನೆಝ್ ಮತ್ತು ಸಂಗೀತ ನಿರ್ದೇಶಕ ಆಂಡ್ರೆಸ್ ಸಂಚೆಝ್, ನಿರ್ದೇಶಕರ ಸಂವಹನಾ ಕೌಶಲಕ್ಕೆ ತಮ್ಮ ಕೊಡುಗೆಗಳನ್ನು ನೀಡಿದ್ದಾರೆ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನ್‌ನಿಯ ಲೇಔಟ್
ತುರಹಳ್ಳಿ ಸುಬ್ರಹ್ಮಣ್ಯಪುರ ಅಂಚೆ
ಬೆಂಗಳೂರು – ೫೬೦ ೦೬೧

# ಅಮುಕ್ತರ ಹಸಿವಿನ ಕಥನ

**ಡಾ॥ ಎಚ್. ಎಸ್. ಅನುಪಮಾ**

ಕಣ್ಣತೇವದೊಂದಿಗೆ ಇತ್ತೀಚೆಗೆ ಒಂದು ಪುಸ್ತಕ ಓದಿದೆ. ಅಂತರಾಳ ಕಲಕಿಬಿಡುವ, ನಮ್ಮ ವೈಚಾರಿಕ ಹುಸಿತನವನ್ನು ಎತ್ತಿ ತೋರಿಸುವ, ಉತ್ತರವಿಲ್ಲದ ಪ್ರಶ್ನೆಗಳನ್ನು ಎತ್ತುವ ಇಂತಹ ಪುಸ್ತಕವನ್ನು ಇತ್ತೀಚೆಗೆ ಓದಿರಲಿಲ್ಲ. ಮಾನವ ಹಕ್ಕು, ನ್ಯಾಯವ್ಯವಸ್ಥೆ, ಹಿಂಸೆ, ಅಪರಾಧ, ಶಿಕ್ಷೆ, ಚಳುವಳಿ ಮೊದಲಾದ ವಿಷಯಗಳ ಬಗೆಗೆ ಮತ್ತೊಮ್ಮೆ ಯೋಚಿಸಲು ಹಚ್ಚಿದ ಆ ಪುಸ್ತಕ ದೆಹಲಿಯ ನವಯಾನ ಪಬ್ಲಿಷಿಂಗ್ ಪ್ರಕಟಿಸಿರುವ 'ಥರ್ಟೀನ್ ಇಯರ್ಸ್ : ಎ ನಕ್ಸಲೈಟ್ಸ್ ಪ್ರಿಸನ್ ಡೈರಿ'. ಬರೆದವರು ತನ್ನ ರಾಜಕೀಯ ನಂಬಿಕೆಗಳ ಕಾರಣವಾಗಿ ೧೩ ವರ್ಷ ಜೈಲುವಾಸ ಅನುಭವಿಸಿದ ಕಾಮ್ರೇಡ್ ರಾಮಚಂದ್ರ ಸಿಂಗ್.

ಜೈಲು ಸೇರುವವರಲ್ಲಿ ಹೆಚ್ಚಿನವರು ಸ್ವಂತ ಲಾಭಕ್ಕಾಗಿ ಸಮಾಜಕಂಟಕರಾಗಿ ಜೈಲು ಸೇರುತ್ತಾರೆ. ಮತ್ತೆ ಕೆಲವರು ಪ್ರಸ್ತುತದ ಕೇಡಿಗ ವ್ಯವಸ್ಥೆಯನ್ನು ಬದಲಿಸುವ ರಾಜಕೀಯ ಸಿದ್ಧಾಂತ ನಂಬಿ ಆಳುವವರ ಕೆಂಗಣ್ಣಿಗೆ ಗುರಿಯಾಗಿ ಜೈಲು ಸೇರುತ್ತಾರೆ. ಹಾಗೆ ಸಮಸಮಾಜ ಕಟ್ಟುವ ಕನಸು ಹೊತ್ತು, ನಕ್ಸಲನೆಂಬ ಹಣೆಪಟ್ಟಿ ಹೊತ್ತು, ಜೈಲು ಸೇರಿದ ತರುಣನೊಬ್ಬ ವ್ಯವಸ್ಥೆಯನ್ನು ಚಿಕಿತ್ಸಕ ದೃಷ್ಟಿಯಲ್ಲಿ ನೋಡಿದ ಫಲ ಈ ಪುಸ್ತಕ. ಕೆಳವರ್ಗದ ಖೈದಿಯಾಗಿ ಕಂಗೆಡಿಸುವ ಪರಿಸ್ಥಿತಿಯಲ್ಲಿದ್ದಾಗಲೂ ತನ್ನ ಜೀವನಪ್ರೀತಿ, ಸಾಮಾಜಿಕ ಕಾಳಜಿ, ಹೋರಾಟ ಮನೋಭಾವ, ಹಾಸ್ಯ ಪ್ರಜ್ಞೆಗಳನ್ನು ಬಿಟ್ಟುಕೊಡದೆ ಉಳಿದ ಖೈದಿಗಳ ಪರಿಸ್ಥಿತಿಯನ್ನು, ಜೈಲಿನ ಒಳಹೊರಗುಗಳನ್ನು, ಮನುಷ್ಯ ನಂಬಿಕೆಗಳ ಆಳಗಲಗಳನ್ನು ಮನಮುಟ್ಟುವಂತೆ ವಿಶ್ಲೇಷಿಸಿರುವ '..ಡೈರಿ', ಒಂದು ಅಪೂರ್ವ ಜೈಲು ಆಖ್ಯಾನ. ಸಿಂಗ್ ಅವರ ನೋಟ ಜೈಲಿನ ತಳಸ್ತರದ ಖೈದಿಗಳು ಅನುಭವಿಸುವ ಯಾತನೆ, ದೈನ್ಯತೆ, ಅಸಹಾಯಕತೆ, ಪ್ರತಿರೋಧಗಳನ್ನು ಕಟ್ಟಿಕೊಡುವ ವಿಶಿಷ್ಟ ಕಥಾನಕವಾಗಿದೆ.

ಓದಿನನುಭವದಿಂದ ಹೇಳುವುದಾದರೆ ಕಾಮ್ರೇಡ್ ಸಿಂಗ್ ಅವರ ಬರಹದಲ್ಲಿ ಹುತಾತ್ಮನಾಗುವ, ಮಹಾತ್ಮನಾಗುವ, ಪ್ರಸಿದ್ಧನಾಗುವ ಕನವರಿಕೆ ಇಲ್ಲ. ಬರಹವು ನೇರವಾಗಿ, ಪ್ರಾಮಾಣಿಕವಾಗಿ ಇದೆ. ಭಾಷೆಯ ಸರಳತೆ, ವಿಚಾರದ ಸ್ಪಷ್ಟತೆ ಅಭಿವ್ಯಕ್ತಿ ಸೌಂದರ್ಯವನ್ನು ಹೆಚ್ಚಿಸಿದೆ. ತೀರ್ಮಾನಗಳನ್ನು ಹೇರದ ಮಾಗುವಿಕೆ ಇದೆ. ತಾನು ನಂಬಿದ ಸಿದ್ಧಾಂತ, ತತ್ವ, ಕಾರ್ಯಯೋಜನೆಗಳನ್ನು ಮರುಪರಿಶೀಲಿಸಿರುವ, ವಿಮರ್ಶೆಗೊಡ್ಡಿರುವ ಮುಕ್ತತೆಯೂ ಇದೆ.

ಇವೆಲ್ಲ ಕಾರಣಗಳಿಗಾಗಿ ಇದು ಓದಲೇಬೇಕಾದ ಪುಸ್ತಕವಾಗಿದೆ.

**ಕ್ರಾಂತಿಯ ಕನಸು**

ಉತ್ತರಪ್ರದೇಶದ ಉನ್ನಾವ್ ಜಿಲ್ಲೆಯ ಬಂಗಾರ್‌ಮಾವ್ ಹಳ್ಳಿಯಲ್ಲಿ, ಅರಕ್ ಎಂಬ ಅತಿಸಣ್ಣ ಹಿಂದುಳಿದ ಸಮುದಾಯದ ಬಡಕುಟುಂಬದಲ್ಲಿ ಜನಿಸಿದ ರಾಮಚಂದ್ರ ಸಿಂಗ್ ಬಾಲ್ಯದಿಂದಲೇ ಕಮ್ಯುನಿಸ್ಟ್ ನಾಯಕರ ಪ್ರಭಾವಕ್ಕೊಳಗಾದರು. ಕಾನ್ಪುರದಲ್ಲಿ ಪ್ರೌಢಶಾಲೆ ಓದುವಾಗ ಸಮಸಮಾಜದ ಕನಸುಗಳಿಗೆ ಮತ್ತಷ್ಟು ಹತ್ತಿರವಾದರು. ೧೪ ವರ್ಷದ ವಿದ್ಯಾರ್ಥಿಯಾಗಿದ್ದಾಗಲೇ ಸಿಪಿಐ(ಎಂ) ಸೇರಿದ ಹುಡುಗನನ್ನು 'ಪಾರ್ಟಿ ಬಚ್ಚಾ' (ಪಾರ್ಟಿ ಹುಡುಗ) ಎಂದೇ ಎಲ್ಲರೂ ಪ್ರೀತಿಯಿಂದ ಕರೆಯುತ್ತಿದ್ದದ್ದು. ಸಿಪಿಐ(ಎಂ) ಜಿಲ್ಲಾ ಸಮಿತಿಯಲ್ಲಿದ್ದ ಸಿಂಗ್ ಪಕ್ಷ ಒಡೆದು ಹೋಳಾದ ನಂತರ ಸಿಪಿಐ–ಎಂಎಲ್ (ಮಾರ್ಕ್ಸಿಸ್ಟ್, ಲೆನಿನಿಸ್ಟ್) ಜೊತೆಯಿದ್ದರು. ಬಂಗಾಳದಲ್ಲಿ ಚಾರು ಮಜುಂದಾರರಿಂದ ನಕ್ಸಲ್‌ಬಾರಿ ಭೂಹೋರಾಟ ಶುರುವಾದಾಗ ಅದು ಕಾಮ್ರೇಡ್ ಸಿಂಗ್ ಅವರೂ ಸೇರಿದಂತೆ ಬಿಸಿರಕ್ತದ ತರುಣರನ್ನು ಸೂಜಿಗಲ್ಲಿನಂತೆ ತನ್ನೆಡೆಗೆ ಸೆಳೆಯಿತು. ಸಮಾಜಕ್ಕಾಗಿ ಏನನ್ನಾದರೂ ಮಾಡಬೇಕು, ತಕ್ಷಣದ ಬದಲಾವಣೆ ಸಾಧ್ಯವಾಗಿಸುವಂಥ ಆಯಕಟ್ಟಿನ ಕೆಲಸ ಮಾಡಬೇಕು ಎಂಬ ಗುಂಗಿನ ತರುಣ ಮನಸ್ಥಿತಿಗೆ ಚಾರು ಅವರ 'ವರ್ಗಶತ್ರು ವಿನಾಶ ಅಭಿಯಾನ' ಆಪ್ಯಾಯಮಾನವಾಯಿತು. ನಕ್ಸಲ್‌ಬಾರಿ ಎಂಬ ಪುಟ್ಟ ಊರಿನಿಂದ ಭೌಗೋಳಿಕವಾಗಿ ಬಲುದೂರವಿದ್ದ ಪ್ರದೇಶ ಗಳಿಗೂ ಹೋರಾಟದ ಸ್ಫೂರ್ತಿ, ಕಾವು ತಲುಪಿತು.

ಆಗ ಸ್ವತಂತ್ರ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಸಾವಿರಾರು ಎಕರೆ ಕೃಷಿಭೂಮಿ ಹೊಂದಿದ್ದ ಭಾರೀ ಭೂ ಮಾಲಿಕರಿಂದ ದುಡಿಯುವ ರೈತರ ಶೋಷಣೆ ನಡೆಯುತ್ತಿತ್ತು. ಜೀತದಾಳುಗಳಾಗಿ ದೈನೇಸಿ ಸ್ಥಿತಿಯಲ್ಲಿದ್ದ ರೈತರ ಬವಣೆ ಹೋರಾಟಗಾರರು, ವಿದ್ಯಾರ್ಥಿಗಳನ್ನು ಸೆಳೆಯಿತು. ಚಾರು ಅವರ 'ವರ್ಗಶತ್ರು ವಿನಾಶ ಅಭಿಯಾನ'ಕ್ಕೆ ಬೆಂಬಲವಾಗಿ ಅಲ್ಲಲ್ಲಿ ಜಮೀನ್ದಾರರ ಹತ್ಯೆಗಳಾಗತೊಡಗಿದವು. ಜಮೀನ್ದಾರರ ಅಕ್ರಮ ಭೂಮಿಯನ್ನೆಲ್ಲ ರೈತರಿಗೆ ಹಂಚಲಾಯಿತು. ಹತ್ಯೆಯಲ್ಲಿ





ಭಾಗಿಗಳಾದವರು ಕ್ರಾಂತಿಕಾರಿ 'ನಕ್ಸಲೈಟ'ರೆಂದು ಕೆಲವೆಡೆ ರಾಬಿನ್‌ಹುಡ್ ಪಟ್ಟ ಪಡೆದರೆ, ಪ್ರಭುತ್ವ–ಪೊಲೀಸರಿಂದ ಉಗ್ರಗಾಮಿಗಳೆಂದು ಗುರುತಿಸಲ್ಪಟ್ಟರು.

ಅಂಥ ಕಾಲದಲ್ಲಿ ಕಾಮ್ರೇಡ್ ರಾಮಚಂದ್ರ ಸಿಂಗ್ ಅವರ ೧೨ ಜನರ ತಂಡ ಬಂಗಾರ್‌ಮಾವ್‌ನಿಂದ ೧೫ ಕಿಮೀ ದೂರದಲ್ಲಿದ್ದ ಬಖೌರಾ ಹಳ್ಳಿಯ ಶೋಷಕ ಜಮೀನ್ದಾರನನ್ನು 'ಇಲ್ಲ'ವಾಗಿಸಿದರು. ಬಖೌರಾದ ಸತ್ಯಪಾಲ ಕೂಡ ಹತ್ಯೆಯಲ್ಲಿ ಭಾಗಿಯಾಗಿದ್ದ. ಮೂರೇ ದಿನದಲ್ಲಿ ಪೊಲೀಸರು ಹತ್ಯೆ ಮಾಡಿದವರನ್ನು ಬಂಧಿಸಿದರು. ಹರ್ದೋಯ್‌ನ ಜಿಲ್ಲಾ ಪೊಲೀಸ್ ಕಚೇರಿಯಲ್ಲಿ ಸಿಂಗ್ ಅವರನ್ನು ಅರ್ಧ ಡಜ಼ನು ತನಿಖಾಧಿಕಾರಿಗಳು ಸಾಮ, ದಾನ, ಭೇದ, ದಂಡ ಉಪಾಯಗಳನ್ನು ಬಳಸಿ ವಿಚಾರಣೆ ನಡೆಸಿದರು. ಮೈತುಂಬ ಗಾಯ, ನೋವುಗಳೊಡನೆ ಸಿಂಗ್ ಹರ್ದೋಯ್ ಜೈಲಿಗೆ ಬಂದಿಳಿದರು.

ಕ್ರಾಂತಿಯ ಕನಸಿನ ದಾರಿಯು ಸಿಂಗ್ ಅವರನ್ನು ಅಪರಾಧಿಯಾಗಿಸಿತು. ಬಖೌರಾ ಗ್ರಾಮವಾಸಿ ಸತ್ಯಪಾಲನಿಗೆ ಮರಣದಂಡನೆ ವಿಧಿಸಲ್ಪಟ್ಟರೆ, ಇತರರಿಗೆ ಜೀವಾವಧಿ ಜೈಲು ಶಿಕ್ಷೆಯಾಯಿತು. ಅವಮಾನ, ಹಿಂಸೆ, ಘೋರ ಅಪರಾಧಿ ಎಂಬ ಹಣೆಪಟ್ಟಿ, ಕಾಲುಗಳಿಗೆ ೨೮ ತಿಂಗಳು ಕಬ್ಬಿಣದ ಸಂಕಲೆ, ಬೈಗುಳ, ಹಸಿವೆ ಇವೆಲ್ಲ ಅವರ ತಾರುಣ್ಯದ ದಿನಗಳನ್ನು ಕಸಿದುಕೊಂಡವು. ಒಂದೇ ಒಂದು ಹತ್ಯೆಯ ಭಾಗೀದಾರಿಕೆಯಿಂದ ಬದುಕನ್ನೇ ಮುಡಿಪಾಗಿಟ್ಟ ಹೋರಾಟಗಾರನ ಕನಸುಗಳೆಲ್ಲ ಕರಗಿಹೋದವು. ೧೯೭೦ರಿಂದ ೧೯೮೩ರವರೆಗೆ ತರುಣನೊಬ್ಬನ ಕ್ರಿಯಾಶೀಲತೆಯನ್ನು ಸ್ವತಂತ್ರ ಭಾರತದ ಜೈಲಿನ ಗೋಡೆಗಳು ಹೊಸಕಿಹಾಕಿದವು.

ಆದರೆ ಕಂಗೆಡದ ಸಿಂಗ್ ಜೈಲಿನ ಹಿಂಸೆಯನ್ನು ದಿಟ್ಟವಾಗಿ ಎದುರಿಸಿದರು. ಹಿಂಸಾರೂಪಿಗಳೇ ಆಗಿದ್ದ ಆಫೀಸರರೆದುರು ನೇರವಾಗಿ ನಿಂತು ಮಾತನಾಡಿದರು. ಪರಿಣಾಮವಾಗಿ ಇನ್ನಷ್ಟು ಶಿಕ್ಷೆ ಪಡೆದರು. ಘೋಷಣೆ ಕೂಗುತ್ತ ಜೈಲಿನೊಳಬಂದ ಗಾಯಾಳು ಸಿಂಗ್ ಮಹಾ ಅಪಾಯಕಾರಿ ಖೈದಿಯೆಂದು ಎರಡೂವರೆ ವರ್ಷ ಕಾಲಿಗೆ ಕೋಳ ತೊಡಿಸಿ ನಡೆಸಿದರು. ಇಂಥವೆಲ್ಲ ಅಸಹನೀಯ ಅನುಭವಗಳನ್ನು ಸಿಕ್ಕ ಹಾಳೆಗಳ ಮೇಲೆಲ್ಲ ಪುಟಗಟ್ಟಲೆ ಬರೆದಿಟ್ಟ ಸಿಂಗ್, ತಾವಿದ್ದ ಜೈಲುಗಳ ಪರಿಸ್ಥಿತಿ, ಅಧಿಕಾರಿಗಳು, ಕೆಟ್ಟ ಆಹಾರ, ಭ್ರಷ್ಟತೆ, ಅಷ್ಟಿಷ್ಟು ಅನುಕಂಪ ಎಲ್ಲವನ್ನೂ ದಾಖಲಿಸಿದರು. ಗುಟ್ಟಾಗಿ ಹತ್ತಿ ಲಡಿಗಳ ನಡುವೆ ಬರೆದದ್ದನ್ನು ಸಂರಕ್ಷಿಸಿ ಜೈಲಿನಿಂದ ಹೊರಗೆ ಕಳ್ಳಸಾಗಣೆ ಮಾಡಿದರು.

ಹೀಗೆ, ೧೩ ವರ್ಷ ಕಾಲ ಈ ಜೈಲಿನಿಂದ ಆ ಜೈಲಿಗೆ ನೆಲದಿಂದ ಕಲ್ಲು ಬೆಂಚಿಗೆ, ವಾರ್ಡಿನಿಂದ ಒಳಕೋಣೆಗಳಿಗೆ ತರುಣ ರಾಮಚಂದ್ರ ಸಿಂಗ್ ಅಡ್ಡಾಡಿದ. ಟಿಬಿ, ಜಾಂಡೀಸ್, ಅಪೌಷ್ಟಿಕತೆ, ಟೈಫಾಯ್ಡ್, ಹಸಿವೆ, ಪ್ರೇಮ, ವಿರಹ, ವಿಷಣ್ಣತೆ, ಕನಸು, ಆಸೆ, ಕೆಚ್ಚು ಎಲ್ಲವನ್ನೂ ನುಂಗಿ ಬದುಕಿದ. ಜೈಲುವಾಸಿಯಾಗಿದ್ದಾಗಲೇ ಮೊಗ್ಗಾಗಿದ್ದ ಪ್ರೇಮವರಳಿ 'ಮುನ್ನಿ' ರಾಮದುಲಾರಿಯನ್ನು ಮನಸ್ಸಾಕ್ಷಿಯಾಗಿ ವಿವಾಹವಾದ. ಕ್ರಾಂತಿಗೆ ಪ್ರೇಮ, ಹೆಣ್ಣು ಇವೆಲ್ಲ ಅಡ್ಡಿಯೆಂದು ಜೊತೆಗಾರರು ಟೀಕಿಸಿದಾಗ ಪ್ರೀತಿ ಮತ್ತು ಕ್ರಾಂತಿ ವಿರುದ್ಧ ಪದಗಳಾದರೆ ತಾನು ಕ್ರಾಂತಿಕಾರಿಯೇ ಅಲ್ಲವೆಂದು ವಾದಿಸಿದ. ಜೈಲಿನಲ್ಲಿದ್ದವನಿಗಾಗಿ ಮನೆ ಬಿಟ್ಟು ಓಡಿ ಬಂದಿದ್ದ ಪುಟ್ಟ ಗೆಳತಿ, ದೀರ್ಘಾವಧಿಯ ಜೈಲುಶಿಕ್ಷೆಗೆ ಬೇಸರಗೊಂಡೋ, ಭವಿಷ್ಯ ಕುರಿತು ಆತಂಕಗೊಂಡೋ ಅಂತೂ ಕಾರಣವನ್ನೂ ಹೇಳದೆ ಒಂದು ದಿನ ಅವರನ್ನು ತೊರೆದಳು. ಬೇರೊಬ್ಬರೊಡನೆ ಹೋಗಿಬಿಟ್ಟಳು. ಪ್ರೇಮವೈಫಲ್ಯದ ನೋವು, ಹತಾಶೆಯ ಜೊತೆಗೆ ದೈಹಿಕ ಕಾಯಿಲೆಯ ಸಂಕಟವನ್ನೂ ಅನುಭವಿಸುತ್ತ ಅತಿಕಷ್ಟದ ದಿನಗಳನ್ನು ಸಿಂಗ್ ಕಳೆದರು. ಜೈಲೆಂಬುದು ತನ್ನ ಪಾಲಿಗೆ ಎಂದೂ ಮುಗಿಯದ ನರಕ ಎನಿಸುವ ಹೊತ್ತಿಗೇ...


ರಾಮಚಂದ್ರ ಸಿಂಗ್

೧೯೮೩, ಸೆಪ್ಟೆಂಬರ್ ೨೯ರಂದು ಇದ್ದಕ್ಕಿದ್ದಂತೆ ಫೈಜಾಬಾದಿನ ಜೈಲರನು ಅವರು ಬಿಡುಗಡೆಯಾಗಿರುವುದಾಗಿ ತಿಳಿಸಿದಾಗ ನಂಬುವುದೇ ಕಷ್ಟವಾಯಿತು. ಜೈಲಿನಿಂದ ಬೇಲ್ ಮೇಲೆ ಹೊರಬಂದಿದ್ದ ಹಿರಿಯ ಕಾಮ್ರೇಡ್ ಹತ್ತಾರು ವರ್ಷ ಜೈಲಿನಲ್ಲಿ ಕಳೆದ ಸಂಗಾತಿಗಳನ್ನು ಬಿಡುಗಡೆ ಮಾಡಿಸುವಲ್ಲಿ ಯಶಸ್ವಿಯಾಗಿದ್ದರು. ಜೈಲಿನ ಆವರಣದಿಂದ ಹೊರಬಂದವರು ಬಿಡುಗಡೆಯು ನಿಜವೋ, ಕನಸೋ ಎಂದು ಮತ್ತೆ ಮತ್ತೆ ತಿರುಗಿ ನೋಡಿದರು. ಪೊಲೀಸರು ಇನ್ನೇನು ಅಟ್ಟಿಸಿಕೊಂಡು ಬರುವರೆಂಬ ಭ್ರಮೆಗೊಳಗಾದರು. ಆದರೆ ಇಲ್ಲ, ಬಿಡುಗಡೆಯೆಂಬ ಬಹುದಿನಗಳ ಕನಸು ನನಸಾಗಿತ್ತು.

ಜೈಲಿನಿಂದ ಹೊರಬಂದವರನ್ನು ಸ್ವಾಗತಿಸಲು ಮನೆಯವರಾಗಲೀ, ಪ್ರೇಮಿಯಾಗಲೀ ಯಾರೂ ಇರಲಿಲ್ಲ. ಏಕಾಂಗಿಯಾಗಿ ಕಾನ್ಪುರ ತಲುಪಿ ವೃದ್ಧೆ ತಾಯಿಯನ್ನು ಭೇಟಿಯಾದರು. ವಿವಾಹಿತನೊಬ್ಬನೊಡನೆ ದೆಹಲಿ ಸೇರಿ, ಹೆಸರು ಬದಲಿಸಿಕೊಂಡು ಒಂದು ಮಗುವಿನ ತಾಯಾಗಿದ್ದ ಮುನ್ನಿಯನ್ನು ಹುಡುಕಿ ಭೇಟಿಯಾದರು. ಆ ಸಂದರ್ಭವನ್ನು ಸಿಂಗ್ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಅವಳಿಗೆ ಶುಭ ಹಾರೈಸಿ ಬಂದವರು ಬದುಕು ಕಟ್ಟಿಕೊಳ್ಳಲು ದುಡಿಮೆ ಮಾಡುತ್ತ ಪಕ್ಷಕ್ಕಾಗಿಯೂ ದುಡಿದರು. ಸಿಪಿಐ (ಎಂಎಲ್) ಜನಶಕ್ತಿಯಲ್ಲಿ ಕೆಲಕಾಲ ಇದ್ದ ಸಿಂಗ್ ನಂತರ ಸಿಪಿಐ (ಎಂಎಲ್) ರೆಡ್‌ಸ್ಟಾರ್‌ನಲ್ಲಿ ಕ್ರಿಯಾಶೀಲರಾದರು. ಮದುವೆಯಾಗಿ ಮಕ್ಕಳ ತಂದೆಯೂ ಆದರು.

ಬಿಡುಗಡೆಯಾಗಿ ಬಂದ ನಂತರ ಜೈಲು ಬರಹವನ್ನು ಧಾರಾವಾಹಿಯಾಗಿ ಹಿಂದಿ ನಿಯತಕಾಲಿಕದಲ್ಲಿ ಪ್ರಕಟಿಸಿದರು. ನಂತರ 'ಸಮಕಾಲೀನ ದಸ್ತಾವೇಜ್' ಎಂಬ ಜನಪರ ಪತ್ರಿಕೆಯ ವಿಶೇಷ ಸಂಚಿಕೆಯಲ್ಲಿ ಪೂರ್ಣಪಾಠವಾಗಿ ಪ್ರಕಟವಾಯಿತು. ಹಿಂದಿಯ ಬರಹವು ೨೦೧೭ರಲ್ಲಿ ಇಂಗ್ಲಿಷ್‌ಗೆ ಅನುವಾದಗೊಂಡು 'ಥರ್ಟೀನ್ ಇಯರ್ಸ್: ಎ ನಕ್ಸಲೈಟ್ಸ್ ಪ್ರಿಸನ್ ಡೈರಿ' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಮಾರ್ಚ್ ೨, ೨೦೧೮ರಂದು ಬೆಳಗಿನ ಜಾವ ಕೊನೆಯುಸಿರೆಳೆದ ಸಿಂಗ್ ಅವರ ಹೋರಾಟದ ಬದುಕು ಕೆಂಪು ಪುಸ್ತಕದ ಒಂದು ಪುಟವಾಗಿ ಚರಿತ್ರೆಗೆ ಸಂದಿದೆ.

**ಹಿಂಸಾವತಾರ**

ಆಳುವ ವ್ಯವಸ್ಥೆಯ ಭಾಗವಾಗಿ ನ್ಯಾಯ ವ್ಯವಸ್ಥೆಯಿದೆ. ನ್ಯಾಯ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿ ಶಿಕ್ಷೆ ನೀಡುವ ಜೈಲುಗಳಿವೆ. ಭಗತ್ ಸಿಂಗ್ ತನ್ನ ಜೈಲು ಡೈರಿಯಲ್ಲೊಂದು ಕಡೆ ಬರೆದಿರುವಂತೆ, ಸರಿತಪ್ಪುಗಳ ಕಾನೂನಿನಲ್ಲಿ 'ಸರಿ'ಯನ್ನು ಉಲ್ಲಂಘಿಸುವ ವ್ಯಕ್ತಿ ಒಂದು ಸಾಲಕ್ಕೆ, ಋಣಕ್ಕೆ ಒಳಪಡುತ್ತಾನೆ. ನ್ಯಾಯವ್ಯವಸ್ಥೆ ಆ ಋಣ ಶಿಕ್ಷೆಯ ರೂಪದಲ್ಲಿ ಸಂದಾಯವಾಗಬೇಕು ಎನ್ನುತ್ತದೆ. ಅದರ ಉದ್ದೇಶ ಭಂಗಗೊಂಡ ಕಾನೂನನ್ನು ತೃಪ್ತಿಗೊಳಿಸುವುದು. ಶಿಕ್ಷೆ ಎನ್ನುವುದೇ ಒಂದು 'ತಪ್ಪು' ಆದರೂ ಒಳ್ಳೆಯದನ್ನು ಸಾಧಿಸಲು ಕೈಗೊಂಡ 'ಸರಿ' ಎಂಬ ಸಮರ್ಥನೆ ಅದಕ್ಕಿದೆ. ಬಹಳಷ್ಟು ಜನ ಶಿಕ್ಷೆ ಎನ್ನುವುದು ಎಸಗಲೇಬೇಕಾದ ಅವಶ್ಯಕ ತಪ್ಪು ಎಂದೇ ಭಾವಿಸಿದ್ದಾರೆ.

ಆದರೆ ಮನುಷ್ಯನ ಅಮಾನವೀಯತೆಯನ್ನು ನಿಯಂತ್ರಿಸಲು ತೆರೆಯಲ್ಪಟ್ಟ ಜೈಲುಗಳೇ ಪಾಶವೀ ಹಿಂಸಾಕೂಪಗಳಾಗಿರುವ ವೈರುಧ್ಯ ನಮ್ಮ ಮುಂದಿದೆ. ಕಠೋರ ಶಿಕ್ಷೆಯ ಪರಿಣಾಮವಾಗಿ ಅಪಾಯಕಾರಿ ಹಾಗೂ ಹತಾಶ ಅಪರಾಧಿಗಳ ಗುಂಪು ಉದ್ಭವವಾಗುತ್ತದೆ. ವಿಶ್ವಾದ್ಯಂತ ಎಲ್ಲ ದೇಶಗಳ ಜೈಲುವಾಸಿಗಳು ತಮ್ಮ ದಿನಚರಿ ಬರೆದಿಟ್ಟರೆ ಅದು ಶಿಕ್ಷಾ ವ್ಯವಸ್ಥೆಯ ನಿರುಪಯುಕ್ತತೆಯನ್ನೂ, ಅಪಾಯವನ್ನೂ ತಿಳಿಸಿಯಾವು. ಜೈಲಿನಿಂದ ಹೊರಬಂದ ವ್ಯಕ್ತಿತ್ವಗಳು ಏನೇನಾಗಿ ಬದಲಾದವು ಎಂದು ನೋಡಿದರೆ ವ್ಯವಸ್ಥೆಯ ಪೊಳ್ಳುತನ ಅರಿವಾಗುತ್ತದೆ. ಸಮಾಜಕ್ಕಾಗಲೀ, ಬಂಧಿತರಿಗಾಗಲೀ, ಅವರ ಕುಟುಂಬಗಳಿಗಾಗಲೀ ಜೈಲು ವ್ಯವಸ್ಥೆಯಿಂದ ಕಿಂಚಿತ್ ಉಪಯೋಗವಿಲ್ಲ ಎಂದಾದರೆ ಅದು ಏಕೆ ಮುಂದುವರೆದುಕೊಂಡು ಬಂದಿದೆ? ಮಾನವಹಕ್ಕುಗಳ ಯುಗದಲ್ಲಿ ಭೂಮಿ ಮೇಲಿರುವ ಲಕ್ಷಾಂತರ ಜೈಲುಗಳಲ್ಲಿ ಇಂದಿಗೂ ಪ್ರಚ್ಛನ್ನ ಹಿಂಸೆ ಏಕೆ ತಾಂಡವವಾಡುತ್ತಿದೆ? ಎಲ್ಲ ತರಹದ ಮೋಸ, ದೌರ್ಜನ್ಯ, ಅನ್ಯಾಯಗಳು ಜೈಲಿನೊಳಗೇ ಸಂಭವಿಸುತ್ತಿದ್ದರೂ ಅದಕ್ಕೆ ನಿಯಂತ್ರಣವಿಲ್ಲವೇ?

ಇಂತಹ ಹಲವಾರು ಪ್ರಶ್ನೆಗಳನ್ನು ಈ ಪುಸ್ತಕ ಎತ್ತುತ್ತದೆ. ಜೈಲಿನ ಪರಿಸ್ಥಿತಿ, ಚಾಲ್ತಿಯಲ್ಲಿರುವ ಶಿಕ್ಷೆಯ ಕುರಿತು ಕೆಲವು ದಿಗ್ಭ್ರಮೆಗೊಳಿಸುವ ಮಾಹಿತಿ ನೀಡುತ್ತದೆ. ಭಗತ್ ಸಿಂಗ್ ಕಾಲಕ್ಕೂ, ಈ ಕಾಲಕ್ಕೂ ಜೈಲುಗಳ ಪರಿಸ್ಥಿತಿಯಲ್ಲಿ ವ್ಯತ್ಯಾಸವಿಲ್ಲ ಎಂದು ಮನದಟ್ಟಾಗುತ್ತದೆ.

ಜೈಲಿನ ಹಿಂಸಾವತಾರ, ಲಂಚಾವತಾರ ನಮ್ಮ ಊಹೆಗೂ ನಿಲುಕಲಾರದು. ಖೈದಿಯೇ ಇರಲಿ, ಸಿಬ್ಬಂದಿಯೇ ಇರಲಿ, ಅಲ್ಲಿ ಮನುಷ್ಯ ಮನಸು ವಿಕಾಸಗೊಂಡು ಅರಳಲು ಸಾಧ್ಯವೇ ಇಲ್ಲ. ಒಮ್ಮೆ

ಅಪರಾಧಿಯಾಗಿ ಹೋದವ ಮುಂದೆಂದೂ ಅಪರಾಧಿಯಾಗಿಯೇ ಇರುವಂತೆ ಮನಃಪರಿವರ್ತನೆ ಮಾಡಿಸುವ ಪರಿಸ್ಥಿತಿ ಜೈಲುಗಳಲ್ಲಿದೆ. ಮಾನವೀಯ ಗುಣಗಳನ್ನು ಸಂಪೂರ್ಣ ಕಳೆದುಕೊಂಡ ಸಿಬ್ಬಂದಿಗಳು ಖೈದಿಗಳನ್ನು ಮನಬಂದಂತೆ ನಡೆಸಿಕೊಳ್ಳುತ್ತ, ಎಣೆಯಿಲ್ಲದಷ್ಟು ಹಿಂಸಿಸುತ್ತ, ಎಗ್ಗಿಲ್ಲದೆ ಅನ್ಯಾಯವೆಸಗುತ್ತ ಜೈಲಿರಬೇಕಾದದ್ದೇ ಹಾಗೆಂಬ ಪರಿಸ್ಥಿತಿ ಸೃಷ್ಟಿಸಿದ್ದಾರೆ. ಕ್ರೌರ್ಯ ಎಷ್ಟು ಹಾಸುಹೊಕ್ಕಾಗಿದೆಯೆಂದರೆ ಲಾಠಿ, ಬೆತ್ತ, ಕೋಳ, ಬೂಟು, ಸಲಿಕೆಗಳೇ ಮನುಷ್ಯರಿಗಿಂತ ಹೆಚ್ಚು ಮಾತನಾಡುತ್ತವೆ. ನೇರ ನಿಲ್ಲಲಿಲ್ಲ, ಕೆಲಸ ಬೇಗ ಬೇಗ ಮಾಡುವುದಿಲ್ಲ, ಗುರಾಯಿಸುವಂತೆ ನೋಡಿದ, ಪೂರ್ತಿ ತಿನ್ನಲಿಲ್ಲ ಇತ್ಯಾದಿ – ತಪ್ಪೇ ಅಲ್ಲದ ತಪ್ಪಿಗೆ ಚರ್ಮ ಸುಲಿವಂತೆ ಹೊಡೆತ ತಿನ್ನಬೇಕು. ಮಾಂಸದ ತುಂಡು ಹಾರಿಬೀಳುವಂತೆ, ಎಲುಬು ಮುರಿಯುವಂತೆ ನಿಷ್ಕಾರಣವಾಗಿ ಹೊಡೆತ ತಿನ್ನಬೇಕು. ನೋವೆಂದು ನರಳಿ, ಕೆಲಸ ನಿಧಾನವಾದರೆ ಬೆಲ್ಟಿನಿಂದಲೋ, ಬೂಟುಗಾಲಿನಿಂದಲೋ ಗಾಯದ ಮೇಲೇ ಹೊಡೆತ ತಿನ್ನಬೇಕು. ದೇಹದ ಅಣುಕಣವೂ ನೋವಿನಿಂದ ಚೀರುವಾಗ ಮತ್ತೆ ಮತ್ತೆ ಆಗುವ ನೋವುಗಳು ತಿಳಿಯುತ್ತಲೇ ಇರಲಿಲ್ಲ ಎಂದು ಒಂದೆಡೆ ಸಿಂಗ್ ಬರೆದಿದ್ದಾರೆ. ತಲೆ ಕೆಳಗಾಗಿ ಮರಕ್ಕೆ ಕಟ್ಟಿ ಹೊಡೆಯುವುದು (ಗುಮ್ಮಿ), ಬರೆ ಹಾಕುವುದು, ಗುದ್ದುವುದು, ಮಲಮೂತ್ರ ತುಂಬಿ ನಾರುವ ಒಂಟಿಸೆಲ್‌ಗಳ ಕತ್ತಲ ಕೂಪದಲ್ಲಿ ಬಿಸಾಡಿ ಹೊಡೆಯುವುದು, ತಿಂದರೂ ಹೊಡೆತ, ತಿನ್ನದಿದ್ದರೂ ಹೊಡೆತ. ಸುಮ್ಮನಿದ್ದರೂ ಹೊಡೆತ, ಅಯ್ಯೋ ಎಂದರೂ ಹೊಡೆತ, ತಿರುಗಿಬಿದ್ದರೆ ಲೆಕ್ಕವಿಲ್ಲದಷ್ಟು ಹೊಡೆತ. ಇಷ್ಟೆಲ್ಲ ಆದ ಮೇಲೆ ಅಷ್ಟಿಷ್ಟು ಮುಲಾಮು ಸವರಿಕೊಂಡು ಕೂಡಲೇ ಕಠಿಣ ಶ್ರಮದ ಕೆಲಸಕ್ಕೆ ತೆರಳಬೇಕು. ರುಚಿಯಿಲ್ಲದ ಕೆಟ್ಟ ಊಟ ಉಣ್ಣಬೇಕು. ಮುಳ್ಳುಕಂಟಿಯಲ್ಲರಳಿದ ಹುವ್ವಿನಂತೆ, ಜೈಲಿನಲ್ಲೂ ಇಂಥವರು ಇರಬಹುದಾ ಎನ್ನುವಂತೆ ಹಿಂಸಾ ಮಹಾಸಾಗರದ ನಡುವೆ ಅಲ್ಲೊಬ್ಬರು, ಇಲ್ಲೊಬ್ಬರು ತೋರಿಸುವ ಹನಿ ಪ್ರೀತಿಯಲ್ಲಿ ಕುಟುಕುಜೀವ ಹಿಡಿದಿಟ್ಟುಕೊಳ್ಳಬೇಕು.

ಖೈದಿಗಳೆಂದರೆ ಸಮಾಜಕ್ಕೆಷ್ಟು ಅಸಡ್ಡೆ ಇದೆಯೋ ಅದರ ನೂರು ಪಟ್ಟು ಜೈಲು ಸಿಬ್ಬಂದಿಗಳಿಗಿದೆ. ಖೈದಿಗಳ ಲೆಕ್ಕದ ಮೊಟ್ಟೆ, ಹಾಲು, ಬೇಳೆಕಾಳು, ಹಣ್ಣನ್ನೆಲ್ಲ ಕಬಳಿಸಿ, ನೀರು ಸಾರು, ಅರೆಬೆಂದ ಅನ್ನ–ಚಪಾತಿ, ಹುಳ–ಕುಟ್ಟೆ–ಜಿರಲೆ ತೇಲುವ ಸಾಂಬಾರು ಬಡಿಸುತ್ತಾರೆ. ಖೈದಿ ಘನತೆಯಿಂದ ನಿಂತು ಅನ್ಯಾಯವನ್ನು, ಹಿಂಸೆಯನ್ನು ಪ್ರಶ್ನಿಸಿದರೆ; ಧೈರ್ಯವಾಗಿ, ತಾರ್ಕಿಕವಾಗಿ ಮಾತನಾಡಲು ಸಾಧ್ಯವಾದರೆ ಸಿಬ್ಬಂದಿಗಳ ಹಿಂಸಾರತಿ ಇಳಿಯಬಹುದಿತ್ತು. ಅವರು ಮನುಷ್ಯರಾಗಿ ಗೇರು ಬದಲಿಸಿಕೊಳ್ಳಬಹುದಿತ್ತು. ಆದರೆ ಅಷ್ಟು ಧೈರ್ಯವೂ ಉಳಿಯದಂತೆ ಸಿಬ್ಬಂದಿಗಳ ವರ್ತನೆಯಿರುತ್ತದೆ. ನಿರಂತರ ಹಿಂಸೆಗೀಡಾಗಿ ಕೆಲವರು ಭಕ್ತರಾಗುತ್ತಾರೆ, ಕೆಲವರು ಗುಲಾಮರಾಗುತ್ತಾರೆ, ಸುಳ್ಳರಾಗುತ್ತಾರೆ, ತಾವೂ ಹಿಂಸೆಗಿಳಿಯುತ್ತಾರೆ, ತಮ್ಮನ್ನು ಮನುಷ್ಯರಂತೆ ನಡೆಸಿಕೊಳ್ಳದಿದ್ದಾಗ ಮನುಷ್ಯತ್ವವನ್ನೇ ಮರೆಯುತ್ತಾರೆ. ಒಮ್ಮೆ ಅಪರಾಧಿಯಾಗಿ ಜೈಲು ಹೊಕ್ಕವರು ಸದಾ ಅಪರಾಧಿಯಾಗಿ ಉಳಿಯುವಂತಾಗುವುದು ಹೀಗೆ.

ವಿಚಾರಣಾಧೀನ ಖೈದಿ ಮತ್ತು ಶಿಕ್ಷೆ ಅನುಭವಿಸುವ ಖೈದಿಗಳಿಗೆ ಕೊಡುವ ಇಂಥ ಹಿಂಸೆಯನ್ನು ನಿಯಂತ್ರಿಸಲು ಯಾವ ಕಾನೂನೂ ನೆರವಿಗೆ ಬರುವುದಿಲ್ಲ. ಖೈದಿಗಳನ್ನು ರಕ್ಷಿಸುವವರು ಯಾರೆಂದರೆ ಯಾರೂ ಇರುವುದಿಲ್ಲ. ಪ್ರಶ್ನಿಸುವವರಿಗೆ ನಕ್ಸಲೈಟರೆಂಬ ಹಣೆಪಟ್ಟಿ ಹಚ್ಚಿ, ಆದಷ್ಟು ಹೆಚ್ಚು ಕಾಲ ಜೈಲಿನಲ್ಲಿ ಕೂಡಿಹಾಕುವ ಹುನ್ನಾರ ಆಳುವ ವರ್ಗಕ್ಕಿರುತ್ತದೆ.

ಹಿಂಸೆಗೆ ಅದೆಷ್ಟು ಸಹಸ್ರ ಮುಖಗಳು! ಕ್ರೌರ್ಯಕ್ಕೆ ಅದೆಷ್ಟು ಅವತಾರಗಳು!!

**ಹಸಿವು, ಲೈಂಗಿಕತೆ, ಜಾತಿ...**

ಈ ಪುಸ್ತಕ ಓದುವಾಗ ಒಂದಂತೂ ದೃಢವಾಯಿತು: ಜೈಲು ಕಥನ ಎಂದರೆ ಅಮುಕ್ತರ ಹಸಿವಿನ ಕಥನ. ಜೈಲಿನ ಹಸಿವಿಗೆ ಕಾರಣ ಪ್ರಾಕೃತಿಕ ಬರವಲ್ಲ, ಅದು ಶಿಕ್ಷೆ ಎಂದು ಒತ್ತಾಯವಾಗಿ ಹೇರಲ್ಪಟ್ಟ ವಿಪತ್ತು ಎಂದೇ ತೀವ್ರತೆಯೂ ಹೆಚ್ಚು. ಈ ಜಗತ್ತು ಹಸಿವಿನಿಂದ ಕಂಗೆಟ್ಟಿದೆ. ಅದರಲ್ಲು ಜೈಲು ಹಸಿವಿನ ಕೂಪವೇ ಆಗಿದೆ. ಮನುಷ್ಯರ ಹಸಿವು ಅನ್ನ ನೀರಿಗಾಗಿ ಇದೆ ಮಾತ್ರವಲ್ಲ, ಒಂದು ಮುಷ್ಟಿ ಪ್ರೀತಿಗೆ, ಮನ್ನಣೆಗೆ, ಕಾಳಜಿಗೆ, ಅಧಿಕಾರಕ್ಕೆ, ಗೌರವಕ್ಕೆ, ಘನತೆಯ ಬದುಕಿಗಾಗಿಯೂ ಇದೆ. ಇವನ್ನೆಲ್ಲ ಸ್ವತಂತ್ರ ಸಮಾಜದ ಮನುಷ್ಯರಷ್ಟೇ ಅಲ್ಲ, ಅಮುಕ್ತರಾದ ಜೈಲುವಾಸಿಗಳೂ ಬಯಸುತ್ತಾರೆ.

ಅರೆಹೊಟ್ಟೆ ತುಂಬುವಷ್ಟೇ ಆಹಾರ, ತಣಿಯದ ನಾಲಿಗೆ, ತಿನ್ನಬಾರದಷ್ಟು ಕೆಟ್ಟ ರುಚಿಯ ಕೂಳು – ಇದರಲ್ಲೆ ಹಗಲಿರುಳು ಸವೆಸುವ ಖೈದಿಗಳು ಒಂದು ಒಳ್ಳೆಯ ಊಟಕ್ಕೆ, ತಿಂಡಿಗೆ ತಿಂಗಳುಗಟ್ಟಲೆ ಕಾಯುತ್ತಾರೆ. ಒಂದು ಪಾಯಸದ ಭಾಗ್ಯಕ್ಕಾಗಿ ಆಗಸ್ಟ್ ೧೫, ಜನವರಿ ೨೬ಕ್ಕೆ ಹಪಹಪಿಸುತ್ತಾರೆ. ನಾಲಗೆ ತಣಿಯದೆ ಎಂಥ ದೈನೇಸಿ ಸ್ಥಿತಿ ಮುಟ್ಟುವರೆಂದರೆ ಸಣ್ಣಪುಟ್ಟ ಕುರುಕಲು ತಿನಿಸುಗಳೇ ಅತ್ಯಮೂಲ್ಯ ಸಂಪತ್ತು. ಅವಕ್ಕಾಗಿ ಯುದ್ಧಗಳೇ ನಡೆಯುತ್ತವೆ. ಘನಘೋರ ಕ್ರಿಮಿನಲ್ಲುಗಳೂ ಬೀಡಿಗಾಗಿ, ಬೆಲ್ಲಕ್ಕಾಗಿ ಜೈಲಿನ ವಾರ್ಡರು, ಜೈಲರುಗಳೆದುರು ದೈನ್ಯರಾಗುತ್ತಾರೆ. ಮನೆಯವರು ತಂದುಕೊಟ್ಟ ಸೇಂಗಾ, ಕಡಲೆಕಾಳು, ಬೆಲ್ಲದ ತುಂಡು, ಬೀಡಿಗಳನ್ನು ರಕ್ಷಿಸಿಕೊಳ್ಳಲು ಹರಸಾಹಸ ಪಡುತ್ತಾರೆ.

ಹೊಟ್ಟೆ ಹಸಿವಿನಂತೆಯೇ ಖೈದಿಗಳನ್ನು ಕಾಡುವ ಮತ್ತೊಂದು ಸಂಗತಿ ಲೈಂಗಿಕ ಹಸಿವು. ಈ ಕುರಿತು ಪುಸ್ತಕವು ಬೆಚ್ಚಿಬೀಳಿಸುವ ವಾಸ್ತವವನ್ನು ಹೊರಹಾಕಿದೆ. ಸರಳುಗಳ ಹಿಂದೆ ದೇಹವಾಂಛೆ ತಣಿಸುವ ದಾರಿಗಳಿಲ್ಲದ ಕಾರಣ ಅಸಹಜ, ವಿಕೃತ ಲೈಂಗಿಕತೆಗೆಳಸುವವರೇ ಹೆಚ್ಚು. ಗುಲಾಮರಾಗಿ, ಅವಮಾನಿತರಾಗಿ, ಹಸಿದವರಾಗಿ ಯಾವ ಸ್ವಾತಂತ್ರ್ಯವೂ ಇಲ್ಲದೆ ಹಿಂಸಾಸಾಗರದಲ್ಲಿ ಬದುಕುವವರ ಲೈಂಗಿಕ ತೃಪ್ತಿಯು ಹಿಂಸೆ, ವಿಕೃತಿಯ ದಾರಿಯನ್ನೇ ಹಿಡಿಯುವ ಸಾಧ್ಯತೆಯಿರುತ್ತದೆ. ಎಳೆಯ ಹುಡುಗರನ್ನು ಸಲಿಂಗ ರತಿಗೆ ಬಳಸುವುದು, ಅವ ತನಗಷ್ಟೆ ವಿಧೇಯನಾಗಿರಬೇಕೆಂದು ಒತ್ತಾಯ ಹೇರುವುದು, ಕೂಗಾಡುವ ಹುಡುಗರ ಇಷ್ಟಾನಿಷ್ಟ ಲೆಕ್ಕಿಸದೆ ಗುಂಪುಗುಂಪಾಗಿ ಸಲಿಂಗರತಿಗೆಳಸುವುದು ಜೈಲಿನಲ್ಲಿ ತುಂಬ ಸಾಮಾನ್ಯ. ಖೈದಿಗಳು ದಿನನಿತ್ಯ ಆಡುವ ಭಾಷೆಯಲ್ಲಿ ಉಳಿದ ಸಮಾಜ ಅಶ್ಲೀಲ ಎನ್ನುವ, ಊಹಿಸಲಾರದಷ್ಟು ಅಸಹ್ಯ ಲೈಂಗಿಕ ಪ್ರತಿಮೆ, ಸಂಕೇತ, ಹಾವಭಾವಗಳಿರುತ್ತವೆ. ಆಡುವ ಮೂಲಕವೇ ತೃಪ್ತಿ ಹೊಂದುವವರೋ ಎನ್ನುವಂತೆ ಅಂಥ ಸನ್ನೆಗಳು ಬಳಸಲ್ಪಡುತ್ತವೆ. ಜೈಲಿನ ಪ್ರಭಾವಿ ಗೂಂಡಾ ಖೈದಿಗಳಿಗೆ ಬೇರೆ ಬೇರೆ ಸೆಲ್‌ಗಳಿಂದ, ಬ್ಯಾರಕ್‌ಗಳಿಂದ ಹುಡುಗರನ್ನು ಕೆಲವೊಮ್ಮೆ ಸಿಬ್ಬಂದಿಯೇ ಸಪ್ಲೈ ಮಾಡುವುದೂ ಇದೆಯಂತೆ!

ರಾಮಚಂದ್ರ ಸಿಂಗ್ ಗಮನಿಸಿರುವಂತೆ ಜೈಲಿನಲ್ಲೂ ಜಾತಿ ಕೆಲಸ ಮಾಡುತ್ತದೆ. ಗುಡಿಸುವ, ಒರೆಸುವ, ಶೌಚಾಲಯ ಬಳಿಯುವ, ಚರಂಡಿ ತೊಳೆಯುವ ‘ಕೀಳು’ ಕೆಲಸಗಳನ್ನು ತಳಸಮುದಾಯದ, ಬಡ ಖೈದಿಗಳಿಂದ ಮಾಡಿಸಲಾಗುತ್ತದೆ. ಹಲ್ಲೆ–ಕೊಲೆ ಎಸಗಿ ಜೈಲು ಪಾಲಾಗಿರುವ ಪುರೋಹಿತರು, ಸಿರಿವಂತ ಜಮೀನ್ದಾರರಾಗಿದ್ದವರು ವಾರ್ಡರ್‌ಗೆ ತಲೆ ಲೆಕ್ಕ ಹಾಕಲು ಸಹಾಯ ಮಾಡುವುದು, ವಾಚ್‌ಮನ್‌ಗಳಿಗೆ ಸಹಾಯ ಮಾಡುವುದು, ಲೆಕ್ಕ ಇಡುವುದರಲ್ಲಿ ಸಹಾಯ ಮಾಡುವುದು, ಕೈದಿಗಳ ಸುದ್ದಿ ಸಂಗ್ರಹಿಸಿ ಹೇಳುವುದು ಮುಂತಾದ ಪ್ರಭಾವಿ ಕೆಲಸಗಳನ್ನು ಮಾಡುತ್ತಾರೆ. ಒಂದು ದಿನ ಒಬ್ಬ ಬ್ರಾಹ್ಮಣ ಅಪರಾಧಿ ಹೂ ಕೊಯ್ದು ಜೈಲರನ ಎದುರಿಗಿಟ್ಟು, ಮಂತ್ರ ಹೇಳಿ ಆಶೀರ್ವದಿಸಿ, ತನಗೆ ಬರುವುದು ಇದೊಂದೇ ಕೆಲಸ; ತನಗೆ ಆ ಕೆಲಸವನ್ನೇ ಕೊಡಬೇಕೆಂದು ಪ್ರಾರ್ಥಿಸಿದ. ತಗೋ, ಆತನಿಗೆ ಜೈಲಿನ ದೇವರುಗಳ ಪೂಜಿಸುವ ಕೆಲಸ ಸಿಕ್ಕೇಬಿಡುತ್ತದೆ !

ಭಾರತೀಯ ಸಮಾಜದಲ್ಲಿ ಜಾತಿ ಎನ್ನುವುದು ಪರಮ ವಾಸ್ತವ. ಆ ಮಾತು ಜೈಲಿನಲ್ಲೂ ನಿಜ.

**ಸಾಕ್ಷಾತ್ಕಾರ**

ನಕ್ಸಲರು ಸಿರಿವಂತ ಜಮೀನ್ದಾರ, ರಾಜಕಾರಣಿ, ಬಂಡವಾಳಶಾಹಿ ಮತ್ತು ಪೊಲೀಸರ ಹತ್ಯೆ ಮಾಡುವುದು ವರ್ಗನಾಶದ ಒಂದು ಮಾರ್ಗವೆಂದು ನಂಬಿದರು.

ಆ ಮಾರ್ಗ ಕುರಿತು ಎದ್ದ ಭಿನ್ನಮತಗಳು ಪಕ್ಷ ಒಡೆಯಲು ಕಾರಣವಾಯಿತೇ ಹೊರತು ಸಶಸ್ತ್ರ ಹೋರಾಟಕ್ಕಿದ್ದ ಒಲವು ಕಡಿಮೆಯಾಗಲಿಲ್ಲ. ಎಂದೇ ಕೆಲವೆಡೆಗಳಲ್ಲಿ ಸಶಸ್ತ್ರ ಹೋರಾಟ ಇನ್ನೂ ಮುಂದುವರೆದಿದೆ.

ಹಿಂಸೆಯ ಆಧಾರದ ಮೇಲೆ ನಡೆಯುವ ವ್ಯವಸ್ಥೆಯನ್ನು ಬದಲಿಸಲು ಹಿಂಸೆಯೇ ಸೂಕ್ತ ಮಾರ್ಗ ಎಂದು ಕಾಣಬಹುದು. ಹಿಂಸಾತ್ಮಕ ಸಮಾಜವನ್ನು ಬೆಚ್ಚಿ ಬೀಳಿಸಿ, ಗಾಬರಿ ಹುಟ್ಟಿಸಿ, ದಾರಿಗೆ ಬರುವಂತೆ ಮಾಡಲು ಹಿಂಸಾಮಾರ್ಗವೇ ಸುಲಭ ಎನಿಸಬಹುದು. ಆದರೆ ಹಿಂಸೆಯ ಗಿಡವನ್ನು ಯಾರು ನೆಟ್ಟರೂ ಅದರ ಫಲ ಅಮೃತವಾಗಿರುವುದಿಲ್ಲ. ಇದನ್ನು ಸಿಂಗ್ ಅರಿತರು.

ಕಮ್ಯುನಿಸಂಗೆ ಕಡೆಯತನಕ ನಿಷ್ಠರಾಗಿದ್ದ ಕಾ. ಸಿಂಗ್, ಅದನ್ನು ಕಾರ್ಯರೂಪಗೊಳಿಸುವುದರಲ್ಲಿ ಇರುವ ಸೈದ್ಧಾಂತಿಕ ಲೋಪ, ದ್ವಂದ್ವಗಳನ್ನು ಮತ್ತೆಮತ್ತೆ ಪ್ರಶ್ನಿಸಿಕೊಂಡಿದ್ದಾರೆ. ಈ ಕುರಿತು ಜೈಲಿನ ಹಿರಿಯ ಕಾಮ್ರೇಡುಗಳೊಂದಿಗೆ ವಾದಿಸಿದ್ದಾರೆ. 'ವೈಯಕ್ತಿಕ ಹತ್ಯೆಗಳಿಂದ ಕ್ರಾಂತಿಯಾಗುವುದಿಲ್ಲ, ಅದು ಶೌರ್ಯ ಮತ್ತು ನಾಯಕತ್ವದ ವ್ಯಕ್ತಿ ಪೂಜೆಗೆ ಕಾರಣವಾದೀತು ಅಷ್ಟೆ ಎಂಬ ನನ್ನ ನಂಬಿಕೆಗೆ ನಾನು ಅಂಟಿಕೊಂಡಿದ್ದೆ. ಒಂದು ಕ್ರಾಂತಿ ಸಫಲವಾಗಬೇಕಾದರೆ ಜನಸಮುದಾಯಕ್ಕೆ ಸೈದ್ಧಾಂತಿಕ ವಿಚಾರ ಹರಡಿ ಜಾಗೃತಿ ಮೂಡಬೇಕು, ಕ್ರಾಂತಿ ಜನರ ಸಾಮೂಹಿಕ ಪ್ರಯತ್ನದಿಂದ ಆಗಬೇಕೇ ಹೊರತು ಬೆರಳೆಣಿಕೆಯಷ್ಟು ಕಾರ್ಯಕರ್ತರ ಅಸ್ಪಷ್ಟ, ಚದುರಿದ ಹೋರಾಟದಿಂದಲ್ಲ. ಚರಿತ್ರೆಯ ಗತಿಯನ್ನು ನಾವು ಒತ್ತಾಯದಿಂದ ಹೇರಲಾರೆವು. ಕ್ರಾಂತಿಯು ಸಂಭವಿಸುವುದಾದರೆ ಅದು ಒಂದು ಅನಿವಾರ್ಯವಾಗಿ ಬಂದೊದಗುತ್ತದೆ. ಎಂದೇ ಎಷ್ಟೇ ಸದುದ್ದೇಶವುಳ್ಳದ್ದಾಗಿದ್ದರೂ, ತಕ್ಷಣ ಗುರಿ ಮುಟ್ಟಿದ ಭ್ರಮೆ ಹುಟ್ಟಿಸಿದರೂ, ಇಡಿಯ ಸಮಾಜವನ್ನು ಬದಲಾವಣೆಗೆ ಪ್ರೇರೇಪಿಸಿ ಸಿದ್ಧಗೊಳಿಸದೆ ಹೋದಲ್ಲಿ ಎಲ್ಲ ಹತ್ಯೆ, ಬಲಿದಾನಗಳೂ ವಿಫಲವಾಗುವವು. ಆಗ ಸಮಸಮಾಜ ಎನ್ನುವುದು ಅನವರತದ ಕನಸಾಗಿಯೇ ಉಳಿಯುವುದು' ಎಂಬ ಅಭಿಪ್ರಾಯ ದಾಖಲಿಸಿದ್ದಾರೆ.

ಕಾಮ್ರೇಡ್ ಸಿಂಗ್ ಅವರಿಗೆ ಜೈಲಿನಲ್ಲಿ ಸಾಕ್ಷಾತ್ಕಾರವಾದದ್ದಕ್ಕೆ ಈ ಪುಸ್ತಕವೇ ಸಾಕ್ಷಿಯಾಗಿದೆ. ನಾಯಕತ್ವದ ಬಗೆಗಿನ ಅಸಮಾಧಾನ, ಜೈಲಧಿಕಾರಿಗಳ ಮೇಲಿನ ಸಿಟ್ಟು, ವ್ಯವಸ್ಥೆ ಬಗೆಗಿನ ಸೇಡಿನಿಂದ ಅವರಿದನ್ನು ಬರೆಯಲಿಲ್ಲ. ತನ್ನ ಅರಿವಿನ ಪಯಣದ ಭಾಗವಾಗಿ ಬರೆದಿದ್ದಾರೆ. ತಾನು ನಂಬಿದ ಸಿದ್ಧಾಂತ ಮತ್ತು ಮಾರ್ಗ ಕವಲುದಾರಿಯಲ್ಲಿ ಹೊರಳುತ್ತ ಸಂಕಷ್ಟದಲ್ಲಿ ಇರುವಾಗ ಸಿಂಗ್ ತಮ್ಮ ದ್ವಂದ್ವಗಳನ್ನು ಬರಹದ ಮೂಲಕ ಬಗೆಹರಿಸಿಕೊಂಡಿದ್ದಾರೆ. ಜೈಲುವ್ಯವಸ್ಥೆಯ ಹಿಂಸೆಯನ್ನು ಪ್ರಶ್ನಿಸುತ್ತಲೇ, ನಕ್ಸಲರು ಎಸಗುವ ಹಿಂಸೆಯನ್ನೂ ನೆನೆಯುತ್ತಾರೆ. ನಕ್ಸಲ್ ಹೋರಾಟದ ಹೆಸರಿನಲ್ಲಿ ಸಂಘಟನೆಯ ಒಳನುಸುಳಿದ ಢಕಾಯಿತರು, ಕಳ್ಳರು, ವೈಯಕ್ತಿಕ ದ್ವೇಷ ಸಾಧನೆಗೆ ಬರುವವರಿಂದ ಕ್ರಾಂತಿಯ ಗುರಿ ದೂರಾಗುತ್ತ ಹೋಗಿರುವುದನ್ನು ವಿಷಾದದಿಂದ ಗಮನಿಸುತ್ತಾರೆ. ಅವರೊಡನೆ ಜೈಲು ಸೇರಿದ ಬಖೌರಾ ಪ್ರಕರಣದ ಮುಖ್ಯ ಆರೋಪಿ, ಮರಣದಂಡನೆ ಪಡೆದ ಸಹಚರಿ ಸತ್ಯಪಾಲ ಕೊನೆಗೆ




'ಸತ್ಯಪಾಲ ಬಾಬಾ' ಆಗಿದ್ದನ್ನು ವಿಷಣ್ಣರಾಗಿ ದಾಖಲಿಸಿದ್ದಾರೆ. ಜೈಲೊಳಗಿನ ಖೈದಿಗಳ 'ದೇವಗುರು'ವಾಗಿ, ಯಾರ್ಯಾರೊಡನೆಯೋ ಕೈಜೋಡಿಸಿ ತತ್ವಕ್ಕೆ ವಿರುದ್ಧವಾಗಿ ನಡೆದ ಮಾಜಿ ಕ್ರಾಂತಿಕಾರಿಯ ಅವಕಾಶವಾದಿತನಕ್ಕೆ ಸಿಂಗ್ ಕಾರಣ ಹುಡುಕುತ್ತಾರೆ.

ಇಂಥ ಸೂಕ್ಷ್ಮ ಸಂಗತಿಗಳನ್ನು ಪ್ರಾಮಾಣಿಕವಾಗಿ ದಾಖಲಿಸಿರುವ ಕಾರಣಕ್ಕೆ ಸಿಂಗ್, ಕಠೋರ ಸಿದ್ಧಾಂತಿಯಂತೆ ಕಾಣದೆ ಮಾನವೀಯ ಗುಣವುಳ್ಳ ಸಾಮಾಜಿಕ ಕಾರ್ಯಕರ್ತನಂತೆ ಕಾಣಿಸುತ್ತಾರೆ.

**ಸಮಸಮಾಜದ ಕನಸು**

*ನಿನ್ನ ಎರಡು ಕಣ್ಣುಗಳು*
*ಉಕ್ಕೇರುವ ನೋವಿನ ಕಡಲಲೆಗಳಂತೆ*
*ಬದಲಾಯಿಸೋಣ ಅಣ್ಣಾ ಈ ಜಗವ*
*ಎಷ್ಟು ಸಾಧ್ಯವೋ ಅಷ್ಟು ಬೇಗನೇ!*

**– ಗೋರಖ್ ಪಾಂಡೆ**

೧೯ನೇ ಶತಮಾನದಲ್ಲಿ ಕಾರ್ಲ್ ಮಾರ್ಕ್ಸ್ ಬಿತ್ತಿದ ಸಮಸಮಾಜದ ಕನಸು ವಿಶ್ವಾದ್ಯಂತ ಅಸಂಖ್ಯ ಕನಸುಗಾರರನ್ನೂ, ಹೋರಾಟಗಾರರನ್ನೂ ಸೃಷ್ಟಿಸಿತು. ಮಾರ್ಕ್ಸ್‌ನ ಕನಸು ಇಡಿಯ ವಿಶ್ವವನ್ನು ಹಲವು ಬಗೆಗಳಲ್ಲಿ ಪ್ರಭಾವಿಸಿತು. ನಾನಾ ಚಳುವಳಿ, ಹೋರಾಟ, ದಂಗೆ, ಸರ್ಕಾರಗಳ ರೂಪದಲ್ಲಿ ಆ ಕನಸು ಇಂದಿಗೂ ಜೀವಂತವಾಗಿದೆ. ಭಾರತದಲ್ಲಿ ೨೦ನೇ ಶತಮಾನದ ಆದಿಭಾಗದಿಂದ ಸ್ವಾತಂತ್ರ್ಯ ಹೋರಾಟದೊಂದಿಗೇ ಕಮ್ಯುನಿಸಂನ ಬೆಳವಣಿಗೆಯೂ ಆಗಿದೆ. ೧೯೨೫ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷ ಶುರುವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗೀದಾರಿಯಾಯಿತು. ಸ್ವಾತಂತ್ರ್ಯಾನಂತರ ಕೆಲವು ರಾಜ್ಯಗಳಲ್ಲಿ ಕಮ್ಯುನಿಸ್ಟ್ ಪಕ್ಷಗಳು ದೀರ್ಘ ಆಳ್ವಿಕೆ ನಡೆಸಿದವು.

೧೯೬೦–೭೦ರ ದಶಕದಲ್ಲಿ ಭಾರತ ಹಸಿವು, ಬಡತನ, ನಿರುದ್ಯೋಗ, ಭೂಹೀನತೆಯಂತಹ ಸಾಮಾಜಿಕ ಸಮಸ್ಯೆಗಳಲ್ಲಿ ತೊಳಲುತ್ತಿರುವಾಗ, ವಿಶ್ವದ ಕಮ್ಯುನಿಸ್ಟ್ ದೇಶಗಳಲ್ಲಿ ಆಂತರಿಕ ಸಂಘರ್ಷ ಮತ್ತು ಧ್ರುವೀಕರಣ ಶುರುವಾಯಿತು. ರಷ್ಯಾ ಮತ್ತು ಚೀನಾ ಎರಡು ಬಣಗಳಾದವು. ಒಂದೆಡೆ, ಬಂಡವಾಳಶಾಹಿ ಪಶ್ಚಿಮದೊಂದಿಗೆ ಸಹಬಾಳ್ವೆ ನಡೆಸುವುದು ಅನಿವಾರ್ಯ; ಕ್ರಾಂತಿಯನ್ನು ಹೇರಲಾಗದು, ಅದು ಜನಜಾಗೃತಿಯ ಮೂಲಕ ತಾನೇ ತಾನಾಗಿ ಸಂಭವಿಸಬೇಕು ಎಂದು ಹೇಳುವ ರಷ್ಯಾ; ಇನ್ನೊಂದೆಡೆ, ಸಶಸ್ತ್ರ ಹೋರಾಟವೂ ಸೇರಿದಂತೆ ಕ್ರಾಂತಿಗೆ ಎಲ್ಲ ದಾರಿಗಳನ್ನು ಬಳಸಿಕೊಳ್ಳಬೇಕು ಎಂದು ಹೇಳುವ ಚೀನಾ ಕಮ್ಯುನಿಸ್ಟ್ ಜಗತ್ತು ಇಬ್ಭಾಗವಾಗಲು ಕಾರಣವಾದವು. ಭಾರತೀಯ ಕಮ್ಯುನಿಸ್ಟ್ ಪಕ್ಷ ಮೊದಲು ರಷ್ಯಾ ನಿಲುವನ್ನು ಬೆಂಬಲಿಸಿತು. ಆಗ ೩೨ ಜನ ನಾಯಕರು ಅದನ್ನು ವಿರೋಧಿಸಿ ಹೊರಬಂದರು. ಅವರು ೧೯೬೪ರಲ್ಲಿ ಮಾರ್ಕ್ಸ್‌ವಾದಿ ಭಾರತೀಯ ಕಮ್ಯುನಿಸ್ಟ್ ಪಕ್ಷವನ್ನು ಕಟ್ಟಿದರು. ಅದರಿಂದಲೂ ನಿರಾಸೆ ಹೊಂದಿದ ಕೆಲವರು ೧೯೬೭ರಲ್ಲಿ ಭಾರತೀಯ ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸಿಸ್ಟ್–ಲೆನಿನಿಸ್ಟ್) ಶುರುಮಾಡಿದರು. ಮಾರ್ಕ್ಸ್‌ನ ಕನಸು ನನಸಾಗಲು ಸಶಸ್ತ್ರ ಹೋರಾಟದ ಬೆಂಬಲವೂ ಬೇಕು ಎಂದು ಯೋಚಿಸುವ ಮಾರ್ಕ್ಸ್‌ವಾದಿಗಳ ಗುಂಪು ಅದು. ಅದರ ಒಂದು ಧಾರೆಯು ರೂಪಿಸಿದ ಹೋರಾಟ ನಕ್ಸಲ್‌ಬಾರಿ ಹೋರಾಟ. ನಂತರ ಸಮ ಸಮಾಜದ ಕನಸು ಹೊತ್ತವರ ಹಲವು ಗುಂಪುಗಳಾಗಿ ಕಮ್ಯುನಿಸ್ಟ್ ಪಕ್ಷಗಳು ಒಡೆಯುತ್ತ ಬಂದು ಈಗ ಕಮ್ಯುನಿಸ್ಟ್ ಧಾರೆಯ ೮೪ ಪಕ್ಷಗಳಿವೆ.

ಕಮ್ಯುನಿಸ್ಟ್ ತತ್ವಗಳಲ್ಲಿ ನಂಬಿಕೆಯಿಟ್ಟು ಅಸಮಾನ ಭಾರತವನ್ನು ಸಮಾನತೆಯ ನೆಲವಾಗಿಸಲು ಹೋರಾಡಿದವರ ದೀರ್ಘ ಚರಿತ್ರೆಯೇ ಭಾರತದಲ್ಲಿದೆ. ಭಗತ್‌ಸಿಂಗ್ ಕಾಲದಿಂದ ಇಂದಿನವರೆಗೂ ಯಾದಿ ಮುಂದುವರಿಯುತ್ತಲೇ ಇದೆ. ಆ ಸರಪಳಿಯ ಒಂದು ಕೊಂಡಿ ಕಾ. ರಾಮಚಂದ್ರ ಸಿಂಗ್. ನಾಲ್ಕೈದು ದಶಕಗಳ ಇತಿಹಾಸವಿರುವ ನಕ್ಸಲ್ ಚಳುವಳಿಯ ಕಾವು, ಏಳುಬೀಳು, ದೋಷ, ಜೈಲುಪಾಲಾದವರ ತ್ಯಾಗ, ಅವರ ಕುಟುಂಬದವರ ಸಂಕಟಗಳನ್ನು ಮಾರ್ಕ್ಸ್‌ನ ೨೦೦ನೇ ಜನ್ಮದಿನಾಚರಣೆ ವೇಳೆಗೆ ನೆನೆಯಲೇಬೇಕು. ಮಾರ್ಕ್ಸ್ ಬಿತ್ತಿದ ಕನಸು ಯಾವ ನೆಲದಲ್ಲಿ ಮೊಳೆತು ಎಂತಹ ಫಲಗಳನ್ನು ನೀಡಿತು ಎಂದು ಅವಲೋಕಿಸಲು ಇಂತಹ ಕಥನಗಳು ಆಕರವಾಗಬೇಕು.

ಕಮ್ಯುನಿಸ್ಟ್ ಕ್ರಾಂತಿಯ ಕನಸು ಭಾರತವನ್ನು ಪ್ರವೇಶಿಸಿ ೧೦೦ ವರ್ಷವಾಗುತ್ತ ಬಂತು. ಸ್ವಾತಂತ್ರ್ಯ ಬಂದು ಏಳು ದಶಕ ಸಂದವು. ಆದರೂ ಈ ನೆಲದಲ್ಲಿ ನ್ಯಾಯ ಮತ್ತು ಸಮಾನತೆ ನೆಲೆಗೊಳ್ಳಬೇಕು ಎಂದು ಬಯಸುವುದು ಬಲುತುಟ್ಟಿ ಕನಸೇ ಆಗಿದೆ. ಇಂಥ ಸಂಕಟದ ಕಾಲದಲ್ಲಿ ಕಾಮ್ರೇಡ್ ಸಿಂಗ್ ಅವರ ಬದುಕು ಪಾಠವೂ, ಸ್ಫೂರ್ತಿಯೂ ಆಗಿದೆ.

ಎಷ್ಟೋ ತರುಣ ಬದುಕುಗಳು ಕಾಡಿನಲ್ಲಿ, ಜೈಲಿನಲ್ಲಿ ಅಮಾನವೀಯ ಹಿಂಸೆ ಎದುರಿಸುತ್ತ ಕಾಲ ಕಳೆಯುವಂತಾಗುತ್ತಿರುವುದು ಒಂದು ದೇಶಕ್ಕೆ ನಾಚಿಕೆಗೇಡು. ಎಂದಾದರೂ ಒಂದು ದಿನ ಜೈಲುಗಳಿಲ್ಲವಾಗಬೇಕು; ಎಲ್ಲರಿಗೂ ಒಂದು ಮುಷ್ಟಿ ಅನ್ನ, ಕೈತುಂಬ ಕೆಲಸ ಸಿಗಬೇಕು. ಅದುವೇ ಸಮಸಮಾಜ. ಅದುವೇ ಕ್ರಾಂತಿ. ಆ ಕನಸಿನತ್ತ ಪ್ರಾಮಾಣಿಕವಾಗಿ ನಡೆದ ಕಾಮ್ರೇಡ್ ರಾಮಚಂದ್ರ ಸಿಂಗ್ ಮತ್ತವರಂಥ ಅಸಂಖ್ಯಾ ಜೀವಗಳಿಗೆ ಕೆಂಪು ವಂದನೆ.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕವಲಕ್ಕಿ ಅಂಚೆ
ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

